# ಸಮಗ್ರ ದಾಸ ಸಾಹಿತ್ಯ

ಸಂಪುಟ : ೨೫



## ಚಿದಾನಂದ ಅವಧೂತರು ಮತ್ತು ಕೆಳದಿ ವೆಂಕಣ್ಣ ಕವಿ ಕೀರ್ತನೆಗಳು

ಸಮಗ್ರ ದಾಸಸಾಹಿತ್ಯ

ಸಂಪುಟ : ೨೫

# ಚಿದಾನಂದ ಅವಧೂತರು ಮತ್ತು ಕೆಳದಿ ವೆಂಕಣ್ಣ ಕವಿ ಕೀರ್ತನೆಗಳು

*ಸಂಪಾದಕರು*

ಡಾ. ಡಿ.ಆರ್. ಪಾಂಡುರಂಗ

ಕರ್ನಾಟಕ ಸರ್ಕಾರ

**SAMAGRA DASA SAHITYA VOLUME - 25 :**
Complete Keerthanas of *Shree Chidananda Avadhootharu and Keladi Venkanna Kavi* Edited by Dr. D.R. Panduranga and published by Sri. Y.K. Muddukrishna, Director, Directorate of Kannada and Culture, Kannada Bhavana, J.C. Road, Bangalore - 560 002.

ಪುಟಗಳು : 62 + ೪೭೯


ಪ್ರಥಮ ಮುದ್ರಣ : ೨೦೦೩
ಪ್ರತಿಗಳು : ೧೨೫೦

ಬಿಡಿ ಪ್ರತಿ ಬೆಲೆ : ರೂ. ೬೦=೦೦
ಸಮಗ್ರ ಸಂಪುಟಗಳ ಬೆಲೆ : ರೂ. ೨೪೦೦=೦೦

ಮುದ್ರಣ ನಿರ್ವಹಣೆ :
ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್
೩೬, ಕನ್ನಿಂಗ್‌ಹ್ಯಾಂ ರಸ್ತೆ
ಬೆಂಗಳೂರು – ೫೬೦ ೦೫೨

ಮುದ್ರಕರು :
ಮೆ. ಡಾಟ್ಸ್
೧೨೪, ಸುಲ್ತಾನ್‌ಪೇಟೆ
ಬೆಂಗಳೂರು – ೫೬೦ ೦೫೩

# ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆ

## ಸಂಪಾದಕ ಮಂಡಳಿ

### ಕಾರ್ಯನಿರ್ವಾಹಕ ಸಂಪಾದಕರು

ಡಾ. ಶ್ರೀನಿವಾಸ ಹಾವನೂರ
ಡಾ. ಟಿ ಎನ್ ನಾಗರತ್ನ
ಪ್ರೊ. ವಸಂತ ಕುಷ್ಟಗಿ

### ಸದಸ್ಯರು

ಡಾ. ಎಂ. ಎಂ. ಕಲಬುರ್ಗಿ
ಪ್ರೊ. ಎಂ. ರಾಜಗೋಪಾಲಾಚಾರ್ಯ (ಫೆಬ್ರವರಿ '೯೮ ರವರೆಗೆ)
ಡಾ. ಕೃಷ್ಣ ಕೊಲ್ಹಾರಕುಲಕರ್ಣಿ
ಡಾ. ಮಂದಾಕಿನಿ
ಪ್ರೊ. ಸುಧಾಕರ
ಡಾ. ಬಸವರಾಜ ಸಬರದ

### ಸದಸ್ಯ ಕಾರ್ಯದರ್ಶಿ

ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

# ಮುನ್ನುಡಿ

ಹರಿದಾಸ ಸಾಹಿತ್ಯ ಕನ್ನಡ ಸಂಸ್ಕೃತಿ ಪರಂಪರೆಯ ಮಹತ್ವಪೂರ್ಣ ಭಾಗವಾಗಿದೆ. ದೇಶೀಯತೆ ಹಾಗೂ ಗೇಯತೆಗಳೆರಡನ್ನೂ ಮೇಳವಿಸಿಕೊಂಡು, ಕನ್ನಡ ಸಾಹಿತ್ಯವಾಹಿನಿಗೆ ಇದು ಹೊಸತನವನ್ನು ನೀಡಿದೆ. ಮನುಜಮತ, ಸಾಹಿತ್ಯಪಥ ಹಾಗೂ ಭಕ್ತಿಸಿದ್ಧಾಂತದ ತ್ರಿವೇಣಿಯಾಗಿರುವ ಈ ಪ್ರಜಾಸಾಹಿತ್ಯವನ್ನು ಪ್ರಜೆಗಳಿಗೆ ಮುಟ್ಟಿಸುವುದು ಪ್ರಜಾಸತ್ತಾತ್ಮಕ ಸರಕಾರದ ಆದ್ಯ ಕರ್ತವ್ಯವಾಗಿದೆ.

ಕನ್ನಡ ಭಾಷಿಕಶಕ್ತಿಯ ವಿವಿಧ ಆಯಾಮಗಳನ್ನು ಸೆಳೆದು ತೋರಿರುವ ಸಾಹಿತ್ಯ–ಸಂಗೀತಗಳ ಸಾಮರಸ್ಯವನ್ನು ಮೆರೆದಿರುವ ಈ ಸಾಹಿತ್ಯ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಮಹತ್ವವನ್ನು ತಂದುಕೊಟ್ಟಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಮಾನವಾನುಕಂಪ, ಸಮಾಜಸುಧಾರಣೆ, ಲೋಕದ ಡೊಂಕುಗಳನ್ನು ನಗೆ ವಿಡಂಬನೆಗಳ ಮೂಲಕ ತಿದ್ದುವ ಕೌಶಲ ದಾಸಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ.

ಆಧ್ಯಾತ್ಮಿಕ ಸಾಧನೆ, ಅನುಭವ – ಅನುಭಾವಗಳು ದಾಸಸಾಹಿತ್ಯದ ಪ್ರಮುಖ ಅಂಶವಾದರೂ, ಸುತ್ತಮುತ್ತಲಿರುವ ಜೀವನದ ಕಡೆಗೆ, ಮಾನವ ಸ್ವಭಾವದ ಕಡೆಗೆ ಕಣ್ಣು ಹರಿಸಿದ ಹರಿದಾಸರು ಸಾತ್ತ್ವಿಕ ಜೀವನ ನಿರ್ವಹಣೆಗೆ, ಮಾನವನ ಮೇಲ್ಮೆಗೆ, ನೈತಿಕ ಆಚರಣೆಗೆ ಒತ್ತು ನೀಡಿದವರು.

ಹರಿದಾಸ ಸಾಹಿತ್ಯ ಅಪಾರವಾದುದು ಹಾಗೂ ವೈವಿಧ್ಯವಾದುದು. ಈ ವಿಪುಲ ಸಾಹಿತ್ಯರಾಶಿಯನ್ನು ಒಂದೆಡೆ ಕ್ರೋಡೀಕರಿಸಿ, ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಕನ್ನಡ ಜನತೆಗೆ ನೀಡುತ್ತಿದೆ.

ಈ ಯೋಜನೆಗೆ ದುಡಿದ ಸಂಪಾದಕ ಮಂಡಳಿಯ ಶ್ರದ್ಧೆ ಹಾಗೂ ಮಾರ್ಗದರ್ಶನವನ್ನು, ವಿವಿಧ ಸಂಪುಟಗಳ ಸಂಪಾದಕರಾಗಿ ನಾಡಿನ ಅನೇಕ ವಿದ್ವಾಂಸರು ತೋರಿರುವ ಆಸಕ್ತಿ ಹಾಗೂ ನೆರವನ್ನು ಮತ್ತು ಈ ಸಂಪುಟದ ಸಂಪಾದಕರ ಶ್ರಮವನ್ನು ಸ್ಮರಿಸುತ್ತ ಕನ್ನಡ ಜನತೆಯ ಕೈಗೆ ಈ ಮೌಲಿಕ ಪ್ರಕಟಣೆಗಳನ್ನು ಸಂತೋಷದಿಂದ ಅರ್ಪಿಸುತ್ತೇನೆ.

ಎಸ್. ಎಂ. ಕೃಷ್ಣ
ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

# ಎರಡು ಮಾತು

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಕರ್ನಾಟಕದ ಸಾಹಿತ್ಯ, ಸಂಗೀತ, ಸಂಸ್ಕೃತಿಗಳನ್ನು ಪ್ರಭಾವಪೂರ್ಣವಾಗಿ ಸಮೃದ್ಧಿಗೊಳಿಸಿದವರು ಹರಿದಾಸರು. ಬದುಕಿನಲ್ಲಿ ನಿಷ್ಠೆ, ಸಾಹಿತ್ಯದಲ್ಲಿ ಬದುಕಿನ ತತ್ತ್ವಗಳನ್ನು ಅಡಗಿಸಿ ಜನಸಾಮಾನ್ಯರನ್ನು ಉನ್ನತ ಜೀವನದತ್ತ ಉದ್ದೀಪಿಸುವ ಮಹಾಕಾಯಕದಲ್ಲಿ ತೊಡಗಿದವರು ಹರಿದಾಸರು. ಕನ್ನಡ ಸಾಹಿತ್ಯಕ್ಕೆ ಅಪೂರ್ವ ಕೊಡುಗೆಯಾಗಿರುವ ಹರಿದಾಸ ಸಾಹಿತ್ಯ ಸಮಾಜದ ಮೌಢ್ಯವನ್ನು ಬಯಲಿಗೆಳೆದು, ಜಾತಿ, ಮತ, ಪಂಥಗಳನ್ನು ಮೀರಿ ನಿಂತ ಮಾನವೀಯ ಮೌಲ್ಯಗಳನ್ನು ಸಾಹಿತ್ಯದ ಮೂಲಕ ಅಭಿವ್ಯಕ್ತಿಸಿತು.

ಹರಿದಾಸ ಸಾಹಿತ್ಯಕ್ಕೆ ಪ್ರೇರಣೆ ಭಕ್ತಿಯಾದರೂ, ಕರ್ನಾಟಕ ಸಂಗೀತಕ್ಕೆ ಸಮೃದ್ಧಿಯನ್ನು ನೀಡಿದವರು ಹರಿದಾಸರು. ಗ್ರಾಮ್ಯ ಮತ್ತು ದೇಶ್ಯ ಶಬ್ದಗಳು ಸಾಹಿತ್ಯದ ಮುದ್ರೆಯನ್ನು ಪಡೆದ ಭಾಷೆಗೊಂದು ಪರಿಪಕ್ವತೆಯನ್ನು ತಂದುಕೊಟ್ಟವರು. ಇಂಥ ಸಾಹಿತ್ಯ ಸಂಪತ್ತನ್ನು ರಕ್ಷಿಸುವುದು ಮತ್ತು ಪ್ರಸಾರ ಮಾಡುವುದು ನಮ್ಮ ಕರ್ತವ್ಯ. ಈ ದೃಷ್ಟಿಯಿಂದ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯ ಪ್ರಕಟಣ ಯೋಜನೆಗೆ ಸಮಿತಿಯೊಂದನ್ನು ರಚಿಸಿದ್ದು, ಇದರಲ್ಲಿ ನಾಡಿನ ಅನೇಕ ವಿದ್ವಾಂಸರು ಸಂಪುಟ ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಸಂಪುಟಗಳು ಹೊರಬರಲು ಕಾರಣರಾದ ಸಂಪಾದಕ ಮಂಡಳಿಯ ಸದಸ್ಯರಿಗೆ ಹಾಗೂ ಈ ಸಂಪುಟದ ಸಂಪಾದಕರಿಗೆ ನನ್ನ ಕೃತಜ್ಞತೆಗಳು.

ದಾಸರು ತಮ್ಮ ಸಾಹಿತ್ಯದಲ್ಲಿ ಸಾರ್ವಕಾಲಿಕ ಮೌಲ್ಯಗಳನ್ನು ಉಳಿಸಿ ಹೋಗಿದ್ದಾರೆ. ನಮ್ಮ ಸಾಮಾಜಿಕ ಜೀವನವನ್ನು ರೂಪಿಸುವಲ್ಲಿ ಈ ಕೀರ್ತನೆಗಳು ಮೌಲಿಕವಾದುವು. ಕನ್ನಡ ಜನತೆ ಈ ಕೃತಿಯ ಪ್ರಯೋಜನವನ್ನು ಪಡೆದರೆ ಪಟ್ಟ ಶ್ರಮ ಸಾರ್ಥಕವಾಗುತ್ತದೆ.

**ರಾಣಿ ಸತೀಶ್**

ಕನ್ನಡ ಮತ್ತು ಸಂಸ್ಕೃತಿ ಸಚಿವರು

# ಯೋಜನೆಯನ್ನು ಕುರಿತು

ಕನ್ನಡ ಸಾಹಿತ್ಯ ಚರಿತ್ರೆಯ ಸಿರಿವಂತಿಕೆಯಲ್ಲಿ ಕೀರ್ತನ ಸಾಹಿತ್ಯದ ಕೊಡುಗೆ ವಿಪುಲವಾದುದು ; ವೈಶಿಷ್ಟ್ಯಪೂರ್ಣವಾದುದು. ಈ ಸಮಗ್ರ ಸಾಹಿತ್ಯದ ಸಂಗ್ರಹ ಮತ್ತು ಪ್ರಕಾಶನದ ಕಾರ್ಯ ಪೂರ್ಣವಾಗಿ ಆಗಿರಲಿಲ್ಲ. ಇದನ್ನು ಮನಗಂಡ ಸರ್ಕಾರ ಸಮಗ್ರ ಸಾಹಿತ್ಯ ಪ್ರಕಟಣೆಯ ಕಾರ್ಯವನ್ನು ಕೈಗೆತ್ತಿಕೊಂಡಿತು.

ಸುಮಾರು ಒಂದು ನೂರ ಮೂವತ್ತೊಂಬತ್ತು ಜನ ದಾಸರ ಸುಮಾರು ಹದಿನಾರು ಸಾವಿರ ಕೀರ್ತನೆಗಳ ಬೃಹತ್ ಸಾಹಿತ್ಯ ಸಾಮಗ್ರಿ ದೊರಕಿತು. ಹೀಗೆ ಸಾಂಪ್ರದಾಯಿಕ ರೀತಿಯಲ್ಲಿ ಸಂಗ್ರಹಿಸಿ, ಸಂಪಾದಿಸಿದ ಕೀರ್ತನ ಸಾಹಿತ್ಯವನ್ನು ಸಂಪುಟಗಳಲ್ಲಿ ಮುದ್ರಿಸುವುದು ಕಷ್ಟವೇನಾಗಿರಲಿಲ್ಲ. ಆದರೆ, ಅದನ್ನು ಮಾಹಿತಿ ತಂತ್ರಜ್ಞಾನದ ಇವತ್ತಿನ ಸಂದರ್ಭದಲ್ಲಿ ಬಹು ಉಪಯೋಗಿ ನೆಲೆಯಲ್ಲಿ ಬಹುಮಾಧ್ಯಮದಲ್ಲಿ ಹೊರತರಬೇಕೆಂಬ ಕನಸು ರೋಮಾಂಚಕಾರಿ ಅನುಭವವೇ ಸರಿ. ಇದನ್ನು ಕೃತಿ ರೂಪಕ್ಕಿಳಿಸುವ ಹಾದಿಯಲ್ಲಿ ಎದುರಾದ ತಾಂತ್ರಿಕ ಸವಾಲು ಬಹು ಕ್ಲಿಷ್ಟಕರವಾಗಿಯೇ ಕಂಡಿತು.

ದಿಟ, ಈ ಸಮಗ್ರ ಸಾಹಿತ್ಯವನ್ನು ಕೇವಲ ಮುದ್ರಣದಲ್ಲಷ್ಟೇ ಅಲ್ಲ ಆಯ್ದ ಕೀರ್ತನೆಗಳನ್ನು ಗಾಯನಕ್ಕೆ ಅಳವಡಿಸಿ, ಸಿಡಿ ಮತ್ತು ಅಂತರ್ಜಾಲದಲ್ಲಿ ಹೊರತರ ಬೇಕೆಂದಾಗ ಬಳಕೆದಾರರ ಅವಶ್ಯಕತೆಯನ್ನು ಆಧರಿಸಿ ತಯಾರಿಸುವ ಅಗತ್ಯ ಇತ್ತು. ಆದರೆ ಇವುಗಳಲ್ಲಿ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಸರ್ಚ್ ಎಂಜಿನ್ (ಹುಡುಕುವಿಕೆ) ಇಲ್ಲದಿರುವುದು ಒಂದು ತಾಂತ್ರಿಕ ಸಮಸ್ಯೆಯೇ ಆಯಿತು.

ಈ ರೀತಿಯ ಪ್ರಯತ್ನ ಕನ್ನಡ ಭಾಷೆಯಲ್ಲಿ ಹಿಂದೆಂದೂ ಆಗದಿದ್ದುದರಿಂದ ತಂತ್ರಾಂಶವನ್ನು ಹೊಸದಾಗಿಯೇ ಅಭಿವೃದ್ಧಿ ಪಡಿಸಬೇಕಾದ ಸವಾಲನ್ನು ಕೈಗೆತ್ತಿ ಕೊಳ್ಳಲಾಯಿತು. ಇದಕ್ಕಾಗಿ ಕನ್ನಡ ಗಣಕ ಪರಿಷತ್ತು, ರಾಷ್ಟ್ರೀಯ ಮಾಹಿತಿ ಕೇಂದ್ರ (ಎನ್ಐಸಿ), ಮಾಹಿತಿ ಮತ್ತು ತಂತ್ರಜ್ಞಾನ ಇಲಾಖೆ, ಮಹಾಭಾರತ ಸಂಶೋಧನಾ

ಪ್ರತಿಷ್ಠಾನ ಮುಂತಾದ ಹಲವಾರು ತಂತ್ರಾಂಶ ಸಂಸ್ಥೆಗಳೊಂದಿಗೆ ನಿರಂತರ ಸಮಲೋಚನೆ, ಚಿಂತನೆಗಳನ್ನು ನಡೆಸಲಾಯಿತು.

ಹೀಗೆ ಸಾಹಿತ್ಯ ಸಂಗ್ರಹ, ಸಂಪಾದನೆ, ಸಂಗೀತ ಸಂಯೋಜನೆ, ಧ್ವನಿಮುದ್ರಣ, ಬಹುಮಾಧ್ಯಮಕ್ಕೆ ಅಳವಡಿಸುವ ತಾಂತ್ರಿಕ ಕುಶಲತೆಯ ನಿರಂತರ ಕಾರ್ಯಾನುಷ್ಠಾನಕ್ಕೆ ಸಂಪಾದಕ ಮಂಡಳಿ ಸದಸ್ಯರು, ಸಂಪುಟ ಸಂಪಾದಕರು, ಇಲಾಖಾ ಅಧಿಕಾರಿಗಳು, ತಂತ್ರಜ್ಞರು, ಕೋರ್ ಸಮಿತಿ ಸದಸ್ಯರು, ಸಂಗೀತ ನಿರ್ದೇಶಕರು, ಗಾಯಕರು – ಈ ಎಲ್ಲರ ಪರಿಶ್ರಮ ಅಗಾಧವಾಗಿ ದೊರಕಿದೆ. ಈ ಶ್ರಮದ ಫಲವಾಗಿ ಬಹುಮಾಧ್ಯಮದಲ್ಲಿ ಸಮಗ್ರ ದಾಸ ಸಾಹಿತ್ಯ ಯೋಜನೆಯ ಬೃಹತ್ ಕಾರ್ಯ ಸಾಕಾರಗೊಂಡಿದೆ.

ಈ ವಿಪುಲ ಸಾಹಿತ್ಯವನ್ನು ಕನ್ನಡ ಅಕ್ಷರಜ್ಞಾನಿಗಳು ಪುಸ್ತಕ ರೂಪದಲ್ಲಿಯೂ, ಬಹುಗಾತ್ರದ ಸಾಹಿತ್ಯವನ್ನು ಕೈ ಅಳತೆಯ ಸಿಡಿ ರೂಪದಲ್ಲಿಯೂ ಈಗ ಪಡೆಯಬಹುದಾಗಿದೆ. ಅಲ್ಲದೆ, ಅಂತರ್ಜಾಲದ ಮೂಲಕ ವಿಶ್ವದ ಯಾವುದೇ ಮೂಲೆಯಲ್ಲಿರುವ ಆಸಕ್ತ ಜನತೆ ಕುಳಿತಲ್ಲಿಯೇ ಆರಾಮವಾಗಿ ವೀಕ್ಷಿಸುವ, ಕೇಳುವ ಹಾಗೂ ಕನ್ನಡ ಅಕ್ಷರ ಜ್ಞಾನವಿರದ ಭಾಷಿಕರು ಸಹಿತ ಸಂಗೀತವನ್ನು ಕೇಳಿ ಆಸ್ವಾದಿಸುವ ಅವಕಾಶವನ್ನು ಏಕಕಾಲದಲ್ಲಿ ಕಲ್ಪಿಸಲಾಗಿದೆ. ಪ್ರಕಾಶನದ ಇತಿಹಾಸದಲ್ಲಿಯೇ ದಾಖಲನೀಯವಾದ ಈ ಕಾರ್ಯ ಮುಂದೆ ಸರ್ಕಾರಿ ಸಂಸ್ಥೆಗಳಿಗಾಗಲಿ ಖಾಸಗಿ ಸಂಸ್ಥೆಗಳಿಗಾಗಲಿ ಮಾದರಿಯಾಗಬಹುದೆಂದು ನಂಬಲಾಗಿದೆ.

ನಮ್ಮ ಸಂಸ್ಕೃತಿಯನ್ನು ಬಿತ್ತರಿಸಲು ನಾಲ್ಕು ಗೋಡೆಗಳೊಳಗಿನ ರಂಗ ಮಂದಿರಗಳು, ವೇದಿಕೆಗಳು ಅಗತ್ಯವಿದೆ ದಿಟ. ಆದರೆ ಭವಿತವ್ಯದಲ್ಲಿ ವಿಶ್ವದ ಜನರನ್ನು ತಲಪಲು ಮತ್ತು ಮುಖ್ಯವಾಗಿ ಯುವಜನಾಂಗಕ್ಕೆ ನಮ್ಮ ಸಾಂಸ್ಕೃತಿಕ ಕ್ಷಿತಿಜದ ವಿಸ್ತಾರವನ್ನು ಪರಿಚಯಿಸಲು ಸೂಕ್ಷ್ಮ ಸಂವೇದನಾಶೀಲವಾದ ಸಾಹಿತ್ಯವನ್ನು ಬಹುಮಾಧ್ಯಮದಲ್ಲಿ ಅಳವಡಿಸುವುದು ಅತ್ಯಾವಶ್ಯಕ. ಈ ನಿಟ್ಟಿನಲ್ಲಿ ಇದೊಂದು ವಿನೂತನ ಪ್ರಯೋಗ ; ಈ ಪ್ರಯೋಗದ ಫಲ ಎಲ್ಲರಿಗೂ ಲಭ್ಯವಾಗಲೆಂಬುದು ನಮ್ಮ ಆಶಯ.

ಸಿ. ಎಸ್. ಕೇದಾರ್
ಸರ್ಕಾರದ ಕಾರ್ಯದರ್ಶಿ

# ಪ್ರಕಾಶಕರ ಮಾತು

ಕರ್ನಾಟಕದ ಧಾರ್ಮಿಕ, ಸಾಂಸ್ಕೃತಿಕ ಇತಿಹಾಸದಲ್ಲಿ ಹರಿದಾಸರ ಸ್ಥಾನ ವಿಶಿಷ್ಟವಾದದ್ದು. ಸಾವಿರಾರು ವರ್ಷಗಳಿಂದ ಭಾರತದಲ್ಲಿ ಅವಿರತವಾಗಿ ಹರಿದುಬಂದ ಜೀವನಮೌಲ್ಯಗಳನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಮುಟ್ಟಿಸಿ, ಲೌಕಿಕ ವಿಡಂಬನೆಯ ಮೂಲಕ ಅವರ ಮಾನಸಿಕ ವಿಕಾಸವನ್ನು ಯಶಸ್ವಿಯಾಗಿ ಸಾಧಿಸಿದವರು ಹರಿದಾಸರು. ಪಾಂಡಿತ್ಯ, ಲೋಕಾನುಭವಗಳ ಹಿನ್ನೆಲೆಯಿಂದಾಗಿ, ಆಡುಭಾಷೆಯ ಸೊಗಡಿನಿಂದಾಗಿ ಇವರು ಹಾಡಿದ್ದೆಲ್ಲ ಸಾಹಿತ್ಯವಾಯಿತು, ಕಾವ್ಯವಾಯಿತು, ಕೇಳುಗರನ್ನು ಸೆರೆಹಿಡಿಯಿತು. ಗೇಯಗುಣವುಳ್ಳ, ನೃತ್ಯಕ್ಕೆ ಅಳವಡುವ, ಛಂದೋಬದ್ಧವಾದ, ಜನತೆಯ ಮಧ್ಯದಲ್ಲಿಂದೇ ಸಂದರ್ಭಾನುಸಾರ ಹುಟ್ಟಿದ ಹರಿದಾಸ ಸಾಹಿತ್ಯ ವೈಶಿಷ್ಟ್ಯಪೂರ್ಣವೆನಿಸಿತು. ಕನ್ನಡ ವಾಙ್ಮಯದಲ್ಲಿ ದಾಸಸಾಹಿತ್ಯ ಒಂದು ವಿಶೇಷ ಸ್ಥಾನ ಪಡೆಯಿತು. ಹೀಗೆ ಸಾಹಿತ್ಯ, ಸಂಗೀತ ಮತ್ತು ಸಾಮಾಜಿಕ ಕ್ಷೇತ್ರಕ್ಕೆ ದಾಸಸಾಹಿತ್ಯದ ಕೊಡುಗೆ ಗಣನೀಯವಾದುದು.

ಸುಮಾರು ನೂರಮುವ್ವತ್ತೊಂಬತ್ತು ಜನ ದಾಸರು ಆಗಿಹೋಗಿದ್ದು, ಅವರ ಕೀರ್ತನೆಗಳ ಸಂಖ್ಯೆ ಸುಮಾರು ಹದಿನಾರು ಸಾವಿರಕ್ಕೂ ಅಧಿಕ. ಈವರೆಗೆ ಕೆಲವು ದಾಸರ ಕೀರ್ತನೆಗಳು ಬಿಡಿಬಿಡಿಯಾಗಿ ಪ್ರಕಟವಾಗಿವೆಯಾದರೂ, ಇನ್ನೂ ಅನೇಕ ದಾಸವರೇಣ್ಯರ ಕೀರ್ತನೆಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದುಕೊಂಡಿವೆ. ಅವುಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಿಸಿ, ಸಮಗ್ರ ದಾಸಸಾಹಿತ್ಯವು ಕನ್ನಡಿಗರಿಗೆ ಒಂದೆಡೆ ಲಭ್ಯವಾಗುವಂತೆ ಮಾಡುವ ಉದ್ದೇಶದಿಂದ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸಮಗ್ರ ದಾಸಸಾಹಿತ್ಯ ಪ್ರಕಟನೆಯ ಬೃಹತ್ ಯೋಜನೆಯನ್ನು ಹಾಕಿಕೊಂಡಿದೆ. ಈ ಉದ್ದೇಶಕ್ಕಾಗಿ ಕಾರ್ಯನಿರ್ವಾಹಕ ಸಂಪಾದಕರಾದ ಡಾ. ಶ್ರೀನಿವಾಸ ಹಾವನೂರ, ಡಾ. ಟಿ. ಎನ್. ನಾಗರತ್ನ, ಪ್ರೊ. ವಸಂತ ಕುಷ್ಟಗಿ, ಡಾ. ಎಂ. ಎಂ. ಕಲಬುರ್ಗಿ, ಸದಸ್ಯರಾದ ಡಾ. ಬಸವರಾಜ ಸಬರದ, ಪ್ರೊ. ಸುಧಾಕರ, ಡಾ. ಕೃಷ್ಣಕೊಲ್ಹಾರಕುಲಕರ್ಣಿ, ದಿವಂಗತ ಡಾ. ಮಂದಾಕಿನಿ, ಹಾಗೂ ದಿವಂಗತ ಪ್ರೊ. ಎಂ. ರಾಜಗೋಪಾಲಾಚಾರ್ಯ ಅವರನ್ನೊಳಗೊಂಡಂತೆ ಸಂಪಾದಕ ಸಮಿತಿಯನ್ನು ರಚಿಸಲಾಯಿತು. ಇಲಾಖಾ ನಿರ್ದೇಶಕರು ಸಮಿತಿಯ ಸದಸ್ಯ-ಕಾರ್ಯದರ್ಶಿಗಳಾಗಿರುತ್ತಾರೆ. ಇದರಲ್ಲಿ ನಾಡಿನ ಅನೇಕ ವಿದ್ವಾಂಸರ ನೆರವನ್ನು ಬಳಸಿಕೊಳ್ಳಲಾಗುತ್ತಿದೆ.

ಈ ಯೋಜನೆಯನ್ವಯ 'ಸಮಗ್ರ'ವಾಗಿ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಪ್ರಕಟಿಸುವುದಿದ್ದರೂ, ಕೆಲವು ಹರಿದಾಸರ ರಚನೆಗಳು ಬಿಟ್ಟು ಹೋಗಿರುವ ಸಾಧ್ಯತೆ ಇರುತ್ತದೆ. ಅಂಥ ಹರಿದಾಸರ ಕೀರ್ತನೆಗಳು ದೊರೆತಲ್ಲಿ ಮುಂದೆ ಪರಿಷ್ಕರಣ ಸಂದರ್ಭದಲ್ಲಿ ಪ್ರಕಟಿಸಲು ಕ್ರಮಕೈಗೊಳ್ಳಲಾಗುವುದು.

ಸಮಗ್ರ ದಾಸಸಾಹಿತ್ಯ ಯೋಜನೆಯಡಿ ಪ್ರಕಟವಾಗುತ್ತಿರುವ ಆಯಾ ಸಂಪುಟಗಳ ಸಂಪಾದಕರಿಗೆ ಹಾಗೂ ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಸಂಪಾದಕ ಮಂಡಳಿಯವರಿಗೆ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರಾದ ಶ್ರೀ ಕೆ.ಸಿ. ರಾಮಮೂರ್ತಿ, ಶ್ರೀ ಸಿ. ಸೋಮಶೇಖರ ಅವರಿಗೆ, ಜಂಟಿ ನಿರ್ದೇಶಕರಾದ ಶ್ರೀ ಕಾ.ತ. ಚಿಕ್ಕಣ್ಣ ಅವರಿಗೆ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಹಾಗೂ ಡಾ. ಮಂಜುಳ ಅವರಿಗೆ ಕೃತಜ್ಞತೆಗಳು.

ಹರಿದಾಸರ ಕೀರ್ತನೆಗಳನ್ನು ಆಯ್ದು ಸಂಗೀತಕ್ಕೆ ಆಯ್ಕೆ ಮಾಡಲು ನೆರವಾದ ಶ್ರೀ ವಿನಾಯಕ ತೊರವಿ, ಶ್ರೀ ಮೈಸೂರು ಸುಬ್ರಮಣ್ಯಂ, ಶ್ರೀ ಆರ್. ಕೆ. ಪದ್ಮನಾಭ, ಶ್ರೀ ಬಾನಂದೂರು ಕೆಂಪಯ್ಯ ಹಾಗು ಶ್ರೀಮತಿ ಮಾಲತಿ ಶರ್ಮರವರಿಗೆ, ಸಂಗೀತ ನಿರ್ದೇಶಕರಿಗೆ ಹಾಗೂ ಗಾಯಕರಿಗೆ ಕೃತಜ್ಞತೆಗಳು.

ಸಂಪುಟಗಳನ್ನು ಮುದ್ರಣಕ್ಕೆ ಅನುಗೊಳಿಸುವ ಕಾರ್ಯ ನಿರ್ವಹಿಸಿದ ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಅನಂತ ಪದ್ಮನಾಭರಾವ್ ಮತ್ತು ಪ್ರೊ. ನಾ. ಗೀತಾಚಾರ್ಯ ಇವರಿಗೂ ಸಹ ಕೃತಜ್ಞತೆಗಳು.

ಈ ಸಮಗ್ರ ದಾಸಸಾಹಿತ್ಯ ಸಂಪುಟಗಳ ಮುದ್ರಣ ಕಾರ್ಯವನ್ನು ನಿರ್ವಹಿಸಿದ ಎಂ.ಎಸ್.ಐ.ಎಲ್. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಾದ ಶ್ರೀ ಅಶೋಕ್ ವಿ. ಡೇವಿಡ್ ಹಾಗೂ ವಿಶೇಷಾಧಿಕಾರಿಗಳಾದ ಶ್ರೀ ಎಂ. ರವಿಶಂಕರ್ ಅವರಿಗೆ ನನ್ನ ಕೃತಜ್ಞತೆಗಳು. ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸುವುದು ಹರಿದಾಸರಿಗೂ ಕನ್ನಡ ಜನತೆಗೂ ನಾವು ಸಲ್ಲಿಸಬೇಕಾದ ಸೇವೆಯೆಂದು ಭಾವಿಸಿದ್ದೇನೆ. ಪಂಡಿತ ಪಾಮರರನ್ನು ಏಕ ಕಾಲಕ್ಕೆ ಆಕರ್ಷಿಸಬಲ್ಲ ವಿಶಿಷ್ಟ ಸಾಮರ್ಥ್ಯ ದಾಸಸಾಹಿತ್ಯದ್ದು ಎಂದರೆ ತಪ್ಪಾಗಲಾರದು. ಕನ್ನಡ ಜನತೆಯು ಈ ಪ್ರಕಟನೆಯ ಸದುಪಯೋಗ ಪಡೆದುಕೊಂಡೀತು ಎಂದು ಆಶಿಸಿದ್ದೇನೆ.

ವೈ. ಕೆ. ಮುದ್ದುಕೃಷ್ಣ
ನಿರ್ದೇಶಕರು

# ಸಂಪಾದಕ ಮಂಡಳಿಯ ನುಡಿ

ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ದಾಸಸಾಹಿತ್ಯವೂ ಒಂದು. ಓದಲಾರದ ಕನ್ನಡ ಜನಕ್ಕೆ ಪಂಪನಂತಹ ಪ್ರೌಢಕವಿಗಳು ಗೊತ್ತಿರಲಿ ಬಿಡಲಿ, ದಾಸರ ಹಾಡುಗಳು ಗೊತ್ತಿಲ್ಲದವರು ಮಾತ್ರ ಅಪರೂಪ. ಜನರ ಮೇಲೆ ನಿರಂತರ ಪ್ರಭಾವವನ್ನು ಬೀರುವ ಜನಸಮ್ಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು. ಇಂತಹ ದಾಸರ ಹಾಡುಗಳು ಜ್ಞಾನಸಂಪದ ಹಾಗೂ ಭಕ್ತಿಸಂಪದಗಳ ಸಾರ್ವತ್ರಿಕ ಹಬ್ಬುಗೆಗೆ ಸಾಧನವಾಗಿ ಪರಿಣಮಿಸಿವೆ.

ಕನ್ನಡ ನಾಡಿನಾದ್ಯಂತ ಎಲ್ಲ ಸ್ತರಗಳಲ್ಲಿ ವರ್ಗ-ವರ್ಣಗಳ ಭೇದವಿಲ್ಲದೆ, ಜನರ ಬಾಯಲ್ಲಿ ಉಳಿದುಕೊಂಡು ಬಂದ ಈ ಸಾಹಿತ್ಯವನ್ನು ಮೊಟ್ಟಮೊದಲಿಗೆ ಪ್ರಕಟಿಸಿದ ಶ್ರೇಯಸ್ಸು ಬಾಸೆಲ್ ಮಿಶನ್ನಿನ ರೆ. ಹರ್ಮನ್ ಮೊಗ್ಲಿಂಗ್‌ರಿಗೆ ಸೇರುತ್ತದೆ. ಇವರು ತಮ್ಮ ಇಲ್ಲಿಯ ವಾಸ್ತವ್ಯದಲ್ಲಿ (೧೮೩೬ರಿಂದ), ನಾಲ್ಕುನೂರಕ್ಕೂ ಮಿಕ್ಕಿದ ದಾಸರ ಪದಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿಯ ಒಂದು ನೂರು ಪದಗಳ ಸಂಗ್ರಹವನ್ನು 'ದಾಸರ ಪದಗಳು' ಎಂಬ ಹೆಸರಿನಿಂದ ಕ್ರಿ. ಶ. ೧೮೫೦ರಲ್ಲಿ, ಮತ್ತೆ ಕ್ರಿ.ಶ. ೧೮೫೨ರಲ್ಲಿ ೧೭೪ ಪದಗಳುಳ್ಳ ಸಂಕಲನವನ್ನು ಮಂಗಳೂರಿನಲ್ಲಿ ಕಲ್ಲಚ್ಚಿನಲ್ಲಿ ಛಾಪಿಸಿ ಪ್ರಕಟಿಸಿದರು. ಈ ವಿಷಯವನ್ನು ೧೮೭೩ರಲ್ಲಿ ಪ್ರಕಟವಾದ ಇಂಡಿಯನ್ ಎಂಟಿಕ್ವೆರಿಯ 'On the Karnataka Vaishnava Dasas' – ಎಂಬ ತಮ್ಮ ಲೇಖನದಲ್ಲಿ ರೆ. ಕಿಟೆಲ್ಲರು ಕಾಣಿಸಿದ್ದಾರೆ. ಇದರಿಂದ ಕಿಟೆಲ್‌ರಂಥವರು ಕೂಡ ದಾಸರ ಪದಗಳ ಮಹತ್ವವನ್ನು ಮತ್ತು ಜನಪ್ರಿಯತೆಯನ್ನು ಗುರುತಿಸಿದ್ದರು ಎಂಬುದು ಗೊತ್ತಾಗುತ್ತದೆ. ಪ್ರಾಸಂಗಿಕವಾಗಿ ಇದುವೆ ದಾಸಸಾಹಿತ್ಯದ ಕುರಿತಾದ ಮೊದಲ ಲೇಖನವೂ ಆಗಿದೆ.

ಅನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಜನರು ಕೆಲಸವನ್ನು ಮುಂದುವರಿಸಿದರು. ರೆ. ಮೊಗ್ಲಿಂಗರ 'ದಾಸರ ಪದಗಳು' ಇದರ ದ್ವಿತೀಯ ಆವೃತ್ತಿಯನ್ನು ೧೮೭೧ರಲ್ಲಿ ಜಾನ್ ಗ್ಯಾರೆಟರ ಸೂಚನೆಯ ಮೇರೆಗೆ ಹೊಳಕಲ್ಲು ನರಸಿಂಹಯ್ಯನವರು ಬೆಂಗಳೂರಿನಿಂದ ಪ್ರಕಟಿಸಿದರು. ೧೮೭೩ರಲ್ಲಿ ಹಿಂದೂ ಭಾಷಾ ಸಂಜೀವಿನೀ ಮುದ್ರಣ ಶಾಲೆಯಲ್ಲಿ 'ಹರಿಭಜನೆ, ಕೀರ್ತನೆ' ಎಂಬ ಸಂಗ್ರಹ ಪ್ರಕಟವಾಯಿತು. ೧೮೯೦ನೆ ದಶಕದಲ್ಲಿ ಬೆಳಗಾವಿಯ ಆಬಾಜಿ ರಾಮಚಂದ್ರ ಸಾವಂತ ಇವರು ದೇವನಾಗರಿ ಲಿಪಿಯಲ್ಲಿ "ದಾಸರ ಪದಗಳ ಸಂಗ್ರಹವು" ಎಂಬುದಾಗಿ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಆ ದಶಕದಲ್ಲಿಯೇ ಮಡಕಶಿರಾದ ಬಾಲಕೃಷ್ಣರಾಯರು ೧೮೯೪ರಲ್ಲಿ 'ಪುರಂದರ ದಾಸರು ಮೊದಲಾದ ಅಪರೋಕ್ಷ ಜ್ಞಾನಿಗಳ ಪದಗಳು' ಎಂಬ ಪುಸ್ತಕವನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದ್ದು ಗಮನಾರ್ಹವಾಗಿದೆ. ಮತ್ತೆ ೧೯೦೮ರಲ್ಲಿ ಅವರೇ ಇನ್ನೊಂದು ಸಂಕಲನವನ್ನೂ ಪ್ರಕಟಿಸಿದ್ದಾರೆ.

ಹೀಗೆ ೧೮೫೦ರಷ್ಟು ಹಿಂದೆಯೇ ಪ್ರಾರಂಭವಾದ ದಾಸರ ಪದಗಳ ಸಂಗ್ರಹ ಹಾಗೂ ಪ್ರಕಟಣೆಯ ಕಾರ್ಯಕ್ಕೆ ಒಂದು ವ್ಯವಸ್ಥಿತ ರೂಪವನ್ನು ಕೊಟ್ಟು, ನಾಡಿನಾದ್ಯಂತ ಹರಿದು ಹಂಚಿಹೋದ, ಜನರ ಬಾಯಲ್ಲಿ ಉಳಿದುಕೊಂಡು ಬಂದ ವಿವಿಧ ದಾಸರ ಪದಗಳನ್ನು ಸಂಗ್ರಹಿಸಿ ಪ್ರಕಟಿಸಲು ಪ್ರಾರಂಭಿಸಿದವರು ಉಡುಪಿಯ ಪಾವಂಜೆ ಗುರುರಾಯರು. ಅವರು ೧೯೧೪ರಲ್ಲಿ ಪ್ರಕಟಿಸಿದ ಮೊದಲ ಸಂಕಲನದ ಹೆಸರು 'ಉದಯರಾಗವು' ಎಂಬುದು. ಅನಂತರದ ದಿನಗಳಲ್ಲಿ ಪುರಂದರದಾಸರ ಕೀರ್ತನೆಗಳನ್ನು ಐದು ಸಂಪುಟಗಳಲ್ಲಿ ಮತ್ತು ಉಳಿದ ದಾಸರ ಕೃತಿಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದರು. ಹೀಗೆ ನಾಡಿನ ದಕ್ಷಿಣದ ಅಂಚಿನ ಉಡುಪಿಯಲ್ಲಿ ಪ್ರಾರಂಭವಾದ ಕೆಲಸವನ್ನು ಉತ್ತರದ ಅಂಚಿನ ಲಿಂಗಸುಗೂರಿನಲ್ಲಿ ಗೊರಾಬಾಳ ಹಣಮಂತರಾಯರು 'ವರದೇಂದ್ರ ಸಾಹಿತ್ಯ ಮಾಲೆ'ಯನ್ನು ಪ್ರಾರಂಭಿಸಿ ತಮ್ಮ ಇಡೀ ಜೀವನವನ್ನೇ ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗೆ ಮೀಸಲಾಗಿರಿಸಿದರು. ಇತ್ತ ಮೈಸೂರು ಭಾಗದಲ್ಲಿ ಸುಪ್ರಸಿದ್ಧ ದಾಸರ ಹಾಡುಗಳನ್ನು ತಕ್ಕಮಟ್ಟಿಗೆ ಶಾಸ್ತ್ರಶುದ್ಧವಾಗಿ ಪ್ರಕಟಿಸಲು ಸುಬೋಧ ರಾಮರಾಯರು ಮುಂದಾದರು. ಇದೇ ಬಗೆಯ ಕೆಲಸವನ್ನು ಧಾರವಾಡ ಪ್ರದೇಶದಲ್ಲಿ ನಾರಾಯಣರಾವ ಕಲಮದಾನಿ, ಹುಚ್ಚರಾವ ಬೆಂಗೇರಿ

ಹಾಗೂ ಬೆಟಗೇರಿ ಕೃಷ್ಣಶರ್ಮರು ಮಾಡಿದರು. ಇದರೊಂದಿಗೆ, ಭಜನೆಯ ದೃಷ್ಟಿಯಿಂದ ಅನುಕೂಲವಾಗುವಂತೆ ನಾಡಿನ ವಿವಿಧ ಭಾಗಗಳಲ್ಲಿ ದಾಸಸಾಹಿತ್ಯಾಸಕ್ತರು ತಮತಮಗೆ ಬೇಕಾದ ಪದಗಳ ಸಂಗ್ರಹವನ್ನು ಪ್ರಕಟಿಸತೊಡಗಿದರು. ಇದರಿಂದಾಗಿ ನಾಡಿನ ಬಹುತೇಕ ಭಾಗಗಳಲ್ಲಿ ಬೇರೆ ಬೇರೆ ದಾಸರು ಇದ್ದುದು ಮತ್ತು ಅವರು ಹಾಡುಗಳನ್ನು ಬರೆದಿದ್ದಾರೆ ಎಂಬುದು ಗಮನಕ್ಕೆ ಬಂದಿತು. ಅದು 'ದಾಸ-ಪೀಳಿಗೆ' ಯನ್ನು ಗುರುತಿಸಲು ಸಹಾಯವಾಯಿತು.

ಶ್ರೀಪಾದರಾಜರಿಂದ ಪ್ರಾರಂಭವಾದ ಕೀರ್ತನೆಗಳ ರಚನೆಯ ಸಂಪ್ರದಾಯವು ಈ ಐದುನೂರು ವರ್ಷಗಳಲ್ಲಿ ಸುಮಾರು ಮುನ್ನೂರು ಜನ ದಾಸರು ಹುಟ್ಟಿ ಮೂವತ್ತು ಸಾವಿರಕ್ಕೂ ಮಿಕ್ಕ ಕೀರ್ತನೆಗಳನ್ನು ರಚಿಸಿದ್ದಾರೆಂದರೆ ಅವುಗಳ ಮಹತ್ವ ಗೊತ್ತಾಗದೇ ಇರದು.

ಇಡಿಯಾಗಿ-ಬಿಡಿಬಿಡಿಯಾಗಿ ವ್ಯಕ್ತಿಗಳಿಂದ, ಸಂಘ ಸಂಸ್ಥೆಗಳಿಂದ ದಾಸರ ಪದಗಳು ಪ್ರಕಟವಾಗುತ್ತ ಬರುತ್ತಿರುವಾಗಲೇ ಪುರಂದರ ಕನಕದಾಸರ ಚತುಃಶತಮಾನೋತ್ಸವ ಸಂದರ್ಭಗಳಲ್ಲಿ ಅವರ ಸಮಗ್ರ ಕೃತಿಗಳು ಸರ್ಕಾರದಿಂದ ಹಾಗೂ ವಿವಿಧ ಸಂಘ ಸಂಸ್ಥೆಗಳಿಂದ ಪ್ರಕಟವಾದವು. ಆದರೆ ಸಮಗ್ರ ದಾಸಸಾಹಿತ್ಯದ ಪ್ರಕಟಣೆ ಈವರೆಗೆ ಆಗಲೇ ಇಲ್ಲವೆಂದು ಹೇಳಬಹುದು. ಇಂಥದೊಂದು ಪ್ರಯತ್ನವನ್ನು ಮೂರು ದಶಕಗಳ ಹಿಂದೆ ಮೈಸೂರು ವಿಶ್ವವಿದ್ಯಾನಿಲಯವು ಕೈಗೊಂಡಿತು. ವೈಜ್ಞಾನಿಕ ರೀತಿಯಲ್ಲಿ ಶಾಸ್ತ್ರ ಶುದ್ಧವಾಗಿ ದಾಸಸಾಹಿತ್ಯವನ್ನು ಪ್ರಕಟಿಸುವುದರ ಅಡಿಗಲ್ಲನ್ನು ಹಾಕಿದ ಶ್ರೇಯಸ್ಸು ಆ ಮಾಲೆಯ ಸಂಪಾದಕರಾಗಿದ್ದ ಡಾ. ಜಿ. ವರದರಾಜರಾವ್ ಅವರಿಗೆ ಸಲ್ಲಬೇಕು. ಇದುವರೆಗೆ ಕೆಲವು ಸಂಪುಟಗಳು ಮಾತ್ರ ಬಂದಿವೆ. ಆದರೆ ಹಸ್ತಪ್ರತಿಗಳಲ್ಲಿ ವಿಪುಲ ದಾಸಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಲ್ಲಿ ಲಿಂಗಸುಗೂರಿನಲ್ಲಿ, ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಾಗೂ ತಿರುಪತಿಯ ದಾಸಸಾಹಿತ್ಯ ಪ್ರೊಜೆಕ್ಟದಲ್ಲಿ ಕೂಡ ವಿಪುಲ ಹಸ್ತಪ್ರತಿಗಳ ಸಂಗ್ರಹವಿದೆ. ಇವರೆಲ್ಲರ ಸಹಕಾರದಿಂದ ಈಗ ಕರ್ನಾಟಕ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸಿ ಪ್ರಕಟಿಸುವ ಸಾಹಸದ ಕಾರ್ಯವನ್ನು ಮಾಡುತ್ತಿದೆ.

## ಸಂಪುಟ ಯೋಜನೆ

ದಾಸಸಾಹಿತ್ಯದ ಪರಿಷ್ಕರಣ ಕಾರ್ಯ ತುಂಬ ಜಟಿಲವಾದುದೆಂಬುದು ಸಂಪಾದಕ ಮಂಡಳಿಯ ಪ್ರಥಮ ಸಭೆಯಲ್ಲಿಯೇ ಅನುಭವಕ್ಕೆ ಬಂದಿತು. ಕಳೆದ ಐದು ಶತಮಾನಗಳಿಂದ ನಿರಂತರ ಹರಿದು ಬಂದ ದಾಸಸಾಹಿತ್ಯ ರಚನೆಯಲ್ಲಿಯ ದಾಸರ ಹಾಗೂ ದಾಸರ ಪದಗಳ ಸಂಖ್ಯಾಬಾಹುಳ್ಯವನ್ನು ಗಮನಿಸಿ ಅದಕ್ಕೊಂದು ಕಾಲಮಿತಿಯನ್ನು ಹಾಕಿಕೊಳ್ಳುವುದು ಅನಿವಾರ್ಯವಾಯಿತು. ಹಾಗೆ ದಾಸಸಾಹಿತ್ಯದ ಪ್ರಾರಂಭ ಕಾಲದಿಂದ ೧೯ನೆಯ ಶತಮಾನದ ಅಂತ್ಯದ ವರೆಗೆ ರಚಿತಗೊಂಡ ವೈದಿಕ ಪರಂಪರೆಯ ದಾಸರ ಪದಗಳನ್ನು ಸಂಗ್ರಹಿಸುವುದೆಂದು, ಅದರಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಯ ಲಭ್ಯವಿದ್ದ ಹಾಡುಗಳನ್ನು ಸೇರಿಸಿಕೊಂಡು ೩೫ ಸಂಪುಟಗಳಲ್ಲಿ ಪ್ರಕಟಿಸುವುದೆಂದು ನಿರ್ಧರಿಸಲಾಯಿತು.

ಈ ೩೫ ಸಂಪುಟಗಳನ್ನು*, ಸಂಪಾದಕ ಮಂಡಳಿಯ ಸದಸ್ಯರಲ್ಲದೆ ನಾಡಿನ ಹಲವಾರು ವಿದ್ವಾಂಸರನ್ನು ಸಂಪಾದಿಸಿ ಕೊಡಲು ಕೇಳಿಕೊಳ್ಳಲಾಯಿತು.

ಇಂಥದೊಂದು ಬೃಹತ್ ಕಾರ್ಯವನ್ನು ಕೈಗೊಂಡಾಗ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯವಾಗುತ್ತದೆ. ಅನ್ಯ ಮತ-ಪಂಥಗಳ ಟೀಕೆಗಳು ಬಂದಿದ್ದರೆ ಅಂಥ ಹಾಡುಗಳನ್ನು ಕೈಬಿಡಬೇಕು. ಒಂದೇ ಹಾಡು ಇಬ್ಬರು ದಾಸರ ಅಂಕಿತದಲ್ಲಿ ಪ್ರಚಲಿತದಲ್ಲಿದ್ದರೆ, ಎರಡೂ ಕಡೆಗೆ ಅವುಗಳನ್ನು ಕೊಟ್ಟು ಕೆಳಗೆ 'ಈ ಕೀರ್ತನೆ . . . . ದಾಸರ ಅಂಕಿತದಲ್ಲೂ ಇದೆ' ಎಂದೂ ಸೂಚಿಸಬೇಕು. ದ್ವೈತ ಸಂಪ್ರದಾಯದ ಕೀರ್ತನೆಗಳನ್ನು ಪ್ರಕಟಿಸುವಾಗ ದೇವ-ಗುರು ತಾರತಮ್ಯವನ್ನು ಪಾಲಿಸಬೇಕು ; ಉಳಿದೆಡೆ ಗಣೇಶ ಪ್ರಾರ್ಥನೆ, ಭಗವಂತನ ನಾಮಸಂಕೀರ್ತನೆ, ಆತ್ಮನಿವೇದನೆ, ಲೋಕನೀತಿ, ತಾತ್ವಿಕ, ಕಥನಾತ್ಮಕ, ಸಂಪ್ರದಾಯ ಹಾಗೂ ವಿಶೇಷ ಹಾಡುಗಳೆಂದು ಮುಂತಾಗಿ ವಿಂಗಡಿಸಿ ಕೊಡಬೇಕು - ಎಂಬುದಾಗಿ ನಿರ್ಧರಿಸಿತು.

---

* ಇವುಗಳಲ್ಲಿ ಕೆಲವುಗಳಿಗೆ ಎರಡು ಮೂರು ಭಾಗಗಳಿವೆ.

ಪ್ರತಿಯೊಂದು ಸಂಪುಟದ ಪ್ರಾರಂಭದಲ್ಲಿ ಹಾಡುಗಳ ಪರಿವಿಡಿಯನ್ನು ಕೊಟ್ಟು ಪ್ರಸ್ತಾವನೆಯಲ್ಲಿ ಆಯಾ ದಾಸರ ಸಂಕ್ಷಿಪ್ತ ಜೀವನ ಚರಿತ್ರೆ, ಕೃತಿಗಳ ಸಮೀಕ್ಷೆ, ಶೈಲಿ ಇತ್ಯಾದಿಗಳನ್ನು ವಿವರಿಸಿ, ಗ್ರಂಥಸಂಪಾದನೆಯ ಆಕರಗಳನ್ನೂ ಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಬರುವ ಅನುಬಂಧಗಳಲ್ಲಿ ಕಠಿಣ ಶಬ್ದಗಳ ಅರ್ಥ, ಟಿಪ್ಪಣಿ ಮತ್ತು ವಿಶಿಷ್ಟ ಅಂಕಿತನಾಮಗಳ ಸೂಚಿ ಹಾಗೂ ಹಾಡುಗಳ ಅಕಾರಾದಿಯನ್ನು ಕೊಡಲಾಗಿದೆ.

ಈ ಸಂಪುಟಗಳು ಜನಪ್ರಿಯ ಆವೃತ್ತಿಗಳಾಗಿರುವುದರಿಂದ ಲಭ್ಯವಿರುವ ಪಾಠಾಂತರಗಳಲ್ಲಿ ಯೋಗ್ಯವಾದುದನ್ನು ಸ್ವೀಕರಿಸಿದೆ. ಅನ್ಯ ಪಾಠಗಳನ್ನು ಅಡಿಯಲ್ಲಿ ನಮೂದಿಸಿಲ್ಲ. ಆದರೂ ಇವು ವಿದ್ವಜ್ಜನಪ್ರಿಯ ಆವೃತ್ತಿಗಳೂ ಆಗಬೇಕೆಂಬ ರೀತಿಯಲ್ಲಿ ಈ ಸಂಪುಟಗಳನ್ನು ರೂಪಿಸಲು ಪ್ರಯತ್ನಿಸಿದ್ದೇವೆ.

## ಕೃತಜ್ಞತೆಗಳು

ಕಳೆದ ನೂರೈವತ್ತು ವರ್ಷಗಳಿಂದ ಪಾಶ್ಚಾತ್ಯ ಮಿಶನರಿಗಳಿಂದ ಹಿಡಿದು ಈ ಮೊದಲು ಉಲ್ಲೇಖಿಸಿದ ನಾಡಿನ ಅನೇಕ ವಿದ್ವಜ್ಜನರು, ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ದಾಸಸಾಹಿತ್ಯ ಕುರಿತು ನಿರಂತರ ದುಡಿದು ವಿಪುಲ ಸಾಮಗ್ರಿಯನ್ನು ಪ್ರಕಟಿಸಿದ್ದಾರೆ. ಈ ಎಲ್ಲ ವ್ಯಕ್ತಿಗಳಿಗೂ ಸಂಘ ಸಂಸ್ಥೆಗಳಿಗೂ ನಮ್ಮ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಈ ಯೋಜನೆ ಅಸ್ತಿತ್ವಕ್ಕೆ ಬಂದುದೂ ಒಂದು ವಿಶಿಷ್ಟ ಸಂದರ್ಭದಲ್ಲಿ ಎಂಬುದನ್ನು ಇಲ್ಲಿ ನಮೂದಿಸಬೇಕು. ಕರ್ನಾಟಕ ಸರ್ಕಾರವು ನಾಡಿನ ಖ್ಯಾತ ಸಂಶೋಧಕರಾದ ಡಾ. ಎಂ. ಎಂ. ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಸಮಗ್ರ ವಚನಸಾಹಿತ್ಯವನ್ನು ಪ್ರಕಟಿಸಿತಷ್ಟೇ. ಅವರೇ 'ದಾಸಸಾಹಿತ್ಯ' ಯೋಜನೆಯನ್ನು ರೂಪಿಸಿ ಶ್ರೀ ಪೇಜಾವರ ಮಠಾಧೀಶರಾದ ಶ್ರೀ ವಿಶ್ವೇಶತೀರ್ಥರ ಮೂಲಕ ಈ ಯೋಜನೆಯತ್ತ ಸರ್ಕಾರದ ಗಮನ ಸೆಳೆದರು. ಇದನ್ನು ಅರಿತ ಅಂದಿನ ಮುಖ್ಯಮಂತ್ರಿಗಳೂ ಅನಂತರ ಭಾರತದ ಪ್ರಧಾನಮಂತ್ರಿಗಳೂ ಆಗಿದ್ದ ಸನ್ಮಾನ್ಯ ಶ್ರೀ ಹೆಚ್. ಡಿ. ದೇವೇಗೌಡರು ಮುಧೋಳದಲ್ಲಿ (೧೯೯೫) ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸರ್ಕಾರವು ಸಮಗ್ರ ದಾಸಸಾಹಿತ್ಯವನ್ನು ಪ್ರಕಟಿಸಲು ಒಪ್ಪಿಕೊಂಡಿದೆ ಎಂದು ಘೋಷಿಸಿದರು.

ಅದರಂತೆ ಸರ್ಕಾರವು ಒಂಬತ್ತು ಜನರ ಸಂಪಾದಕ ಮಂಡಳಿಯನ್ನು ರಚಿಸಿತು. ಅದರಲ್ಲಿ ಡಾ. ಶ್ರೀನಿವಾಸ ಹಾವನೂರ, ಡಾ. ಟಿ.ಎನ್. ನಾಗರತ್ನ ಮತ್ತು ಸಮಿತಿಯು ಪ್ರೊ. ವಸಂತ ಕುಷ್ಟಗಿ ಅವರನ್ನು ಕಾರ್ಯನಿರ್ವಾಹಕ ಸಂಪಾದಕರೆಂದು ನಿಯಮಿಸಿತು. ಜೊತೆಗೆ ಈ ಮೊದಲು ಇಂಥ ಕಾರ್ಯವನ್ನು ಯಶಸ್ವಿಯಾಗಿ ಮಾಡಿದ ಅನುಭವಿ ಡಾ. ಎಂ. ಎಂ. ಕಲಬುರ್ಗಿ, ದಾಸಸಾಹಿತ್ಯದಲ್ಲಿ ನುರಿತ ವಿದ್ವಾಂಸರುಗಳಾದ ಪ್ರೊ. ಎಂ. ರಾಜಗೋಪಾಲಾಚಾರ್ಯ, ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ, ಡಾ. ಮಂದಾಕಿನಿ, ಪ್ರೊ. ಸುಧಾಕರ ಮತ್ತು ಡಾ. ಬಸವರಾಜ ಸಬರದ ಅವರನ್ನು ಸಂಪಾದಕ ಮಂಡಳಿಯ ಸದಸ್ಯರನ್ನಾಗಿ ನಿಯಮಿಸಿತು. ಅವರುಗಳ ನಿರಂತರ ಪರಿಶ್ರಮದ ಫಲವೇ ಈ ಸಮಗ್ರ ದಾಸಸಾಹಿತ್ಯದ ಪ್ರಕಟಣಾ ಕಾರ್ಯ. ಈ ಪ್ರಕಟಣಾ ಕಾರ್ಯದಲ್ಲಿ ಅವರುಗಳೊಂದಿಗೆ ೩೫ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಸರ್ವಶ್ರೀ ಅರಳುಮಲ್ಲಿಗೆ ಪಾರ್ಥಸಾರಥಿ, ಡಾ. ಡಿ. ಆರ್. ಪಾಂಡುರಂಗ, ಡಾ. ಅನಂತಪದ್ಮನಾಭರಾವ್, ಪ್ರೊ. ಬಿ. ಆರ್. ಕುಲಕರ್ಣಿ, ಡಾ. ಕೆ.ಜಿ. ವೆಂಕಟೇಶ್, ಪ್ರೊ. ಜಿ. ಅಶ್ವತ್ಥನಾರಾಯಣ, ಡಾ. ಕೆ. ಗೋಕುಲನಾಥ, ಡಾ. ಕೆ. ಎಂ. ಕೃಷ್ಣರಾವ್, ಶ್ರೀ ಹಣಮಂತ ತಾಸಗಾಂವಕರ್, ಪ್ರೊ. ನಾ. ಗೀತಾಚಾರ್ಯ, ಡಾ. ಸ್ವಾಮಿರಾವ್ ಕುಲಕರ್ಣಿ, ಶ್ರೀ ಹನುಮನಗೌಡ, ಶ್ರೀ ಎ. ಎನ್. ಅನಂತಸ್ವಾಮಿರಾವ್, ಶ್ರೀ ನಾರಾಯಣಾಚಾರ್ಯ ಧೂಳಖೇಡ, ಶ್ರೀ ಶಾಶ್ವತಸ್ವಾಮಿ ಮುಕ್ಕುಂದಿಮಠ, ಶ್ರೀ ಕೆ. ಎಸ್. ವೆಂಕಟೇಶ್ ಮತ್ತು ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ ಅವರುಗಳು ಹಾಗೂ ಶ್ರೀಮತಿಯರಾದ ನಳಿನಿ ವೆಂಕಟೇಶ್, ಮೀನಾರಾವ್, ಲೀಲಾವತಿ ಎಸ್. ರಾವ್, ಡಾ. ಜಯಲಕ್ಷ್ಮಿ ಮಂಗಳಮೂರ್ತಿ, ಡಾ. ಬಿ. ಆರ್. ಅಕ್ಕಮಹಾದೇವಿ, ಶೀಲಾ ದಾಸ್, ಡಾ. ರಮಾ ಕಲ್ಲೂರಕರ, ಡಾ. ಸೀತಾ ಗುಡೂರ ಕುಲಕರ್ಣಿ, ಹೆಚ್. ಎಸ್. ಪದ್ಮಾ ಮೂರ್ತಿ, ಮತ್ತು ರುಕ್ಮಿಣಿ ಗಿರಿಮಾಜಿ ಅವರುಗಳು ತುಂಬ ಶ್ರಮವಹಿಸಿ ಸಂಪುಟಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಅವರುಗಳಿಗೆ ಸಂಪಾದಕ ಮಂಡಳಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಈ ಮಧ್ಯೆ ಸಂಪಾದಕ ಸಮಿತಿಯ ಸದಸ್ಯರಲ್ಲೊಬ್ಬರಾದ ಪ್ರೊ. ಎಂ. ರಾಜಗೋಪಾಲಾಚಾರ್ಯರು ಮತ್ತು ಡಾ. ಮಂದಾಕಿನಿ ಹಾಗೂ ಸಂಪುಟ ಸಂಪಾದಕರಲ್ಲಿ ಒಬ್ಬರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿ, ಡಾ. ಕೆ.ಎಂ. ಕೃಷ್ಣರಾವ್ ಹಾಗೂ ಶ್ರೀ ಹನುಮನಗೌಡ ಮಾನ್ವಿ ಅವರು ನಮ್ಮನ್ನು ಅಗಲಿದ್ದು ದುಃಖದ ವಿಷಯವಾಗಿದೆ.

ಆಯಾ ಕಾಲದಲ್ಲಿ ಈ ಯೋಜನೆಗೆ ಸಹಕರಿಸಿದ ಹಾಗೂ ಈ ಯೋಜನೆಯ ಪರಿಕಲ್ಪನೆ ಯಶಸ್ವಿಯಾಗಿ ಕಾರ್ಯಾನುಷ್ಠಾನಕ್ಕೆ ಬರುವ ದಿಸೆಯಲ್ಲಿ ಸಹಕರಿಸಿದ ಈ ಹಿಂದಿನ ಸರ್ಕಾರದ ಮಾನ್ಯ ಮುಖ್ಯಮಂತ್ರಿಗಳಿಗೆ ಹಾಗೂ ವಿಶೇಷವಾಗಿ ಇಂದಿನ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಎಸ್. ಎಂ. ಕೃಷ್ಣ ಅವರಿಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ಅವರಿಗೆ, ಇಲಾಖೆಯ ಹಿಂದಿನ ಕಾರ್ಯದರ್ಶಿಗಳಾದ ಶ್ರೀ ಚಂದ್ರಹಾಸ ಗುಪ್ತ ಮತ್ತು ಈಗಿನ ಕಾರ್ಯದರ್ಶಿಗಳಾದ ಶ್ರೀ ಸಿ. ಎಸ್. ಕೇದಾರ್ ಅವರಿಗೆ ನಮ್ಮ ನಮನಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ಈ ಯೋಜನೆಗೆ ನೆರವಾದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಹಿಂದಿನ ನಿರ್ದೇಶಕರುಗಳು ಹಾಗೂ ಈಗಿನ ನಿರ್ದೇಶಕರಾದ ಶ್ರೀ ವೈ. ಕೆ. ಮುದ್ದುಕೃಷ್ಣ, ಜಂಟಿ ನಿರ್ದೇಶಕರಾದ ಶ್ರೀ ಕಾ. ತ. ಚಿಕ್ಕಣ್ಣ, ಸಹಾಯಕ ನಿರ್ದೇಶಕರಾದ ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ ಮತ್ತು ಡಾ. ಮಂಜುಳಾ ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ. ಈ ಕಾರ್ಯದಲ್ಲಿ ನೆರವಾದ ಎಂ. ಎಸ್. ಐ. ಎಲ್. ಸಂಸ್ಥೆಯ ಅಧಿಕಾರಿ ಹಾಗೂ ಸಿಬ್ಬಂದಿವರ್ಗಕ್ಕೆ, ವಿಶೇಷವಾಗಿ ಶ್ರೀ ಎಂ. ರವಿಶಂಕರ್, ವಿಶೇಷಾಧಿಕಾರಿ, ಅವರಿಗೆ ನಮ್ಮ ವಂದನೆಗಳು ಸಲ್ಲುತ್ತವೆ.

ಇದು ಒಂದು ದೊಡ್ಡ ಯೋಜನೆ. ಇದರ ಸಂಪಾದನೆಯ ಸಮಸ್ಯೆಗಳು ದೊಡ್ಡವು. ಪಾಠಾಂತರ, ರೂಪಾಂತರ, ಪ್ರಕ್ಷಿಪ್ತತೆ ಇತ್ಯಾದಿಗಳ ಗೊಂದಲಕ್ಕೆ ಗುರಿಯಾಗುತ್ತ ಬಂದ ವ್ಯಾಪಕ ಪ್ರಮಾಣದ ಈ ದಾಸಸಾಹಿತ್ಯವನ್ನು ಒಂದೆಡೆ ಸಂಗ್ರಹಿಸುವುದು, ಪುನರುಕ್ತಿಗಳನ್ನು ಗುರುತಿಸುವುದು, ಅಂಕಿತ ಪಲ್ಲಟಗಳನ್ನು ಸರಿಪಡಿಸುವುದು, ಪ್ರಕ್ಷಿಪ್ತಗಳನ್ನು ದೂರೀಕರಿಸುವುದು, ಕೊನೆಯದಾಗಿ ಕೀರ್ತನೆಗಳನ್ನು ಶುದ್ಧೀಕರಿಸುವುದು ಎಂಥವರನ್ನೂ ಧೈರ್ಯಗೆಡಿಸುವ ಕೆಲಸ. ಹೀಗಿದ್ದೂ ದಾಸಸಾಹಿತ್ಯದ ಮೇಲಿನ ಗೌರವ ಪ್ರೀತಿಗಳು ನಮ್ಮಿಂದ ಈ ಕೆಲಸ ಮಾಡಿಸಿದೆ. ನಮ್ಮ ಶಕ್ತಿಗೆ ಮೀರಿ ಉಳಿದಿರಬಹುದಾದ ದೋಷಗಳನ್ನು ಮನ್ನಿಸಬೇಕೆಂದು ಕೋರುತ್ತೇವೆ. ಈ ಮೂವತ್ತೈದು ಸಂಪುಟಗಳನ್ನು ಸಹೃದಯ ಲೋಕಕ್ಕೆ ಅರ್ಪಿಸುತ್ತೇವೆ. ಸಮಗ್ರ ದಾಸಸಾಹಿತ್ಯವು ಸುಲಭ ಬೆಲೆಯಲ್ಲಿ ಕನ್ನಡಿಗರ ಮನೆ–ಮನಗಳಲ್ಲಿ ಬೆಳಗಲೆಂದು ಹಾರೈಸುತ್ತೇವೆ.

ಸಂಪಾದಕ ಮಂಡಳಿ

# ಪರಿವಿಡಿ

# ಪ್ರಸ್ತಾವನೆ

ದಾಸವಾಙ್ಮಯವನ್ನು ಅವಲೋಕಿಸಿದಾಗ ನಮಗೆ ಹೆಚ್ಚಾಗಿ ಕಂಡು ಬರುವವರು ದ್ವೈತ ಸಂಪ್ರದಾಯದ, ಹರಿಸರ್ವೋತ್ತಮತ್ವವನ್ನು ಒಪ್ಪುವ ಹರಿದಾಸರುಗಳು. ಇವರಲ್ಲದೆ ಶಿವಪಾರಮ್ಯವನ್ನು ಒಪ್ಪುವ ಶಿವದಾಸರು ಹಾಗೂ ಬ್ರಹ್ಮತತ್ವವನ್ನು ಸಾರುವ ಅದ್ವೈತ ದಾಸರು ಹಾಗೂ ಹರಿಹರರಲ್ಲಿ ತಾರತಮ್ಯವೆಣಿಸದ ಭಾಗವತ ದಾಸರೂ ಅಲ್ಲಲ್ಲಿ ಕಾಣಸಿಗುತ್ತಾರೆ.

ಈ ಸಂಪುಟದಲ್ಲಿ ಉಕ್ತವಾದ ಅದ್ವೈತ ದಾಸರ ಹಾಡುಗಳನ್ನು ಪೂರ್ಣ ವಾಗಿ ಅರ್ಥಮಾಡಿಕೊಳ್ಳಲು ಅದ್ವೈತ ತತ್ವಜ್ಞಾನದ ಸ್ಥೂಲ ಕಲ್ಪನೆ ಇರಬೇಕಾದುದು ಅವಶ್ಯ.

ಅದ್ವೈತ ದಾಸರು ಶಂಕರಾಚಾರ್ಯರ ತತ್ವವನ್ನು ಒಪ್ಪಿಕೊಂಡವರು. ಅದ್ವೈತವೆಂದರೆ ಎರಡಲ್ಲದ್ದು, ಅಂದರೆ 'ಒಂದೇ' ಎಂಬ ಮೂಲತತ್ತ್ವದ್ದು. ಇದನ್ನು ಮೊದಲು ಶ್ರೀ ಗೌಡಪಾದರು ಪ್ರತಿಪಾದಿಸಿದರು. ಅನಂತರ ಆಚಾರ್ಯರು ೮ನೇ ಶತಮಾನದಲ್ಲಿ ಈ ತತ್ವವನ್ನು ಪ್ರಚುರಪಡಿಸಿದರು. ಅದ್ವೈತದ ಸಾರವು 'ಬ್ರಹ್ಮ ಸತ್ಯಂ ಜಗನ್ಮಿಥ್ಯಾ' ಎಂಬ ವಾಕ್ಯದಲ್ಲಿದೆ. ಅಂದರೆ ಬ್ರಹ್ಮ ಮಾತ್ರ ಸತ್ಯ, ಈ ಜಗತ್ತು ಮಿಥ್ಯೆ. ಈ ಜೀವವು ಬ್ರಹ್ಮನಲ್ಲದೆ ಬೇರೆಯಲ್ಲ ಎಂಬ ತತ್ವವಿದು. ಈ ಜಗತ್ತು ಬ್ರಹ್ಮನಿಂದಲೇ ಹುಟ್ಟಿ ಬ್ರಹ್ಮನಲ್ಲೇ ಲಯ ವಾಗುತ್ತದೆ. ಬ್ರಹ್ಮನ ಮಾಯೆಯಿಂದ ಇಲ್ಲದಿರುವುದು ಇದ್ದಂತೆ ತೋರುತ್ತದೆ. ಮಾಯೆ ಹರಿದಾಗ ಬ್ರಹ್ಮದರ್ಶನವಾಗುತ್ತದೆ. ಜಗತ್ತಿನ ಎಲ್ಲವೂ ಬ್ರಹ್ಮಲೀಲಾ ವಿಲಾಸ. ಆತ್ಮಜ್ಞಾನಿಯಾದವನು ಬ್ರಹ್ಮನನ್ನು ಅರಿಯುತ್ತಾನೆ. ಅವಿದ್ಯೆಯಿಂದ ಜೀವನು ಹುಟ್ಟು, ಸಾವು, ಪುನರ್ಜನ್ಮಕ್ಕೆ ಒಳಗಾಗುತ್ತಾನೆ. ಇದೇ 'ಭವ ಚಕ್ರ'. ಇದಕ್ಕೆ ಹಿಂದಿನ ಕರ್ಮವು ಕಾರಣ. ಅಗ್ನಿ ನಮ್ಮೆಲ್ಲಾ ಕರ್ಮಗಳನ್ನು ಲಯ ಗೊಳಿಸುತ್ತಾನೆ. ಬ್ರಹ್ಮಜ್ಞಾನ ಪಡೆದರೆ ಜೀವಕ್ಕೆ ಶಾಶ್ವತ ಆನಂದವುಳ್ಳ ಮೋಕ್ಷ ಲಭಿಸುತ್ತದೆ. ಜೀವನದ ಅನುಭವ ಪಡೆಯುತ್ತಿರುವಾಗ ಎಲ್ಲವೂ ಸತ್ಯದಂತೆ ಕಾಣುತ್ತದೆ. ಮುಕ್ತಿಯ ಹಂತದಲ್ಲಿ ಇವೆಲ್ಲಾ ಮಿಥ್ಯೆಯೆಂಬ ಅರಿವಾಗುತ್ತದೆ.

ಶಂಕರರು ಹೇಳುವಂತೆ 'ಈ ಶರೀರ ನಾನು, ಇದು ನನ್ನದು' ಎಂದು ಅದಕ್ಕೆ ಅಂಟಿಕೊಂಡಿರುವ ಜೀವ ನಮ್ಮ ನಿಜವಾದ ಆತ್ಮವಲ್ಲ. ನಿಜವಾದ ಆತ್ಮ ನಿರ್ವಿಕಾರ ಚೈತನ್ಯ. ಅದು ಜ್ಞಾತೃಜ್ಞೇಯಗಳೆಂಬ ಭೇದಗಳಿಗೆ ಹೊರತಾದದ್ದು. ಇದು ಬುದ್ಧಿಗೆ ಮೀರಿದ್ದು. ಇದನ್ನು ಅನುಭೂತಿ ಎಂದೂ ಆರ್ಷಜ್ಞಾನ ವೆಂದೂ ಕರೆಯುತ್ತಾರೆ. ಈಶ್ವರೋಪಾಸನೆ ಅತಿ ಮುಖ್ಯವಾದದ್ದಾದರೂ ಈಶ್ವರ ಪರಮಾರ್ಥವಲ್ಲವೆಂಬುದನ್ನು ಮರೆಯಲಾಗದು. ಬ್ರಹ್ಮ ನಿತ್ಯ, ವಿಶ್ವ ಅನಿತ್ಯ. ಇವೆರಡೂ ಒಂದೇದರ್ಜೆಯವಲ್ಲ, ವಿಶ್ವ ಬ್ರಹ್ಮದಿಂದ ಬೇರೆಯಲ್ಲ. ಈಶ್ವರನೂ ಲೋಕವೂ ಬ್ರಹ್ಮದಿಂದ ಬೇರೆಯಾಗಿ ತೋರುವುದು ಮಾಯೆ ಯಿಂದ. ಹಾಗೆಯೇ ಜೀವನೂ ಬ್ರಹ್ಮದಿಂದ ಬೇರೆ ಎಂದು ತೋರುವುದಕ್ಕೂ ಮಾಯೆ ಕಾರಣ.

ಈ ತತ್ವವನ್ನು ಪ್ರತಿಪಾದಿಸುವವರಾಗಿ ಸಚ್ಚಿದಾನಂದ ಸ್ವರೂಪನಾದ ದೇವರನ್ನು ಕೀರ್ತನೆಗಳ ಮೂಲಕ ಹಾಡಿದವರು ಅದ್ವೈತ ದಾಸರು. ಇವರಲ್ಲಿ ಕೆಲವರು ಸಂಸಾರಕ್ಕೆ ವಿಮುಖರಾಗಿ ಸನ್ಯಾಸ ಧರ್ಮ ಅಥವಾ ಅವಧೂತ ಧರ್ಮದ ಮೂಲಕ ತಮ್ಮ ಬದುಕನ್ನು ಭಗವಂತನಿಗೆ ಸಮರ್ಪಿಸಿದ್ದಾರೆ. ಅವಧೂತ ಎಂದರೆ ವರ್ಣಾಶ್ರಮ ಧರ್ಮಗಳನ್ನು ತ್ಯಜಿಸಿ ಪರಮಾತ್ಮನ ಕುರಿತು ಧ್ಯಾನಾಸಕ್ತನಾದ ಯೋಗಿ. ಇವರಲ್ಲಿ ನಾಲ್ಕು ಬಗೆ.

೧. ಗೃಹಸ್ಥಾಶ್ರಮಿಯಾಗಿದ್ದುಕೊಂಡೇ ಬ್ರಹ್ಮ ಮಂತ್ರವನ್ನು ಉಪಾಸನೆ ಮಾಡುವವ ಗಾರ್ಹಸ್ಥ್ಯಾವಧೂತ.

೨. ಅಭಿಷೇಕ ವಿಧಿಯಿಂದ ಸಂಸ್ಕೃತನಾದ ಶೈವ ಸಂನ್ಯಾಸಿ–ಶೈವಾವಧೂತ.

೩. ಬ್ರಹ್ಮೋಪಾಸಕನಾದವ ಬ್ರಹ್ಮಾವಧೂತ. ಶೈವಾವಧೂತರಿಗೆ ಪೈತೃಕಾದಿ ಸರ್ವಕರ್ಮಗಳಲ್ಲಿ ಅಧಿಕಾರವಿಲ್ಲ. ೪ನೆಯ ಹಂಸಾವಧೂತ ಯಾವ ವಿಧವಾದ ಜಾತಿ ಲಾಂಛನವೂ ಇಲ್ಲದೆ ಶೋಕ ಮೋಹವರ್ಜಿತನಾಗಿ ಯಾವ ವಿಧಿ–ನಿಷೇಧಗಳಿಗೂ ಬದ್ಧನಾಗದೆ, ಯಾವ ಉದ್ಯಮವೂ ಇಲ್ಲದೆ ಸಂಕಲ್ಪರಹಿತನಾಗಿ ಪ್ರಾರಬ್ಧಗಳನ್ನು ಅನುಭವಿಸುತ್ತಾ ಸಂತುಷ್ಟಚಿತ್ತನಾಗಿ ದೇಶಾಟನೆ ಮಾಡುವುದೇ ಈತನ ಕಾರ್ಯ.

ಇಂಥ ಅವಧೂತರು ಹೆಚ್ಚಾಗಿ ಏಕಾಂತದಲ್ಲಿ ಧ್ಯಾನನಿರತರಾಗಿರುತ್ತಾರೆ. ತಾವು ಪಡೆದ ಅನುಭವ ಹಾಗೂ ಕಂಡ ದರ್ಶನವನ್ನು ಹಾಡುಗಳ

ಮೂಲಕ ಅಭಿವ್ಯಕ್ತಿಸಿದ್ದಾರೆ. ಅವರು ದೇಹ ಧಾರಣೆಗಾಗಿ 'ಉಂಛ'* ವೃತ್ತಿಯನ್ನು ಕೈಗೊಂಡು ಭಕ್ತಿಯಿಂದ ಭಗವಂತನನ್ನು ಸ್ತುತಿಸುತ್ತಾ ನೀತಿ-ಧರ್ಮಗಳ ಬೋಧನೆ ಮಾಡಿದ್ದಾರೆ. ಅವಧೂತರು ಪರಮಪುರುಷಾರ್ಥ ಸಾಧನೆಗೆ ಸಂನ್ಯಾಸಾಶ್ರಮವೇ ಯುಕ್ತವೆಂದು ತೀರ್ಮಾನಿಸಿ ಪ್ರಾಪಂಚಿಕ ಸುಖದಿಂದ ದೂರವಿರುತ್ತಾರೆ. ಅಪರೋಕ್ಷ ಜ್ಞಾನಕ್ಕಾಗಿ ಹಂಬಲಿಸಿ ಧ್ಯಾನ ನಿರತ ರಾದವರಿವರು. ಅದ್ವೈತ ದಾಸರಲ್ಲಿ ಕೆಲವರು ವಿರಕ್ತರಾದರೆ ಮತ್ತೆ ಕೆಲವರು ಸಂಸಾರದಲ್ಲಿದ್ದುಕೊಂಡು ಪರಬ್ರಹ್ಮನನ್ನು ಸ್ತುತಿಸಿದವರು. ಇವರು ಶ್ರೀ ಶಂಕರಾ ಚಾರ್ಯರು ಬೋಧಿಸಿದ ಪಂಚಾಯತನ ಪೂಜಾ ಪದ್ಧತಿಯನ್ನು ಅನುಸರಿಸಿದ ಸ್ಮಾರ್ತ ಭಾಗವತ ಸಂಪ್ರದಾಯಿಗಳಾಗಿದ್ದಾರೆ. ಭಾಗವತ ಧರ್ಮವನ್ನು ಏಕಾಂತ ಧರ್ಮವೆನ್ನುತ್ತಾರೆ. ಇದು ಏಕಾಂತ ಭಕ್ತಿಗೆ-ಹತ್ತಿರವಾದದ್ದು. ಪ್ರವೃತ್ತಿ ಪರವಾದದ್ದು. ಈ ಪ್ರವೃತ್ತಿಯ ಲಕ್ಷಣವೆಂದರೆ ಸಂಸಾರದಲ್ಲೇ ತೊಡಗಿದ್ದು ಗೃಹಸ್ಥನೋ, ಬ್ರಹ್ಮಚಾರಿಯೋ, ವಾನಪ್ರಸ್ಥನೋ ಆಗಿದ್ದು 'ಉಂಛ' ವೃತ್ತಿಯನ್ನು ಹಿಡಿದು ಸಾಧನೆಯನ್ನು ಮುಂದುವರಿಸುವುದು. ಈ ರೀತಿ ಬದುಕಿ ಹರಿ-ಹರ ಅಭೇದವನ್ನು ಸಾರುತ್ತಾ ಭಗವಂತನ ಆರಾಧನೆಯಲ್ಲೆ ತೊಡಗಿಕೊಂಡವರು.

ಇದಕ್ಕೆ ಭಿನ್ನವಾಗಿ ಮಧ್ವಾಚಾರ್ಯರಿಂದ ಪ್ರಣೀತವಾದ ದ್ವೈತ ತತ್ವವು ಶ್ರೀ ಹರಿ ಸರ್ವೋತ್ತಮತೆಯನ್ನು ಸಾರುವಂಥದು. ದ್ವೈತ ತತ್ವದ ತಿರುಳನ್ನು ಶ್ರೀ ವ್ಯಾಸರಾಯರು ಹೀಗೆ ತಿಳಿಸುತ್ತಾರೆ.

೧. ಶ್ರೀ ಹರಿಯೇ ಸರ್ವೋತ್ತಮ.
೨. ಜಗತ್ತು ಪಾರಮಾರ್ಥಿಕ ಸತ್ಯ.
೩. ಜೀವರು ಪರಸ್ಪರ ಭೇದವುಳ್ಳವರು.
೪. ಜೀವರು ಶ್ರೀಹರಿಯ ನಿತ್ಯದಾಸರು.
೫. ಜೀವರು ಉಚ್ಚ ನೀಚರೆಂಬ ತಾರತಮ್ಯ ಉಳ್ಳವರು.
೬. ಸ್ವರೂಪಾನಂದದ ಆವಿರ್ಭಾವವೇ ಮುಕ್ತಿ.
೭. ಶ್ರೀ ಹರಿಯ ಸರ್ವೋತ್ತಮತ್ವ ಮೊದಲಾದ ಮಹಾತ್ಮ್ಯಜ್ಞಾನಪೂರ್ವಕವಾದ ಉತ್ತಮ-ಭಕ್ತಿಯೇ ಮುಕ್ತಿಗೆ ಸಾಧನ.

ದ್ವೈತದಲ್ಲಿ ಭೇದವು ಪಂಚವಿಧವಾಗಿದೆ. ಅವೆಂದರೆ

---

*ಉಂಛವೃತ್ತಿ : ಬಿದ್ದಿರುವ ಕಾಳುಗಳನ್ನು ಆರಿಸಿಕೊಂಡು ಅದರಿಂದ ಜೀವನ ನಡೆಸುವ ಕ್ರಮ.

೧. ದೇವರು ಮತ್ತು ಜೀವರ ನಡುವಿನ ಭೇದ.
೨. ದೇವರು ಮತ್ತು ಜಡಪದಾರ್ಥಗಳ ಭೇದ.
೩. ಜೀವ ಮತ್ತು ಜಡ ಪದಾರ್ಥಗಳ ನಡುವಿನ ಭೇದ.
೪. ಜೀವ ಮತ್ತು ಜೀವರ ನಡುವಿನ ಭೇದ.
೫. ಬೇರೆ ಬೇರೆ ಜಡಪದಾರ್ಥಗಳ ಭೇದ.

ದೇವರೆಂದರೆ ಪುರುಷೋತ್ತಮ, ಸರ್ವಜ್ಞ, ಪ್ರಪಂಚದ ಸೃಷ್ಟಿ ಸ್ಥಿತಿ ಲಯಗಳಿಗೆ ಆತನೇ ಕಾರಣ. ಜೀವವು ಮೂಲಭೂತವಾಗಿ ವಿಷ್ಣುವಿನಿಂದ ಭಿನ್ನ, ಆತ ದೇವರೇ ಏನಲ್ಲ. ದೇವರ ಅನುಚರ ಮಾತ್ರ. ಆತನಿಗೂ ದೇವರಿಗೂ ನಡುವೆ ಇರುವ ಸಂಬಂಧವೇ ಭೇದ. ಬ್ರಹ್ಮಾ ಅಥವಾ ದೇವರೊಬ್ಬನೇ ಸ್ವತಂತ್ರ ಅಸ್ತಿತ್ವ ಉಳ್ಳವನು.

ಭಕ್ತಿ ಭಾವಕ್ಕೆ ಭೇದ ತತ್ವ ಅತಿ ಮುಖ್ಯವಾದುದು. ಪರಮಾತ್ಮ ಮತ್ತು ಮಾನವರ ನಡುವೆ ಯಾವ ಭೇದವೂ ಇಲ್ಲದಿದ್ದರೆ ಭಕ್ತಿಯ ಅವಶ್ಯಕತೆ ಯಾದರೂ ಯಾಕೆ ? ದೇವರು–ಸ್ವಾಮಿ, ಮಾನವ–ದಾಸ. ಮಾನವನ ಇರುವಿಕೆ ಮತ್ತು ಸಕಲ ಕಾರ್ಯಗಳು ಭಗವಂತನಿಗೇ ಸೇರಿವೆಯಾದ್ದರಿಂದ ಅವನನ್ನು ಭಜಿಸಿ, ಪೂಜಿಸಿ ಅವನ ಅನನ್ಯ ದಾಸನಾಗುವುದೇ ಮಾನವನ ಸರ್ವೋತ್ಕೃಷ್ಟ ಗುರಿ. ಯಾವಾತ ಆ ಗುರಿಯನ್ನು ಪಡೆಯುತ್ತಾನೋ ಆತನೇ ಧನ್ಯ. ಭಗವಂತನ ದಯೆಯಿಲ್ಲದೆ ಮೋಕ್ಷ ಲಭ್ಯವಾಗುವುದಿಲ್ಲ. ಆದ್ದರಿಂದ ಮಾನವರು ದೇವರಲ್ಲಿ ಭಕ್ತಿಯನ್ನಿಟ್ಟು ತನ್ಮೂಲಕ ಅವನ ಕೃಪೆಗೆ ಪಾತ್ರರಾಗಿ ಮೋಕ್ಷವನ್ನು ಪಡೆಯಬಹುದೆಂದು ಬೋಧಿಸಿದ ಮಧ್ವಾಚಾರ್ಯರೇ ದಾಸಪಂಥದ ತಾತ್ವಿಕತಳಹದಿ ಅಥವಾ ಅಸ್ತಿಭಾರವಾಗಿದ್ದಾರೆ.

ದ್ವೈತದಲ್ಲಿ ಹರಿಸರ್ವೋತ್ತಮ ಎಂದು ಸಾಧಿಸಲು ತಾರತಮ್ಯವನ್ನು ನಿರೂಪಿಸುತ್ತಾರೆ. ಇವರಿಗೆ ವಾಯು ಜೀವೋತ್ತಮ, ಉಳಿದ ದೇವತೆಗಳೆಲ್ಲ ನಂತರ ಬರುತ್ತಾರೆ. ಅದ್ವೈತ ದಾಸರು ದೇವತಾ ತಾರತಮ್ಯವನ್ನು ಬಗೆಯುವುದಿಲ್ಲ, ಇವರಿಗೆ ಹರಿಹರರಿಬ್ಬರೂ ಒಂದೇ. ಇವರಲ್ಲಿ ಭೇದವಿಲ್ಲ. ತಮ್ಮ ಅದ್ವೈತ ವಿಚಾರಗಳನ್ನು ಹಾಡುಗಳ ಮೂಲಕ ಸರಳವಾಗಿ ನಿರೂಪಿಸಿದ್ದಾರೆ. ಇವರ ಹಾಡುಗಳಲ್ಲಿ ನೀತಿಪ್ರದವಾದ ವಿಚಾರಗಳಲ್ಲದೆ ನಿತ್ಯ ಆಚಾರಗಳಾದ ಭಸ್ಮ, ಮಂತ್ರಧಾರಣೆ, ರುದ್ರಾಕ್ಷಿಧಾರಣೆ, ಶಿವರಾತ್ರಿ ವ್ರತಾಚರಣೆ, ಲಿಂಗರೂಪದ ಈಶ್ವರಾರ್ಚನೆ ಇಂಥ ಶೈವ–ಆಚಾರಗಳನ್ನು ಕುರಿತು ಕೃತಿ ರಚಿಸಿದ್ದಾರೆ.

ಅದ್ವೈತಿಗಳು ತಾತ್ವಿಕವಾಗಿ ನಿರ್ಗುಣ ಬ್ರಹ್ಮದ ಉಪಾಸಕರಾದರೂ ವ್ಯವಹಾರದ ನೆಲೆಗಟ್ಟಿನಲ್ಲಿ ಸಗುಣೋಪಾಸನೆಯನ್ನು ಒಪ್ಪಿಕೊಳ್ಳುತ್ತಾರೆ. ಮತ್ತು ವಿಷ್ಣು-ಶಿವರನ್ನು ಸಮ ಪ್ರಾಧಾನ್ಯದಿಂದ ಆರಾಧಿಸುತ್ತಾರೆ. ಈ ರೀತಿಯ ಆರಾಧನೆ ಭಾಗವತ ಸಂಪ್ರದಾಯದ ಲಕ್ಷಣವೂ ಆಗಿದೆ. ಇಂದಿಗೂ ವಿಶಿಷ್ಟ ವೈಷ್ಣವಾಚರಣೆಗಳನ್ನು ಅನುಸರಿಸುವ ಸ್ಮಾರ್ತ ಅದ್ವೈತಿಗಳು ತಮ್ಮನ್ನು ಭಾಗವತ ಸಂಪ್ರದಾಯಿಗಳೆಂದೇ ಕರೆದುಕೊಳ್ಳುತ್ತಾರೆ. ಈ ಹಿನ್ನೆಲೆಯಲ್ಲಿ ಕೆಳದಿ ವೆಂಕಣ್ಣನು ಭಾಗವತ ಸಂಪ್ರದಾಯಿಯಾದರೆ, ಚಿದಾನಂದಾವಧೂತರು ಶೈವ ಸಂಪ್ರದಾಯದ ಅದ್ವೈತವನ್ನು ಪ್ರತಿಪಾದಿಸುತ್ತಾರೆ.

ಕರ್ಣಾಟಕ ಕವಿಚರಿತೆಯಲ್ಲಿ ಉಕ್ತವಾದ ಪ್ರಕಾರ, ಹಲವಾರು ಕವಿಗಳು ಶಿವ ಹಾಗೂ ಆಧ್ಯಾತ್ಮ ಪರವಾದ ಹಾಡುಗಳನ್ನು ರಚಿಸಿದ್ದಾರೆ. ಕವಿಚರಿತಕಾರರು ಅವರಲ್ಲಿ 'ಚಿದಾನಂದ' ಎಂಬುವರ ಕಾಲವನ್ನು ಕ್ರಿ.ಶ. ಸುಮಾರು ೧೭೨೫ ಎಂದೂ, ಚಿದಾನಂದಾವಧೂತರ ಕಾಲವನ್ನು ಕ್ರಿ.ಶ. ೧೭೫೦ ಎಂದೂ ತಿಳಿಸಿದ್ದಾರೆ. ಇದಲ್ಲದೆ ಸು. ಕ್ರಿ.ಶ. ೧೬೭೪ರಲ್ಲಿ ದಕ್ಷಿಣ ಕನ್ನಡ ಜಿಲ್ಲೆ (ಈಗಿನ ಉತ್ತರಕನ್ನಡ ಜಿಲ್ಲೆ) ಹೊನ್ನಾವರ ತಾಲೂಕಿನ ಬೈಲೂರಿನಲ್ಲಿದ್ದ ಚಿದಾನಂದ ಎಂಬುವವನು 'ಚಿದಾನಂದ ಕೊರಡೆ' ಎಂಬ ಕೀರ್ತನ ಸಂಗ್ರಹ ರಚಿಸಿದ್ದಾನೆ. ಇವರಲ್ಲದೆ ವೆಂಕಟದಾಸ (೧೭೫೦) 'ಅಖಂಡಾನುಭವ ಸ್ವರೂಪ' ಎಂಬ ತಾತ್ವಿಕ ಹಾಡುಗಳನ್ನು ಬರೆದಿದ್ದಾನೆ. ಮೈಸೂರಿನ ಅರಸರಾಗಿದ್ದ ಮುಮ್ಮಡಿ ಕೃಷ್ಣರಾಜ ಅರಸರು (೧೮೯೪) 'ವೈರಾಗ್ಯ ಚಾವಡಿಗಳು' 'ಅನುಭವಪಂಚ' ಎಂಬ ಹಾಡುಗಳನ್ನು ಚಾಮುಂಡಿಯ ಅಂಕಿತದಲ್ಲಿ ರಚಿಸಿದ್ದಾರೆ. ಚಿದಾನಂದರ ನಂತರದಲ್ಲಿ ಹಲವು ಜನ ಹರಿದಾಸರು-ಶೈವ ಧರ್ಮ ಪ್ರತಿಪಾದಿತ ಹಾಗೂ ಶಿವಭಕ್ತಿಯನ್ನು ಸಾರುವ ಹಾಡುಗಳನ್ನು ರಚಿಸಿದ್ದಾರೆ.

## ಚಿದಾನಂದ ಅವಧೂತರು

ಚಿದಾನಂದ ಅವಧೂತರ ಕೆಲವು ಕೀರ್ತನೆಗಳನ್ನು ಈ ಮೊದಲು ಸಂಪಾದಿಸಿ ಪ್ರಕಟಿಸಿದವರು ಶಿವಮೊಗ್ಗದಲ್ಲಿರುವ ಶ್ರೀಮಾನ್ ಕೂಡ್ಲಿ ಜಗನ್ನಾಥ ಶಾಸ್ತ್ರಿಗಳವರು. ಇಲ್ಲಿ ಕೊಡಲಿರುವ ಅವರ ಜೀವನ ಚರಿತ್ರೆಯ ವಿವರ ಗಳನ್ನು ಆ ಕೃತಿಯಿಂದ ಸಂಗ್ರಹಿಸಲಾಗಿದೆ. ಶ್ರೀ ಜಗನ್ನಾಥ ಶಾಸ್ತ್ರಿಗಳು ಅದ್ವೈತ ದಾಸರ ಸಂಪುಟಕ್ಕಾಗಿ ತಮ್ಮ ಮುದ್ರಿತ ಕೀರ್ತನೆಗಳ ಪುಸ್ತಕದ ಜೊತೆಗೆ

ಉಳಿದ ಹಾಡುಗಳನ್ನೊಳಗೊಂಡ ಕೈಬರಹದಲ್ಲಿದ್ದ ಪ್ರತಿಯನ್ನು ಉದಾರವಾಗಿ ಕೊಟ್ಟಿದ್ದಾರೆ. ಅದಕ್ಕಾಗಿ ಮೊದಲು ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಚಿದಾನಂದ ಅವಧೂತರ ಪೂರ್ವನಾಮ ಝುಂಕಪ್ಪನೆಂದು. ಇವರ ತಂದೆ-ತಾಯಿಯರು ಆಂಧ್ರಪ್ರದೇಶದ ಆದವಾನಿ ತಾಲೂಕಿನ ದೊಡ್ಡ ಹರಿವಾಣ ಎಂಬ ಊರಿನಲ್ಲಿದ್ದ ಲಕ್ಷ್ಮೀಪತಿ ಹಾಗೂ ಅಣ್ಣಮ್ಮ ಎಂಬುವವರು. ಇವರಿಗೆ ಝುಂಕಪ್ಪ ಕಡೆಯ ಮಗನಾಗಿ ಕ್ರಿ. ಶ. ೧೭೦೦ ರಲ್ಲಿ ಜನ್ಮ ತಳೆದನು. ಇವನಿಗೆ ನರಸಿಂಹ, ಚೂಡಣ್ಣರೆಂಬ ಅಣ್ಣಂದಿರಿದ್ದರು. ಈತನ ಪ್ರಾಥಮಿಕ ವಿದ್ಯಾಭ್ಯಾಸ ದೊಡ್ಡ ಹರಿವಾಣದಲ್ಲಿಯೇ ನಡೆಯಿತು. ಎಂಟನೇ ವಯಸ್ಸಿಗೆ ಉಪನಯನ ವಾಯಿತು. ನಂತರದ ವೇದಾಧ್ಯಯನ ಮನೆಯಲ್ಲೇ ಆಗುತ್ತಿತ್ತು. ಝುಂಕಪ್ಪನಿಗೆ ಲೌಕಿಕಕ್ಕಿಂತಲೂ ಆಧ್ಯಾತ್ಮದ ಕಡೆಗೆ ಒಲವು ಬೆಳೆಯುತ್ತಿತ್ತು.

ಒಂದು ಸಾರಿ ಲಕ್ಷ್ಮೀಪತಿಯು ಕುಟುಂಬಸಮೇತನಾಗಿ ತಮ್ಮ ಮನೆ ದೈವತನಾದ ಶ್ರೀ ನರಸಿಂಹಸ್ವಾಮಿಯ ಸೇವೆಗಾಗಿ ಆಂಧ್ರಪ್ರದೇಶದ ಕರ್ನೂಲ ಜಿಲ್ಲೆಯಲ್ಲಿರುವ ಅಹೋಬಲಕ್ಕೆ ಬಂದಿದ್ದರು. ಅಲ್ಲಿ 'ನಾರಪ್ಪ' ಎಂಬುವವರ ಪರಿಚಯವಾಯಿತು. ಇವರು ರಾಯಚೂರು ಜಿಲ್ಲೆಯ ಗಂಗಾವತಿಯವರು. ಲಕ್ಷ್ಮೀಪತಿಯ ಬಡತನದ ವಿಚಾರವನ್ನು ತಿಳಿದು ನಾರಪ್ಪನು ಇವರನ್ನು ಗಂಗಾವತಿಗೆ ಕರೆದುಕೊಂಡು ಬಂದಿದ್ದನು. ಇಲ್ಲಿಗೆ ಸಮೀಪದ ಹೆಬ್ಬಾಳದಲ್ಲಿ ವಾರಕಾರ ಮನೆತನದ 'ಲಕ್ಷ್ಮಕ್ಕ' ಎಂಬುವವಳಿಗೆ ಸಾಕಷ್ಟು ಜಮೀನು ಇತ್ತು. ಇವರ ಮನೆಯವರೆಲ್ಲಾ ತೀರಿಹೋಗಿದ್ದುದರಿಂದಾಗಿ ಲಕ್ಷ್ಮೀಪತಿಗೆ ಆಶ್ರಯ ಕೊಡುವಂತೆ ಲಕ್ಷ್ಮಕ್ಕನನ್ನು ವಿನಂತಿಸಿದನು. ಅವಳು ತನಗೂ ಆಶ್ರಯ ವಾದೀತೆಂದು ಬಗೆದು ಒಪ್ಪಿಕೊಂಡಿದ್ದರಿಂದ ಲಕ್ಷ್ಮೀಪತಿಯು ಸಂಸಾರಸಮೇತ ಹೆಬ್ಬಾಳಕ್ಕೆ ಬಂದು ವ್ಯವಸಾಯ ಮಾಡಿಕೊಂಡು ಜೀವನ ನಡೆಸುತ್ತಿದ್ದನು. ನರಸಿಂಹ ಹಾಗೂ ಚೂಡಣ್ಣರು ತಂದೆಯ ಜೊತೆ ವ್ಯವಸಾಯಕ್ಕೆ ಸಹಕಾರ ನೀಡುತ್ತಿದ್ದರು. ಝುಂಕಪ್ಪ ಐಗಳ ಶಾಲೆಯಲ್ಲಿ ಕಲಿಯುತ್ತಿದ್ದನು. ಆ ಕಾಲದಲ್ಲಿ ಆಧ್ಯಾತ್ಮಿಕ ಒಲವು ಹೆಚ್ಚಾಗತೊಡಗಿತು. ಇದನ್ನು ಗಮನಿಸಿದ ಲಕ್ಷ್ಮಕ್ಕ ಲಕ್ಷ್ಮಿಯ ವಿಗ್ರಹವೊಂದನ್ನು ಕೊಟ್ಟು ಪೂಜೆ ಮಾಡಲು ತಿಳಿಸಿದಳು.

ಹೆಬ್ಬಾಳಕ್ಕೆ ಸಮೀಪದಲ್ಲಿ ಅಯೋಧ್ಯೆ ಎಂಬ ಊರು ಇದೆ. ಇದು ತುಂಗಭದ್ರಾನದಿಯ ದಂಡೆಯಲ್ಲಿದೆ. ಇಲ್ಲಿ 'ಚಿದಾನಂದ' ಎಂಬ ಪ್ರಸಿದ್ಧರಾದ ಸಿದ್ಧಪುರುಷರೊಬ್ಬರಿದ್ದರು. ಇವರು ಶಿವಾನಂದ ರಾಜಯೋಗಿಗಳ ಶಿಷ್ಯರು.

ಝುಂಕಪ್ಪನಲ್ಲಿದ್ದ ಆಧ್ಯಾತ್ಮಿಕ ಆಸಕ್ತಿಯನ್ನು ಗಮನಿಸಿದ ಐಗಳ ಮಠದ ಗುರುಗಳೂ, ಲಕ್ಷ್ಮಕ್ಕನೂ ಲಕ್ಷ್ಮೀಪತಿಯ ಒಪ್ಪಿಗೆಯ ಮೇರೆಗೆ ಇವನನ್ನು ಚಿದಾನಂದರ ಬಳಿಗೆ ಕಳಿಸಲು ತೀರ್ಮಾನಿಸಿದರು. ಝುಂಕಪ್ಪನು ಲಕ್ಷ್ಮೀ ವಿಗ್ರಹವನ್ನು ತಂದೆಗೆ ಕೊಟ್ಟು ಅಯೋಧ್ಯೆಗೆ ಬಂದನು. ಈ ಬಾಲಕನಲ್ಲಿದ್ದ ಆಧ್ಯಾತ್ಮಿಕ ಆಸಕ್ತಿಯನ್ನು ಗಮನಿಸಿದ ಚಿದಾನಂದರು ಇವನನ್ನು ಶಿಷ್ಯನನ್ನಾಗಿ ಪರಿಗ್ರಹಿಸಿದರು. ಈ ಬಾಲಕನ ಪೂರ್ವಾಶ್ರಮದ ಹೆಸರನ್ನು ತೆಗೆದು 'ಚಿದಾನಂದ ಅವಧೂತ' ಎಂದು ಆಶ್ರಮನಾಮವನ್ನು ಕೊಟ್ಟರು. ಕೆಲವು ವರ್ಷ ಗುರು–ಶಿಷ್ಯರ ಸಾಧನೆ ಅಯೋಧ್ಯೆಯಲ್ಲಿ ನಿರಾತಂಕವಾಗಿ ಸಾಗಿತು. ಚಿದಾನಂದ ಅವಧೂತರು ಸಾಧನೆಯ ಪಥದಲ್ಲಿ ಬಹುದೂರ ಸಾಗಿದ್ದರು. ಇವರು ಅಯೋಧ್ಯೆಯಲ್ಲಿದ್ದಾಗಲೇ 'ಜ್ಞಾನ ಸಿಂಧು', 'ಪಂಚೀಕರಣ', 'ತತ್ವ ಚಿಂತಾಮಣಿ' ಎಂಬ ಗ್ರಂಥಗಳನ್ನು ಬರೆದು ಗುರುಗಳ ಮೆಚ್ಚಿಗೆಗೆ ಪಾತ್ರರಾದರು. ಸಗುಣೋರಾಧನೆಯ ಬಗ್ಗೆ ಶಿಷ್ಯನ ಆಸಕ್ತಿಯನ್ನು ಗಮನಿಸಿದ ಗುರುಗಳು ಇವನೊಡನೆ, ಸಿದ್ಧಪರ್ವತವೆಂದು ಪ್ರಸಿದ್ಧವಾದ ಬೆಟ್ಟದ ಪ್ರದೇಶಕ್ಕೆ ಕರೆದು ತಂದರು. ಇಲ್ಲಿ ಶ್ರೀ ಬಗಳಾಮುಖಿದೇವಿಯನ್ನು ಆರಾಧಿಸಿ ಪ್ರತ್ಯಕ್ಷ ಮಾಡಿ ಕೊಂಡರೆಂದು ಹೇಳಲಾಗುತ್ತದೆ. ಈ ದೇವಿಗಾಗಿ ಒಂದು ದೇವಾಲಯವನ್ನು ನಿರ್ಮಿಸಿ ಅಲ್ಲಿ ಶಕ್ತಿದೇವತೆಯನ್ನು ಪ್ರತಿಷ್ಠಾಪಿಸಿದರು.

ಕೆಲವು ದಿನಗಳು ಕಳೆಯಲು ಗುರು ಚಿದಾನಂದರು ಮಹಾ ಸಮಾಧಿ ಯನ್ನು ಹೊಂದಿದರು. ಇವರನ್ನು ದೇವಿಯ ಸಮೀಪದಲ್ಲಿಯೇ ಸಮಾಧಿ ಮಾಡಲಾಯಿತು. (ಈಚೆಗೆ ಈ ಸಮಾಧಿಯ ಮೇಲೆ ಒಂದು ಮಂಟಪವನ್ನು ಕಟ್ಟಿದ್ದಾರೆ. ಇದನ್ನು 'ದತ್ತಾತ್ರೇಯ ಮಂಟಪ' ಎನ್ನುತ್ತಾರೆ.) ಚಿದಾನಂದ ಅವಧೂತರು ಶ್ರೀ ಬಗಳಾಂಬ ದೇವತೆಯನ್ನು ಆರಾಧಿಸುತ್ತಾ ಅಲ್ಲಿಯೇ ಇದ್ದರು. ತಮ್ಮ ಸಾಧನೆಯ ಫಲವನ್ನು ಆಧ್ಯಾತ್ಮಿಕ ವಿಚಾರಗಳನ್ನು ಜನರಿಗೆ ಹೇಳುತ್ತಾ ಅವರಲ್ಲಿ ಭಕ್ತಿ ಹಾಗೂ ಆಧ್ಯಾತ್ಮಿಕ ಒಲವನ್ನು ಬೆಳೆಸಿದರು. ಹಾಡುಗಳ ರೂಪದಲ್ಲಿ ಹೇಳುತ್ತಿದ್ದ ತತ್ವಗಳನ್ನು ಭಕ್ತರು ಶ್ರದ್ಧಾಭಕ್ತಿಯಿಂದ ಕೇಳುತ್ತಿದ್ದರು. ಮುಂದೆ ಈ ಸ್ಥಳ ಅಂಬಾಮಠ ಎಂದು ಪ್ರಸಿದ್ಧವಾಯಿತು. (ಸಿಂಧನೂರು ತಾಲ್ಲೂಕಿನಲ್ಲಿ ಈ ಸ್ಥಳವಿದೆ).

ಗಂಗಾವತಿ ತಾಲ್ಲೂಕಿನಲ್ಲಿ ಕನಕಗಿರಿ ಎಂಬ ಸ್ಥಳವಿದೆ. ಇದನ್ನು ಹದಿನೇಳನೆಯ ಶತಮಾನದಲ್ಲಿ ಉಡಿಚನಾಯಕನ ವಂಶಸ್ಥನಾದ 'ಕನಕಪ್ಪ ಉಡಿಚನಾಯಕ' ಎಂಬುವವನು ನೋಡಿಕೊಳ್ಳುತ್ತಿದ್ದನು. ಅಂಬಾಮಠದಲ್ಲಿ

ಪ್ರಸಿದ್ಧರಾಗಿದ್ದ ಚಿದಾನಂದ ಅವಧೂತರನ್ನು, ದೈವಭಕ್ತನೂ, ಸಾಧು-ಸಂತರ ಬಗ್ಗೆ ಗೌರವವುಳ್ಳವನೂ ಆದ ನಾಯಕನು ತಮ್ಮಲ್ಲಿಗೆ ಬರಬೇಕೆಂದು ಪ್ರಾರ್ಥಿಸಿದನು. ನಾಯಕನ ಪ್ರಾರ್ಥನೆಯನ್ನು ಸ್ವೀಕರಿಸಿದರೂ ಬಗಳಾಮುಖಿ ದೇವಿಯನ್ನು ಬಿಟ್ಟು ಹೊರಡುವುದು ಅವಧೂತರಿಗೆ ಕಷ್ಟವಾಯಿತು. ಆದರೆ ಪಾಳೆಯಗಾರನ ವಿನಯಪೂರ್ವಕ ಪ್ರಾರ್ಥನೆಯನ್ನು ನಿರಾಕರಿಸುವುದು ಹೇಗೆಂದು ಯೋಚಿಸತೊಡಗಿದರು. ಆ ದಿನ ರಾತ್ರಿ ದೇವಿಯು ಕನಸಿನಲ್ಲಿ ಕಾಣಿಸಿಕೊಂಡು ಪಾಳೆಯಗಾರನ ಕೋರಿಕೆಯನ್ನು ಮನ್ನಿಸುವಂತೆ ಸೂಚಿಸಿ ದಳಂತೆ. ದೇವಿಯ ಆಜ್ಞೆಯಂತೆ ತಾವು ಬರುತ್ತಿರುವ ವಿಚಾರವನ್ನು ಸೇವಕರ ಮೂಲಕ ಹೇಳಿಕಳುಹಿಸಿದರು. ಮಾರನೆಯ ದಿನ ತಮ್ಮ ಶಿಷ್ಯನಾದ 'ಬ್ರಹ್ಮಚಾರಿ' ಎನ್ನುವವನಿಗೆ 'ಸಿದ್ಧದೀಕ್ಷೆ' ಕೊಟ್ಟು 'ಸಿದ್ಧಾವಧೂತ' ಎಂದು ಆಶ್ರಮನಾಮವಿತ್ತು ಪೂಜಾಕಾರ್ಯಗಳು ಕ್ರಮವಾಗಿ ನಡೆಯಲು ವ್ಯವಸ್ಥೆ ಮಾಡಿದರು. ಕನಕಗಿರಿಗೆ ಬಂದ ಚಿದಾನಂದ ಅವಧೂತರನ್ನು ನಾಯಕನು ಶ್ರದ್ಧಾಭಕ್ತಿಯಿಂದ ಸ್ವಾಗತಿಸಿದನು. ಅವರ ಇಚ್ಛೆಗೆ ಅನುಗುಣವಾಗಿ ವಸತಿಯನ್ನು ನಿರ್ಮಿಸಿ ಕೊಟ್ಟು, ಪೂಜೆಗಾಗಿ ಕನಕಗಿರಿಯಲ್ಲಿ ದೇವಿಯ ದೇವಾಲಯವನ್ನು ಕಟ್ಟಿಸಿ ಕೊಟ್ಟನು. ಇಲ್ಲಿರುವಾಗಲೇ ಇವರು ಹಲವಾರು ಕೃತಿಗಳನ್ನು ರಚಿಸಿದರೆಂದು ಹೇಳಲಾಗಿದೆ. ಇವರು ಕೆಲವು ವರ್ಷಗಳ ಕಾಲ ದೇವಿಯ ಆರಾಧನೆಯನ್ನು ನಡೆಸಿ ಶಾಲಿವಾಹನ ಶಕ ೧೭೦೩ ಅಂದರೆ ಕ್ರಿ.ಶ ೧೭೮೧ರ ಪ್ಲವಂಗನಾಮ ಸಂವತ್ಸರದ ಮಾಘ ಬಹುಳ ತ್ರಯೋದಶಿಯಂದು ಕನಕಗಿರಿಯಲ್ಲಿ ಸಜೀವ ಸಮಾಧಿಯನ್ನು ಹೊಂದಿದರು. ಈಗಲೂ ಕನಕಗಿರಿಯಲ್ಲಿ ಈ ಸಮಾಧಿಯಿದ್ದು ಜಾಗ್ರತಸ್ಥಳವೆಂದು ಪೂಜಾರ್ಹವಾಗಿದೆ.

ಅವಧೂತ ಸಂಪ್ರದಾಯದಲ್ಲಿ ಹಾಡು ಹಾಗೂ ಕಾವ್ಯಗಳ ಮೂಲಕ ಕನ್ನಡದ ಆಧ್ಯಾತ್ಮಿಕ ಸಾಹಿತ್ಯವನ್ನು ಪ್ರಚುರಗೊಳಿಸಿದವರಲ್ಲಿ ಚಿದಾನಂದ ಅವಧೂತರು ಅಗ್ರಗಣ್ಯರೆನಿಸಿದ್ದಾರೆ. ಸಂನ್ಯಾಸ ಧರ್ಮದಲ್ಲಿದ್ದು ದೇವಿಯ ಪೂಜಾಕೈಂಕರ್ಯದೊಡನೆ ತಮಗಾದ ಅನುಭವವನ್ನು ಕಾವ್ಯ ಮುಖೇನ ಅಭಿವ್ಯಕ್ತಪಡಿಸಿ ಆಧ್ಯಾತ್ಮ ಸಾಹಿತ್ಯ ಪ್ರಕಾರವನ್ನು ಶ್ರೀಮಂತಗೊಳಿಸಿದ್ದು ಇವರ ವೈಶಿಷ್ಟ್ಯ. ಇವರ ಎಲ್ಲ ಕೀರ್ತನೆಗಳಲ್ಲೂ ಆಧ್ಯಾತ್ಮಿಕ ಸಂಪತ್ತಿ ಎದ್ದು ಕಾಣುತ್ತದೆ. ತಮಗಾದ ಅನುಭವ ಹಾಗೂ ಆ ಬಗೆಗಿನ ಚಿಂತನವನ್ನು ಭಕ್ತಿಯುತವಾಗಿ, ಪ್ರೌಢವಾಗಿ ಅವಧೂತರು ಅಭಿವ್ಯಕ್ತಿಸಿದ್ದಾರೆ.

ಚಿದಾನಂದ ಅವಧೂತರು ರಚಿಸಿದ ಕೃತಿಗಳೆಂದರೆ 'ಜ್ಞಾನಸಿಂಧು', 'ಕಾಮ ವಿಡಂಬನೆ', 'ಬಗಳಾಂಬ ಸ್ತೋತ್ರ', 'ಪಂಚೀಕರಣ' ,'ತತ್ವ ಚಿಂತಾಮಣಿ', 'ನವಚಕ್ರಕುಲರೇಖಾ ಲಕ್ಷಣ', 'ದೇವೀ ಮಹಾತ್ಮೆ', 'ಚಿದಾನಂದ ಕೀರ್ತನೆ' ಎಂಬುವುಗಳು. ಇವೆಲ್ಲಾ ಉಪಲಬ್ಧವಾಗಿವೆ. ಇವರು ರಚಿಸಿದ್ದಾರೆಂದು ಹೇಳಲಾಗುವ 'ಭಗವದ್ಗೀತೆ' ಎಂಬ ಕೃತಿ ಅನುಪಲಬ್ಧವಾಗಿದೆ. ಇವುಗಳನ್ನು ಒಂದೊಂದಾಗಿ ಪರಿಚಯಿಸಿಕೊಳ್ಳೋಣ.

*ಜ್ಞಾನಸಿಂಧು* : ೪೯ ಅಧ್ಯಾಯಗಳಲ್ಲಿ ೩೬೨೧ ಭಾಮಿನಿ ಷಟ್ಪದಿಗಳನ್ನುಳ್ಳ ದೀರ್ಘ ಕಾವ್ಯ. ಇದು ಅದ್ವೈತ ವೇದಾಂತದ ನಿರೂಪಣೆಯುಳ್ಳ ಕೃತಿ. ಸರ್ವಗೀತಗಳ ಅರ್ಥವೂ ಇದರಲ್ಲಿದೆ. ಪುರಾಣದ ಪ್ರಕಾರ ಶಿವನು ಷಣ್ಮುಖನಿಗೆ ಬೋಧಿಸಿದ ತತ್ವವನ್ನೇ ಇವರು ಕನ್ನಡದಲ್ಲಿ ಕಾವ್ಯ ಮಾಧ್ಯಮದಲ್ಲಿ ಹೇಳಿದ್ದಾರೆ.

*ಕಾಮ ವಿಡಂಬನೆ* : ಒಂದು ಕಿರು ಕಾವ್ಯ. ಭೋಗ ಷಟ್ಪದಿಯಲ್ಲಿ ರಚನೆಯಾಗಿದೆ. ಇದರಲ್ಲಿ ೧೧೦ ಪದ್ಯಗಳಿವೆ. ಮೇಲುನೋಟಕ್ಕೆ ಹೋಳಿ ಹಬ್ಬದ ಹಾಡಿನಂತೆ ಕಂಡರೂ ಕಾಮ ವಿಡಂಬನೆ ಇದರ ಮುಖ್ಯಗುರಿ.

*ಬಗಳಾಂಬ ಸ್ತೋತ್ರ* : ಚೌಪದಿಗಳಲ್ಲಿ ಬರೆದ ೧೦೧ ಪದ್ಯಗಳುಳ್ಳ ಕೃತಿ. ತಮ್ಮ ಆರಾಧನಾ ದೇವಿಯ ಸ್ತೋತ್ರ ಇಲ್ಲಿದೆ. ಚೌಪದಿಯ ಕೊನೆಯಲ್ಲಿ 'ಚಿದಾನಂದರ' ಅಂಕಿತವನ್ನು ಸೇರಿಸಲಾಗಿದೆ.

*ಪಂಚೀಕರಣ* : ಇದರಲ್ಲಿ ೧೫ ವಚನಗಳಿವೆ. ಕೊನೆಯಲ್ಲಿ 'ಚಿದಾನಂದ ಸದ್ಗುರು ಪ್ರಭುವೇ' ಎಂದು ಮುಕ್ತಾಯಗೊಳ್ಳುತ್ತದೆ. ಇವೆಲ್ಲವೂ ಆಧ್ಯಾತ್ಮಿಕ ಹಿನ್ನೆಲೆಯ ವಚನಗಳು. ಪಂಚಭೂತ ತತ್ವಗಳನ್ನು ಕುರಿತು ಇಲ್ಲಿ ವರ್ಣಿಸಲಾಗಿದೆ.

*ತತ್ವ ಚಿಂತಾಮಣಿ* : ಗದ್ಯದಲ್ಲಿ ರಚಿಸಿರುವ ಕೃತಿ. ಇದರಲ್ಲಿ ಧ್ಯಾನಪರತ್ವ ಚಂದ್ರೋದಯ, ವಿಶ್ವವಿರಾಟ್ ಪುರುಷ ವಿವರ, ಜೀವೇಶ್ವರೈಕ್ಯ ವಿಚಾರ– ಎಂಬ ಪ್ರಕರಣಗಳಿವೆ. ಇದರಲ್ಲೂ ಚಿದಾನಂದ ಅವಧೂತರ ಹೆಸರು ಕೊನೆಯಲ್ಲಿ ಉಕ್ತಗೊಂಡಿದೆ.

*ನವರತ್ನಕುಲ ರೇಖಾಲಕ್ಷಣ* : ಇದು ಗದ್ಯಗ್ರಂಥ. ಶಿವ ಪಾರ್ವತಿಯರ ಸಂಭಾಷಣೆಯ ರೂಪದಲ್ಲಿ ವೇದಾಂತ ವಿಚಾರಗಳನ್ನು ಇದರಲ್ಲಿ ವಿವರಿಸಲಾಗಿದೆ.

*ದೇವೀ ಮಹಾತ್ಮೆ* : ಇದು ಪದ್ಯಕಾವ್ಯ. ಭಾಮಿನಿ ಷಟ್ಪದಿಯಲ್ಲಿದೆ.

೧೮ ಅಧ್ಯಾಯಗಳಿಂದ ಕೂಡಿದ್ದು ೭೯೬ ಪದ್ಯಗಳನ್ನೊಳಗೊಂಡಿದೆ. ಇದು ಸಂಸ್ಕೃತದ 'ಸಪ್ತಶತಿ' ಎಂಬ ಗ್ರಂಥದ ಪದ್ಯಾನುವಾದವಾಗಿರಬೇಕು.

ಚಿದಾನಂದರ ಕೀರ್ತನೆಗಳು ಅವಧೂತರಾಗಿ ರಚಿಸಲ್ಪಟ್ಟ ಹಾಡು ಗಳಾದ್ದರಿಂದ ಆಧ್ಯಾತ್ಮಿಕ ಒಲವು ಮತ್ತು ಬೋಧನೆಗಳು ಇಲ್ಲಿಯ ಮುಖ್ಯ ಆಶಯವಾಗಿವೆ. ಇವರು ಪ್ರತಿ ಹಾಡಿನ ನುಡಿಗಳಲ್ಲಿ ನಿರ್ದಿಷ್ಟ ಸಾಲುಗಳಿರಬೇಕು ಎಂಬ ನಿಯಮವನ್ನು ಇಟ್ಟುಕೊಂಡಿಲ್ಲ. ಕೆಲವು ನುಡಿಗಳಲ್ಲಿ ಆರು ಸಾಲು, ಐದು ಸಾಲುಗಳಿದ್ದರೆ, ಮತ್ತೆ ಕೆಲವು ನುಡಿಗಳಲ್ಲಿ ನಾಲ್ಕು ಅಥವಾ ಮೂರು ಸಾಲುಗಳು ಮಾತ್ರ ಇರುತ್ತವೆ. ದ್ವಿತೀಯ ಪ್ರಾಸವನ್ನು ಕಟ್ಟುನಿಟ್ಟಾಗಿ ಪಾಲಿಸಿಲ್ಲ.

ಇಲ್ಲಿನ ಆಧ್ಯಾತ್ಮಿಕ ಕೀರ್ತನೆಗಳೆಲ್ಲವೂ ಸಂಸಾರದ ಬಂಧನ, ಅದರ ಅನಿತ್ಯತೆ, ಸಂಸಾರದಿಂದ ಭಕ್ತಿಮಾರ್ಗಕ್ಕೆ ಒದಗುವ ಅಡಚಣೆ, ನಿಜವಾದ ಜ್ಞಾನ, ದೈವಸಾಕ್ಷಾತ್ಕಾರಕ್ಕೆ ಬೇಕಾಗುವ ಧರ್ಮ ಮುಂತಾಗಿ ತಿಳಿಸುತ್ತವೆ. ಇದಲ್ಲದೆ ಅವಧೂತರು ತಮ್ಮ ಆರಾಧ್ಯದೇವಿಯಾದ ಬಗಳಾಂಬನ ಸ್ತುತಿಯನ್ನು ವಿಶೇಷವಾಗಿ ಮಾಡಿದ್ದಾರೆ. ಜ್ಞಾನೋಪದೇಶವು ವೈರಾಗ್ಯ ಪರವಾಗಿದ್ದು, ಸ್ತ್ರೀ ವೈರಾಗ್ಯದಿಂದ ಮಾತ್ರ ಜ್ಞಾನ ಹಾಗೂ ಮೋಕ್ಷ ಲಭ್ಯವೆಂದು ತಿಳಿಸುತ್ತಾರೆ. ಅವಧೂತರು ಅನೇಕ ವರ್ಷಗಳ ಸಾಧನೆಯಿಂದ ಪಡೆದ ಬ್ರಹ್ಮಾನುಭವ ವನ್ನು ಅತ್ಯಂತ ತಾತ್ವಿಕವಾಗಿ ನಿರೂಪಿಸಿದ್ದಾರೆ. ಈ ಕೀರ್ತನೆಗಳು ಸ್ವಾನುಭವ ಗಮ್ಯವಾದದ್ದು.

ಕೆಲವರು ತಾವೇ ಬ್ರಹ್ಮಜ್ಞಾನಿಗಳೆಂದು ಅಹಂಕಾರದಿಂದ ಬೀಗುವುದನ್ನು ಕಂಡು ಅವಧೂತರು ಅಂಥವರನ್ನು ವಿಡಂಬಿಸುತ್ತಾ "ಜ್ಞಾನಿಗಳು ತಾವು ಅಂತೇ ತಾವೇ ಪರಬ್ರಹ್ಮವಂತೆ ಜೊಂಡು ಹುಲ್ಲಿನಂತೆ, ಮಂಡೆಗಳ ಬೆಳೆಸಿ ಕೊಂಡು, ಕಂಡ-ಕಂಡಂತೆ ತಿರುಗುವವರ ನೋಡಿರಯ್ಯ" ಮುಂತಾಗಿ ಕಟಕಿಯಾಡುತ್ತಾರೆ.

ಪ್ರಾರಂಭದಲ್ಲಿ ಗುರುವಿನ ಮಹಿಮೆ ಹಾಗೂ ಕೃಪೆಯನ್ನು ಭಕ್ತಿಯಿಂದ ಹೇಳುತ್ತಾರೆ. ಗುರುವನ್ನು ಕುರಿತ ಇಷ್ಟೊಂದು ಹಾಡುಗಳು ಬೇರೆ ಎಲ್ಲಿಯೂ ಸಿಗುವುದಿಲ್ಲ. ಇಲ್ಲೆಲ್ಲಾ ಗುರುಭಕ್ತಿಯ ಪರಮಾವಧಿಯನ್ನು ಕಾಣುತ್ತೇವೆ. ಉದಾ : "ಯೋಗಿ ಬಂದ ಕಣೇ, ಚಿದಾನಂದ ಯೋಗಿ ಬಂದ ಕಣೆ, ಮಾಗಿಯ ವಸಂತ ಬಂದಂತೆ ತಾನಾಗಿ ಭಕುತ ಜನ ಹೃದಯದಾಗರಕೆ" ಎಂದು ಬಣ್ಣಿಸುತ್ತಾರೆ. ಇವರ ಗುರುವಾದರೂ, ಶಾಂತ ಕುಂಡಲಗಳನ್ನು ತೂಗುತ

ಸ್ವಾಂತ ನಿರ್ಮಳ ಕೌತವ
ಸಂತಸದಲಿ ಬಿಗಿದಳವಡಿಸಿಯೇ ದೇವಿ
ಶ್ರಾಂತ ಸುಭಸಿತವ ಪೂಸಿರಂಜಿಸುತಿಪ್ಪ

ದಿವ್ಯ, ಬ್ರಹ್ಮಸ್ವರೂಪಿಯಾದವನು ಗುರು ಎಂದು ಹಾಡುತ್ತಾರೆ.

ಮುಂದೆ ಬರುವ ಆಧ್ಯಾತ್ಮ ಬೋಧೆಯಲ್ಲಿ ಅಸುರ ಮತ್ತು ದೈವೀ ಪ್ರಕೃತಿಗಳ ಸ್ವರೂಪವನ್ನು ವರ್ಣಿಸುತ್ತಾರೆ.

ಉದಾ : "ಅಸುರ ಪ್ರಕೃತಿಯ ದೈವ ಪ್ರಕೃತಿಯನೆರಡನ್ನು ನೀನೀಗ ಕೇಳು. ಅಸುರ ಪ್ರಕೃತಿಯಲಿ ಜನ್ಮವು, ದೈವ ಪ್ರಕೃತಿಯಲ್ಲಿ ಮುಕ್ತಿಯು ಎಂಬೆನು. ಕೃತ್ರಿಮ ಕಾಮವು, ಮದ ಮತ್ಸರವು ತಾವಿವು ಅಸುರ ಪ್ರಕೃತಿ, ಸತ್ಯವು ಶಾಂತವು ಶಮದಮವೆಂಬಿವು ತಾವಿವು ದೈವ ಪ್ರಕೃತಿ, ಬದ್ಧ ಅವಿದ್ಯೆಯು ಭ್ರಾಂತಿಯು ನಾಶವು, ತಾವಿವು ಅಸುರ ಪ್ರಕೃತಿ, ಶ್ರದ್ಧೆಯು ಸೌಮ್ಯವು ಸಂತಸ ಸಾಕ್ಷಿಯು, ತಾವಿವು ದೈವ ಪ್ರಕೃತಿ" ಈ ರೀತಿಯಲ್ಲಿ ಅಸುರ ದೈವೀ ಪ್ರಕೃತಿಗಳ ವ್ಯತ್ಯಾಸ ಹಾಗೂ ಅವುಗಳ ಗುಣಾವಗುಣಗಳನ್ನು ಸ್ಪಷ್ಟವಾಗಿ ತಿಳಿಸುತ್ತಾರೆ.

ಮುಂದೆ ಜ್ಞಾನೋಪದೇಶಕ್ಕೆ ಸಂಬಂಧಿಸಿದ ಕೀರ್ತನೆಗಳಲ್ಲಿ ಪುರುಷನು ಪ್ರಕೃತಿಯಲ್ಲಿ ಸೇರಿಕೊಂಡಿರುವ ಹಾಗೂ ಸಾಮರಸ್ಯ ಹೊಂದಿರುವ ಬಗೆಯನ್ನು ನಿರೂಪಿಸುತ್ತಾರೆ. ಇಲ್ಲಿನ ಜ್ಞಾನೋಪದೇಶಕ್ಕೆ ಸಂಬಂಧಿಸಿದ ಕೀರ್ತನೆಗಳಲ್ಲಿ ನೀತಿ ಮತ್ತು ಜ್ಞಾನ ಪ್ರಧಾನವಾಗಿವೆ. ಉದಾ :

ಈಸು ಲಾಲಿಸಿದರೆ ಲೇಸು
ಲೇಸಿನ ಮಾರ್ಗ ಕೇಳಿರೊ ಜನರು
ಹಂದಿ ನಾಯಿ ತೃಣಗಳಲಿರುವ ದೇವನ
ಅರಿದರೆ ಅದು ಲೇಸು
ಹಿಂದಾಗಿಹುದನು, ಮುಂದಾಗುವುದನು
ಚಿಂತಿಸಿದರೆ ಅದು ಲೇಸು
ಪಾಪಿಯ ಕೂಡದೆ ಸುಜನರ ಕೂಡುತ
ದೇವನ ಕಾಂಬುದೆಲೇಸು
ಕೋಪವು ಎಂದಿಗು ಸುಳಿಯದೆ ಶಾಂತಿಯು
ವ್ಯಾಪಿಸಿ ತಾನಿಹುದದು ಲೇಸು

ಚಿದಾನಂದ ಅವಧೂತರ ವಿಶೇಷ ಕೀರ್ತನೆಗಳು ಬಗಳಾಂಬದೇವಿಯ ಬಗೆಗಿನ ಭಕ್ತಿ, ಮಹಾತ್ಮೆಗಳನ್ನು ತಿಳಿಸುತ್ತವೆ. ದೇವಿಯು ದುಷ್ಟ ಸಂಹಾರಕಳೂ ಶಿಷ್ಟರಕ್ಷಕಳೂ ಎಂಬುದನ್ನು ಅವಧೂತರು ಸಮರ್ಥವಾಗಿ ನಿರೂಪಿಸುತ್ತಾರೆ.

ಉದಾ : ಜಗಲಿಯ ಹಾಕಿದಳೆ ಬಗಳೆ ಜಗಲಿಯ ಹಾಕಿದಳೆ,

ಸೊಗಸೇನ ಹೇಳಲಿ.....
ತಲೆಗಳು ಥರದ ಕಲ್ಲು
ಒಳ್ಳೊಳ್ಳೆಯ ಎಲುವುಗಳು ಹಾಸುಗಲ್ಲು
ಬಲಿದ ಮಾಂಸದ ಕೆಸರನೆ ಹಾಕಿ ಮೆತ್ತಿ
ಎಳೆದು ಹೆಣಗಳನು ತಂದು ಭರ್ತಿಯ ತುಂಬುತ
ಮೆದುಳನೆ ಮಲ್ಲವ ಮಾಡಿ ಮೇಲೆಯೇ
ಪದರ ಸಿಂಗಾರವ ಮಾಡಿ
ವಿಧವಿಧ ಚಿತ್ರವ ರಕ್ತದಿ ಬರೆದು ತಿದಿಯ
ಸುಲಿದು ಚರ್ಮದ ಹಾಸಿಗೆ ಹಾಕುತ

ಮುಂತಾಗಿ ರೌದ್ರ ರೂಪ ವ್ಯಕ್ತವಾಗುವಂತೆ ವರ್ಣಿಸುತ್ತಾರೆ.

ಅವಧೂತರು ನೀತಿಬೋಧನೆ ಮಾಡುವಾಗ ಮಾನವನನ್ನು ಅಜ್ಞ ಪಶುಗಳಿಗೆ ಹೋಲಿಸುತ್ತಾರೆ.

ಉದಾ : 'ಕೋಣ ಕೇಳೆಲೆ ಕೋಣ ನೀನು,

ಕೋಣನಲ್ಲವು ಬ್ರಹ್ಮಕೋಣ'

ಎಂದು ಒಂದು ಕಡೆ ಹೇಳಿದರೆ, ಮತ್ತೆ ಕೆಲವು ಕಡೆ 'ಹುಚ್ಚು ಬಡ್ಡಿ ಎರಿಮುಂಡೆ', ಮೂರ್ಖ, ಎಂಗರವಟ್ಟೆ, ಹಂದಿ, ನಾಯಿ ಮುಂತಾಗಿ ನಿಂದಿಸಿ ಹೇಳುತ್ತಾರೆ. ಗುರು ಹಿರಿಯರ ಬಗ್ಗೆ ಗೌರವಾದರಗಳಿಲ್ಲದವನ ಬಗ್ಗೆ ತಿಳಿಸುತ್ತಾ–

'ಹಿರಿಯರು ಬರಲು ಏಳದವನ ಕಂಡು ಕೊರಡು ಎಂಬೆ, ಮರೆತು ತನ್ನನ್ನು ಕಲ್ಲ ಪೂಜಿಸುವ ಕಂಡು ಕೊರಡು ಎಂಬೆ' ಎಂದು ನೇರವಾಗಿ ತಿಳಿಸುತ್ತಾರೆ.

ತಾವೇ ಸ್ವತಃ ಸಂನ್ಯಾಸಿಗಳಾದರೂ, ವೇಷ ಡಂಭಕರನ್ನು ಕುರಿತು ಗೇಲಿಮಾಡುತ್ತಾರೆ.

'ಜುಟ್ಟು ಜನಿವಾರ ಬಿಸುಟು ತಾವೀಗ ಉಟ್ಟೊಂದು ಕೌಪೀನವ
ಕಟ್ಟಿ ಕಾಷಾಯ ಕಮಂಡಲು ದಂಡ ಹಿಡಿದು
ದಿಟ್ಟ ಸಂನ್ಯಾಸ ಪಡೆಯುವುದೇಕೆ
ಅಡವಿ ಅರಣ್ಯವ ಸೇರಿ ಅಲ್ಲಿದ್ದ ಅಡವಿ ತೊಪ್ಪಲನೆತಿಂದು
ಗಿಡಮರಗಳಲಿ ಮಲಗಿ ಮಳೆ ಛಳಿಗೆ ಕಂಗೆಡದೆ
ಕಡು ತಪವ ಮಾಡುವುದೇಕೆ'.

ಉಡುದಾರಗಳನೆ ಹರಿದು ತಾವೀಗ
ಸುಡುಗಾಡಲಿಹ ಬೂದಿಯನು
ಬಿಡದೆ ಲೇಪಿಸಿ ಮೈಗೆ ದಿಗಂಬರ ತಾನಾಗಿ
ಕಡು ಚರಿಯ ಬೇಡುವುದೇಕೆ.....

ಮುಂತಾಗಿ ಡಂಭತನವನ್ನು ತಿಳಿಸಿ ಜ್ಞಾನಿಗಳಾದವರಿಗೆ. ಇಂಥ ವೇಷಗಳ ಅಗತ್ಯವಿಲ್ಲವೆಂದು ಹೇಳುತ್ತಾರೆ. ಮತ್ತೆ

ಅವಧೂತರ ಜೀವನ ವಿಧಾನ ಹಾಗೂ ಭಿಕ್ಷೆ ಬೇಡಬೇಕಾದವರ ಮನೆಗಳ ಬಗ್ಗೆ ತಿಳಿಸುತ್ತಾ-

'ದಶವಿಧ ಬ್ರಹ್ಮರ ಮನೆಯಲಿ ಭಿಕ್ಷವ ಕೊಳುತಿಹ ಅವಧೂತ ದಶವಿಧ
ಬ್ರಹ್ಮರ ವಿವರವನೀಗಲೆ ಪೇಳುವೆ ಪ್ರಖ್ಯಾತ. ಸತ್ಯವು ಶೌಚವು ಸಮಸ್ತ
ಬ್ರಹ್ಮವು ಸರ್ವದಿ ದಯವಿಟ್ಟಿಹನು. ನಿತ್ಯವು ತತ್ವವು ಈತನು ಬ್ರಾಹ್ಮಣರೊಳಗೆ
ಬ್ರಾಹ್ಮಣನು ಮಾಯೆಯು ಇಲ್ಲವು ಸ್ನಾನ ಕರ್ಮದಲಿ ದೇವ ಗೋವು
ಪ್ರಿಯನು ಆಯುಧದಿ ರಣ ಜಯಿಸುವನೀತನು ಬ್ರಾಹ್ಮಣ ಕ್ಷತ್ರಿಯನು'

ಮುಂತಾಗಿ ಶ್ರೇಷ್ಠ ವರ್ಣದವರಲ್ಲಿ ಭಿಕ್ಷೆ ಬೇಡುವುದಕ್ಕಿಂತ ಗುಣವಂತರೂ ದಯಾಪರರೂ ಜ್ಞಾನಿಗಳೂ ಭಕ್ತರೂ ಆದವರ ಮನೆಯಲ್ಲಿ ಅವಧೂತ ಭಿಕ್ಷ ಪಡೆಯಬೇಕೆಂದು ತಿಳಿಸುತ್ತಾರೆ.

ಮುಂದಿನ ವೈರಾಗ್ಯ ಬೋಧೆಯನ್ನು ಕುರಿತು ಹೇಳುವ ಕೀರ್ತನೆಗಳು ಇಂದ್ರಿಯನಿಯಂತ್ರಣ ಮಾಡಿಕೊಂಡು, ಸಂಸಾರದ ಜಂಜಾಟಕ್ಕೆ ಸಿಲುಕದಿರುವಂತೆ ತಿಳಿಸುತ್ತವೆ. ಉದಾ :

ಕೆಡಬೇಡವೊ ಎಲೆಕರ್ಮಿ ಮನುಜ ನೀ ಕೆಡದಿಹ ಪಥವ ಕೇಳಿನ್ನೂ

ಹೆಂಡತಿ ಮೋರೆಯ ಮೋಡಿಯ ನೋಡಿ ಹೆಂಡತಿ ಕಡೆ ಥೂ ಎನ್ನು
ಗಂಡಸು ಮಕ್ಕಳು ಗತಿಯೇನೆಂಬರು ಗಂಡು ಮಕ್ಕಳ ಛೀ ಎನ್ನು
ಇಹುದಿದು ದ್ರವ್ಯವು ಇದಕೇನೆಂಬೆಯ ಇಹುದನು ಧರ್ಮವ ಮಾಡಿನ್ನು
ದಾಹದಿ ಗಳಿಸಿದೆ ಸ್ವಾಸ್ತಿಯನೆಂಬೆಯ ಸಜ್ಜನರಿಗೆ ಕೊಳ್ಳೆನ್ನು.

ಮುಂತಾಗಿ ಮೋಕ್ಷಕ್ಕೆ ವೈರಾಗ್ಯವೇ ಶ್ರೇಷ್ಠವೆನ್ನುತ್ತಾರೆ. ಇವರ ಹಲವು ಕೀರ್ತನೆಗಳಲ್ಲಿ ಸಂಖ್ಯಾಪ್ರಧಾನವಾದ ಪದಗಳಿರುವುದು. ಉದಾ : ಪಾಶ ವೆಂಟು, ಗುಣತ್ರಯ ಇತ್ಯಾದಿ. ಅಣು ಅಥವಾ ತೃಣ ಸಮಾನವಾದುದು ಬೃಹತ್ತನ್ನು ನುಂಗಿತು ಎಂಬ ಪ್ರತಿಮೆಗಳ ಮೂಲಕ ಮಹತ್ತಾದ ಅರ್ಥವನ್ನು ಚಿದಾನಂದ ಅವಧೂತರು ಸೂಚಿಸುತ್ತಾರೆ. ಇಂಥದೇ ಕೀರ್ತನೆಗಳನ್ನು ಪುರಂದರದಾಸರಲ್ಲೂ ಕಾಣಬಹುದಾಗಿದೆ.

ಇವರ ಕೀರ್ತನೆಗಳು ಆಧ್ಯಾತ್ಮ ಸಂಪತ್ತಿಯಿಂದ ಕೂಡಿದ ಗಟ್ಟಿ ಹರಳು ಗಳು. ಕೆಲವಂತೂ ತಾತ್ತ್ವಿಕವಾಗಿ ತುಂಬಾ ಪ್ರೌಢವಾದವುಗಳಾಗಿವೆ. ಹೆಚ್ಚಿನ ಕೀರ್ತನೆಗಳು ಪ್ರಾಸ ಹಾಗೂ ಲಯ ಪ್ರಧಾನವಾಗಿದ್ದು ಹಾಡಲು ಅನುಕೂಲ ವಾಗಿವೆ. ಮತ್ತೆ ಕೆಲವು ಗದ್ಯದ ಧಾಟಿಯಲ್ಲೂ ಇವೆ. ಆಧ್ಯಾತ್ಮಿಕ ಕೀರ್ತನೆ ಗಳಿಗೆ ಅದ್ವೈತ ಹಾಗೂ ವೇದ, ಪುರಾಣಗಳ ತಿಳುವಳಿಕೆಯಿಲ್ಲದ ಓದುಗ ಅರ್ಥಮಾಡಿಕೊಳ್ಳುವುದು ಕಷ್ಟ. ಅವಧೂತರಿಗೆ ಲೋಕಾನುಭವವಿರುವುದನ್ನು ಅವರ ಕೀರ್ತನೆಗಳಲ್ಲಿ ಕಾಣಬಹುದು. ತಮ್ಮ ಅನುಭವವನ್ನು ತಿಳಿಸಲು ಉಪಮೆ, ರೂಪಕ, ದೃಷ್ಟಾಂತ ಮುಂತಾದ ಅಲಂಕಾರಗಳನ್ನು ಸಾಕಷ್ಟು ಬಳಸಿದ್ದಾರೆ. ಇವರ ಕೀರ್ತನೆಗಳು ಬೋಧ ಹಾಗೂ ನೀತಿಪ್ರದವಾಗಿದ್ದು ಓದುಗರನ್ನು ಚಿಂತನೆಗೆ ಪ್ರೇರೇಪಿಸುತ್ತವೆನ್ನಬಹುದು.

## ಕೆಳದಿ ವೆಂಕಣ್ಣ ಕವಿ

ವೆಂಕಣ್ಣಕವಿಗೆ ಸಂಬಂಧಿಸಿದ ಐತಿಹಾಸಿಕ ವಿವರಗಳು ಹಾಗೂ ಜೀವನ ಚರಿತೆಯನ್ನು ಕೆಳದಿಯ ಶ್ರೀ ಗುಂಡಾಜೋಯಿಸರು ಸಂಪಾದಿಸಿದ 'ವೆಂಕಣ್ಣ ಕವಿಯ ಕೀರ್ತನೆಗಳು' ಹಾಗೂ 'ವೆಂಕಣ್ಣನ ಕೃತಿಗಳು' ಇವುಗಳ ಉಪೋದ್ಘಾತಗಳಿಂದ ಸಂಗ್ರಹಿಸಲಾಗಿದೆ. ಕೀರ್ತನೆಗಳನ್ನು ಕೆಳದಿಯ ಹಸ್ತಪ್ರತಿ ಹಾಗೂ 'ವೆಂಕಣ್ಣ ಕವಿಯ ಕೀರ್ತನೆ'ಗಳು ಮತ್ತು 'ಕರ್ನಾಟಕ ಲೋಚನ' ಗಳಿಂದ ಪಡೆಯಲಾಗಿದೆ.

ಕೆಳದಿಯ ವೆಂಕಣ್ಣನು 'ವೆಂಕವಿಬುಧನೆಂದು ಖ್ಯಾತನಾದವನು. ಈತನ ಕಾಲ ೧೭೭೫ ಎಂದು ಹಲವು ಆಧಾರಗಳನ್ನು ಉಲ್ಲೇಖಿಸಿ ಶ್ರೀ ಗುಂಡಾ ಜೋಯಿಸರು ಪ್ರಸ್ತಾಪಿಸಿದ್ದಾರೆ. ಈತನು 'ಲಿಂಗಾರ್ಯತನೂಭವ' ಎಂಬ ಬಗ್ಗೆಯೂ ಸಾಕಷ್ಟು ಆಧಾರಗಳನ್ನು ಒದಗಿಸಿದ್ದಾರೆ. ಲಿಂಗಣ್ಣ ಕವಿಯು ಕೆಳದಿಯ ವೆಂಕಣ್ಣನಿಗೆ ಅಣ್ಣ ಅಥವಾ ತಂದೆಯೋ ಆಗಿದ್ದಿರಬೇಕು. ಆದರೆ ಹೀಗೇ ಎಂದು ತೀರ್ಮಾನಿಸಲು ಸಿಕ್ಕಿರುವ ಆಧಾರಗಳು ಸಾಲವು. ಪಾರ್ವತೀ ವಲ್ಲಭ ಶತಕದಲ್ಲಿ ಹೇಳಿರುವಂತೆ 'ಕೆಳದಿ ಲಿಂಗಪ್ಪ ಸನ್ಮಂತ್ರಿ ಭಾಸ್ಕರನಾತ್ಮೋಭವ ನಾದ ವೆಂಕ ವಿಬುಧಂ' ಎಂಬುದು ಇವನ ಬಗೆಗಿನ ಉಲ್ಲೇಖವಾಗಿದೆ.

ವೆಂಕಣ್ಣ ಕವಿಯಿಂದ ರಚಿತವಾದ ಕಾವ್ಯಗಳೆಂದರೆ (೧) ಪಾರ್ವತೀ ವಲ್ಲಭ ಶತಕ (೨) ಗಣ ಸಹಸ್ರನಾಮ (೩) ನರಹರಿ ವಿಜಯ ಎಂಬವುಗಳಾಗಿವೆ. ಇದಲ್ಲದೆ 'ಕೆಳದಿ ರಾಮೇಶ್ವರ' ಮತ್ತು ಇತರ ದೇವರುಗಳ ಅಂಕಿತದಲ್ಲಿ ಹಲವು ಕೀರ್ತನೆಗಳನ್ನು ರಚಿಸಿರುವನು. ಮುದ್ರಿತ ಪುಸ್ತಕದಲ್ಲಿ ಅಂಕಿತರಹಿತವಾದ ಕೆಲವು ಹಾಡುಗಳನ್ನು ವೆಂಕಣ್ಣನದೆಂದು ಕೀರ್ತನೆಯ ಸಂಕಲನದಲ್ಲಿ ಸೇರಿಸಲಾಗಿದೆ. ಇವುಗಳನ್ನು ಅನುಬಂಧದಲ್ಲಿ ಕೊಡಲಾಗಿದೆ.

ಈತನ ಕೀರ್ತನೆಗಳ ಮೂಲಕ ಸ್ವವಿಚಾರವಾಗಲಿ, ಗುರು ಪರಂಪರೆಯ ವಿವರಗಳಾಗಲಿ ಲಭ್ಯವಾಗುವುದಿಲ್ಲ. ಈತನ ಹಾಡುಗಳು ಸರಳ ಸುಂದರ ವಾಗಿದ್ದು ಹಾಡಲು ಯುಕ್ತವಾಗಿವೆ. ಈ ಕೃತಿಯಲ್ಲಿ ಅಂಕಿತ ಸಹಿತವಾದ ೪೩ ಕೀರ್ತನೆಗಳಿದ್ದು ಇವು ನೀತಿ, ಧರ್ಮ, ಭಕ್ತಿ ದೇವತಾಸ್ತುತಿ ಹಾಗೂ ಆಧ್ಯಾತ್ಮ ವಿಚಾರಗಳನ್ನು ಒಳಗೊಂಡಿವೆ.

ಪ್ರಾರಂಭದ ಗಣೇಶ ಸ್ತುತಿ ಸಾಂಪ್ರದಾಯಿಕವಾಗಿದ್ದು ಭಕ್ತಿ ಸ್ತೋತ್ರ ಹಾಗೂ ಗೇಯ ಗುಣದಿಂದ ಕೂಡಿದೆ. ದೇವಾನುದೇವತೆಗಳು ಗಣಪನನ್ನು ಪೂಜಿಸಿ ಸಿದ್ಧಿ ಪಡೆಯುತ್ತಾರೆಂದೂ, ಗಣೇಶ ಸರ್ವಶ್ರೇಷ್ಠನಾದವನೆಂದೂ ಕವಿ ಬಣ್ಣಿಸುತ್ತಾನೆ.

ಉದಾ : ಹರ ನಿಮ್ಮ ಪೂಜಿಸಿ ಪುರ ಮೂರ ಜಯಿಸಿದ
ಗರುಡಗೆ ಅಮೃತವು ಸಿದ್ಧಿಸಿತು
ವರ ರಾಮಚಂದ್ರ ನಿಮ್ಮಡಿಯ ಪೂಜಿಸಿ ದಶಶಿರನ ಗೆಲಿದ
ನೆನೆಗಣಪತಿ ಜಯವೆಂದು

ಮುಂದೆ ತಾತ್ವಿಕ ಹಿನ್ನೆಲೆಯ ಹಾಡುಗಳ ಮೂಲಕ ತನ್ನನ್ನು ತಾನರಿತು ನಿಜಜ್ಞಾನವನ್ನು ಪಡೆದುಕೊಂಡು ಭಗವಂತನನ್ನು ಆರಾಧಿಸಿ ಮುಕ್ತಿ ಪಡೆಯ ಬೇಕೆಂದು ನಿರೂಪಿಸುತ್ತಾನೆ. ಜ್ಞಾನಿಗಳಾದವರಿಗೆ ಭವಬಂಧ ಕಾಡುವುದಿಲ್ಲ ವೆಂದು ಹೇಳುತ್ತಾ–

ನರರಿಗೆಲ್ಲಿಯ ಭವಬಂಧ ಜ್ಞಾನಿಗಳಾದ
ನರರಿಗೆಲ್ಲಿಯ ಭವ ಬಂಧ,
ತರಣಿಬಿಂಬವ ತಮವು ಮುಸುಕಲು ಬಲ್ಲುದೆ....
ಮುಂತಾದ ದೃಷ್ಟಾಂತಗಳ ಮೂಲಕ ಸ್ಪಷ್ಟಪಡಿಸುತ್ತಾನೆ.

ಮತ್ತೊಂದು ಹಾಡಿನಲ್ಲಿ ನಾವು ಯಾವ ದೇವ ದೇವತೆಯನ್ನು ಮೊರೆ ಹೋಗುತ್ತೇವೆಯೋ ಆತನೇ ಭವಬಂಧದಲ್ಲಿ ಸಿಲುಕಿ ಒದ್ದಾಡುತ್ತಿರುತ್ತಾನೆ. ಇದರಿಂದಾಗಿ ಪರಮಾತ್ಮನಾದ ಕೆಳದಿಯ ರಾಮೇಶನೋರ್ವನೆ ನಮ್ಮನ್ನು ಪೊರೆಯಬೇಕೆಂದು ಹೇಳುತ್ತಾ –

"ಸರಸಿಜಾತಗೆ ಸಮಯವಿಲ್ಲ ಶಶಿ ತನ್ನೊಳಂ–
ಕುರಿಸಿದ ಕಳಂಕ ಕಳ ಕೊಳಲಾರನು
ವರ ಕೆಳದಿ ರಾಮೇಶ ನೀನೆ ಚಿತ್ತಕೆ ತಂದು
ಮರೆ ಹೊಕ್ಕವನ ನೋಡಿ ಪೊರೆಯದಿದ್ದ ಮೇಲೆ"

ಎಂದು ಪ್ರಾರ್ಥನೆ ಸಲ್ಲಿಸುತ್ತಾನೆ.

ಈತನ ಲೋಕನೀತಿಯ ಪದಗಳು ಸರಳವಾಗಿವೆ. ಇವು ಬೋಧಪ್ರದ ವಾದವು. ಇಲ್ಲಿ ಹಲವು ಹೋಲಿಕೆ, ದೃಷ್ಟಾಂತಗಳ ಮೂಲಕ ವಿಚಾರವನ್ನು ಭಕ್ತರಿಗೆ ಅರಿಯುವಂತೆ ಮಾಡುತ್ತಾನೆ. ಉದಾಹರಣೆಗೆ ಈ ಕೆಳಗಿನ ಸಾಲನ್ನು ನೋಡಬಹುದು.

"ಕಾಗೆ ಬಲ್ಲುದೆ ದಿವ್ಯ ಚೂತ ಫಲರಸದಿನಿದ
ಗೂಗೆ ಬಲ್ಲುದೆ ಸೂರ್ಯನುದಯವನ್ನು
ರೋಗಿ ಬಲ್ಲನೆ ಸುಧಾರಸದ ಸುಸ್ವಾದವನು
ಭೋಗಿ ಬಲ್ಲನೆ ಯೋಗ ಮಾರ್ಗ ರೀತಿಯನು...."

ಎಂದು ತಿಳಿಸುತ್ತಾನೆ. ಮುಂದೆ ಪರಶಿವನ ಧ್ಯಾನದ ಮುಂದೆ ನಿತ್ಯಕರ್ಮಗಳು ಕ್ಷುಲ್ಲಕವೆಂದು ಹೇಳುತ್ತಾ–

ಸ್ನಾನಬೇಡ ಸಂಧ್ಯಾಕರ್ಮವು ಬೇಡ
ಧ್ಯಾನ ಧಾರಣೆ ಬೇಡ
ಮೌನ ಬೇಡ ಮಣಿಮಾಲಿಕೆ ಬೇಡ
ಧ್ಯಾನ ಬೇಡ ಪಶುವಧೆಗಳು ಬೇಡ

ಮುಂತಾಗಿ ಹೇಳಿ ಶಿವಧ್ಯಾನವೇ ನಿತ್ಯ ನಿರ್ಮಲವೆನ್ನುತ್ತಾನೆ. ದಾನಗಳಲ್ಲೆಲ್ಲಾ ಶ್ರೇಷ್ಠ ಅನ್ನದಾನ, ಅದಕ್ಕಾಗಿ ಮೊದಲು 'ಅನ್ನದಾನವನು ಮಾಡು' ವಂಶೋದ್ಧಾರಕ್ಕಾಗಿ 'ಕನ್ಯಾದಾನವನ್ನು ಮಾಡು' ಮತ್ತು 'ನಿನ್ನ ನಂಬಿದರ ಪೊರೆದುನ್ನತ ಹರ್ಷದಿ ಬಾಳು' ಮುಂತಾಗಿ ಹಿತನುಡಿಗಳನ್ನು ಹೇಳುತ್ತಾನೆ.

ಮಾನವನ ಬದುಕು ಆದರ್ಶ ಹಾಗೂ ವೈಭವದಿಂದ ಕೂಡಿರಬೇಕು. ಇದಕ್ಕಾಗಿ ಹಲವರು ಪುರಾಣ ಪುರುಷರನ್ನು ಉಲ್ಲೇಖಿಸುತ್ತಾನೆ. ಇವರಂತೆ ತಾವೂ ಬಾಳಿ ಬದುಕಬೇಕೆಂದು ಹೇಳುತ್ತಾ –

"ಇಂದ್ರನಾಗು ಭೋಗದೊಳು, ಸತ್ಯವಾಕ್ಯವೆಂದು ಹರಿ
ಶ್ಚಂದ್ರನಾಗು, ಪಾಲನೆಯ ಮಾಡುವುದರೊಳಗೆ ಉ–
ಪೇಂದ್ರನಾಗು, ಬುದ್ಧಿ ಕೌಶಳದೊಳು ತಿಳಿಯಲು ನಾ–
ಗೇಂದ್ರ ನೀನಾಗು" ಮುಂತಾಗಿ ಉಲ್ಲೇಖಿಸುತ್ತಾನೆ.

ಕವಿ ಅಲ್ಲಲ್ಲಿ ಶೃಂಗಾರ ಪೂರ್ಣವಾದ ಹಾಡುಗಳ ಮೂಲಕ ಪರಸತಿಯರ ಬೇಟವನ್ನು ತ್ಯಜಿಸಿ ಶುದ್ಧ ಜೀವನ ನಡೆಸುವಂತೆ ಸೂಚಿಸುತ್ತಾನೆ. ಪ್ರಣಯಗಾತಿಯರ ರಸಿಕತನವನ್ನು ಬಣ್ಣಿಸುತ್ತಾ–

"ತರುಣಿ ಹಾರವನು ಮತ್ತೋರ್ವಳುಂಗುರವನು ಸರ್ವಾಭರಣವ ಧರಿಸಿದಳೋರ್ವಳು" ಮುಂತಾಗಿ ಪುರುಷಾಕರ್ಷಣೆಯ ವೇಷಭೂಷಣಗಳನ್ನು ಸೌಂದರ್ಯವನ್ನು ಬಣ್ಣಿಸಿ, ಪರಸ್ತ್ರೀಯರ ಬಗೆಗಿನ ಕಾಮವು ಸಮಾಜ ಬಾಹಿರ, ನೀತಿಬಾಹಿರವೆಂದು ತಿಳಿಯಪಡಿಸುತ್ತಾನೆ.

ದೇವದೇವತೆಗಳ ಸ್ತುತಿಯಲ್ಲಿ ದೇವರನ್ನು ಹಲವಾರು ಹೂವು ಹಾಗೂ ಆಭರಣಗಳಿಂದ ಅಲಂಕರಿಸಿ ಆನಂದಗೊಳ್ಳುತ್ತಾನೆ.

ಉದಾ : "ದುಂಡು ಮುತ್ತಿನ ಸರಪಳಿ ವಜ್ರದ
ಕುಂಡಲ ಕಿವಿಯೊಳು ಥಳ ಥಳಿಸಿ, ಪ್ರ–
ಚಂಡ ಸಿಂಹವನೇರಿ ಬಾಪವಳಾರೆ ಅಕ್ಕ

ಮರುಗ ಮಲ್ಲಿಗೆ ಸುರುಗಿ ಸೇವಂತಿಗೆ
ಪರಿಮಳಿಸುವ ಸಂಪಗೆ ಕೇದಗೆ-
ಯರಳನೆ ಮುಡಿದು ಬಾಹವಳಾರೆ ಅಕ್ಕ"

ಮತ್ತೆ ಕೆಲವು ಕೀರ್ತನೆಗಳು ತಾಳ, ಲಯಬದ್ಧವಾಗಿದ್ದು ರಾಗಬದ್ಧವಾಗಿ ಹಾಡಲು ಅನುಕೂಲವಾಗಿವೆ. ಇಂಥವು ನೀತಿ ಪ್ರಧಾನವಾಗಿದ್ದು ಕೋಲಾಟ ಮಾಡುತ್ತಾ ಕುಣಿಯಬಹುದಾಗಿದೆ.

ವೆಂಕಣ್ಣ ಕವಿಯ ಕೀರ್ತನೆಗಳ ಭಾಷೆ ಪ್ರೌಢವಾದುದಲ್ಲ. ಹೇಳುವ ರೀತಿ ನೇರ ಹಾಗೂ ಸ್ಪಷ್ಟ, ವ್ಯಂಗ್ಯ, ವಿಡಂಬನೆಗಳು ಕಡಿಮೆ. ತಾತ್ವಿಕ ವಿಚಾರಗಳುಳ್ಳ ಹಾಡುಗಳು ಒಂದೋ ಎರಡೋ ಮಾತ್ರ. ಹೆಚ್ಚಿನ ಪದಗಳು ನೀತಿ ಪ್ರಧಾನ ವಾಗಿದೆ. ಕೆಲವು ಕೀರ್ತನೆಗಳಲ್ಲಿ ಪ್ರಾಸ, ಲಯಗಳು ಇಲ್ಲವಾಗಿದೆ. ಒಟ್ಟಿನಲ್ಲಿ ವೆಂಕಣ್ಣ ಸಮಾಜದ ಅರೆ-ಕೊರೆಗಳನ್ನು ಗಮನಿಸಿ ಅವುಗಳನ್ನು ಸರಿಪಡಿಸುವ ಆಶಯವನ್ನು ವ್ಯಕ್ತಪಡಿಸುತ್ತಾನೆ. ಸರ್ವರೂ ಭಗವದ್ಭಕ್ತಿಯನ್ನು ಹೊಂದಿರ ಬೇಕೆಂದು ಬೋಧಿಸುತ್ತಾನೆ.

ಈ ಅದ್ವೈತ ಸಂಪುಟದಲ್ಲಿ ಚಿದಾನಂದಾವಧೂತರ ೪೩೩ ಕೀರ್ತನೆಗಳಿವೆ. ಅಂತೆಯೇ ಕೆಳದಿ ವೆಂಕಣ್ಣ ಕವಿಯ ಕೀರ್ತನೆಗಳು ೬೪ ಸೇರಿ ಒಟ್ಟು ೪೯೦ ಕೀರ್ತನೆಗಳಾಗುತ್ತವೆ. ಇವಕ್ಕೆ ಪ್ರತ್ಯೇಕ ಉಪವಿಭಾಗ ಮಾಡಲಾಗಿದೆ.

– ಡಾ. ಡಿ.ಆರ್. ಪಾಂಡುರಂಗ

# ಕೀರ್ತನೆಗಳ ಕ್ರಮಸೂಚಿ

## ಗುರು ಸಂಕೀರ್ತನೆ

**ತಾತ್ವಿಕ ಹಿನ್ನೆಲೆಯ ಕೀರ್ತನೆಗಳು**

## ಬ್ರಹ್ಮಾನುಭವ

**ಕೆಳದಿ ವೆಂಕಣ್ಣ ಕವಿಯ ಕೀರ್ತನೆಗಳು**

**ಲೋಕನೀತಿಯ ಪದಗಳು**



**ಸಂಪ್ರದಾಯದ ಹಾಡುಗಳು**

**ಅಂಕಿತ ರಹಿತ ಹಾಡುಗಳು**

## ದೇವ ದೇವತೆಗಳ ಸ್ತುತಿ

೧

ಅಂಬ ಕಟಾಕ್ಷಿಸೆ ಅಂಬ
ಅಂಬ ಪರಾಂಬ ಬಗಳಾಂಬ ಪ

ಮಧು ಕೈಟಭಾರಿಯೆ ಮಹಿಷಾಸುರೇಶ್ವರಿಯೆ
ಕದನ ಶುಂಭಾಂತಕಿ ಕರುಣಾ ಕೃಪಾಕಟಾಕ್ಷೆ ೧

ಪರಮ ಪಾವನದೇವಿ ಪಂಡಿತ ಜನ ಸಂಜೀವಿ
ಶರಣ ಜನರ ತಾಯಿ ಸುಧಾ ಶರಧಿ ಸಂಭಾವಿ ೨

ನಾರಾಯಣಿ ಭದ್ರೇ ನರಸಿಂಹಿಣಿ ರೌದ್ರಿ
ವಾರಾಹಿ ಕಾಳಿಯೆ ಗೌರಿ ಉಮಾಮಹೇಶ್ವರಿ ಶಂಕರಿ ೩

ನಿತ್ಯ ನಿರ್ಗುಣರೂಪೇ ನಿಗಮ ಸ್ತುತ್ಯ ಚಿದ್ರೂಪೇ
ನಿತ್ಯ ನಿರ್ವಿಕಾರಿ ನಿಂದಕಜನಸಂಹಾರಿ ೪

ಚಿದಾನಂದಾವಧೂತೇ ಚಿನ್ಮಯ ಬಗಳ ಪ್ರಖ್ಯಾತೇ
ಬೋಧ ಸದ್ಗುರುನಾಥೇ ಭಕ್ತವಿಲಾಸ ಪ್ರೀತೆ ೫

೨

ಅಕ್ಕ ಕೇಳೆ ಪಾಪಮಾಡಿ ಲೆಕ್ಕವಿಲ್ಲದೆ ಯಮನ ಕೈಯ್ಯ
ದುಃಖದಲ್ಲಿ ನರಕದೊಳಗೆ ಮುಳುಗುವವರ ಕಡೆ ಹಾಯ್ವುದೆಂತೋ ಪ

ನೀರಗುಳ್ಳೆಯೆಂದು ತನುವ ನಿತ್ಯವಲ್ಲವೆಂದು ತಿಳಿಯರು
ಘೋರ ನೀಚತನವ ಮಾಡುವವರ ಕಡೆ ಹಾಯ್ವದೆಂತೋ ೧

ಹಿಂದೆ ಮುಂದೆ ನುಡಿಯುತಿಹರು ನಿಂದೆ ಮಾತನಾಡುತಿಹರು
ಸಂದೇಹಕ್ಕೆ ಒಳಗಾದವರು ಕಡೆ ಹಾಯ್ವದೆಂತೋ ೨

ಕೊಟ್ಟ ಸಾಲವನ್ನೇ ಕೊಡರು ಮತ್ತೆ ಆಣೆ ಎಂಬರಯ್ಯ
ಹೆತ್ತ ಮಗನನು ದಾಟುವವರು ಕಡೆ ಹಾಯ್ವದೆಂತೋ ೩

ತಂದೆ ತಾಯಿ ಹೊರಡಿಸುವರು ತಂದು ಒಳಗೊಳಗೇ ತಿನ್ನುವವರು
ಮಂದಿಗಳ ಬಯ್ಯುವವರು ಕಡೆ ಹಾಯ್ವದೆಂತೋ ೪

ವಿಧ ವಿಧದ ದೇವರನ್ನು ಮುದದಿ ಕಟ್ಟಿಕೊಂಡಿಹರು
ಚಿದಾನಂದ ಬಗಳೆಯ ಅರಿಯದವರು ಕಡೆ ಹಾಯ್ವದೆಂತೋ ೫

೩

ಆಣೆಕಲ್ಲಾಡಿದಳೇ ಆನಂದದಲಿ ಬಗಳೆ
ಸೆಣಸುವ ವೈರಿಗಳ ಶಿರಗಳ ಪಿಡಿದು ಪ

ಮೊಂಡ ಮೂಕರ ತಲೆಯ ಮೂಳ ಮೂಸರ ತಲೆಯ
ಭಂಡತನದಿ ಬಗುಳುವ ಪಾಪಿಯ
ಚಂಡಾಲರ ತಲೆಯ ಚರಿಗೇಡಿಯ ತಲೆಯ
ಮಂಡರ ತಲೆಯನಂದು ಎನ್ನ ಕಣ್ಣಮುಂದೆ ತಾನು ೧

ಒಂದೊಂದು ಎರಡು ಎಂದು
ಮುಂದೆ ಮೂರು ನಾಲ್ಕು ಎಂದು
ಹಿಂದೆ ಆದುದು ತಪ್ಪಿತು ಥೂ ಥೂ ಎಂದು
ಇಂದಿದು ಸದ್ಗುರು ರಾಯನ ಗುಸ್ತೆಂದು
ಚೆಂದದಿ ಆಡಿದಳೆ ಎನ್ನ ಕಣ್ಣ ಮುಂದೆ ತಾನು ೨

ನಾನು ಎಲ್ಲಿದ್ದರೆ ತಾನಲ್ಲಿದ್ದಾಡುತ
ಧ್ಯಾನವೆನ್ನಯ ಮೇಲೆ ಇಟ್ಟುಕೊಂಡು
ಮಾನನಿಧಿ ಚಿದಾನಂದ ರಾಣಿ ಬಗಳೆ
ಏನ ಹೇಳಲಿ ನಿದ್ರೆ ನೀರಡಿಕೆಯಿಲ್ಲದೆ ಎನ್ನ ಕಾಯುತ ೩

೪

ಅದಕೋ ಬ್ರಹ್ಮಾಸ್ತ್ರ ನೋಡು ನೋಡದಕೋ ಬ್ರಹ್ಮಾಸ್ತ್ರ
ಅದಕೋ ಬ್ರಹ್ಮಾಸ್ತ್ರ ಅದ್ಭುತವಾದಸ್ತ್ರ
ಬೆದರಿಪುದೆಲ್ಲರ ಬೇವುವು ಬ್ರಹ್ಮಾಂಡ ಪ

ಮಾರಿಗೆ ಮಾರಿಯು ಮೃತ್ಯುಗೆ ಮೃತ್ಯುವು
ಘೋರಕೆ ಘೋರವು ಕ್ರೂರಕೆ ಕ್ರೂರ ೧

ತಗ ತಗ ಚಕಚಕ ಲಕಲಕ ನಳನಳ
ಝಗ ಝಗ ನಿಗಿ ನಿಗಿ ಕಳೆ ಕೋರೈಸುತಿದೆ ೨

ಛಟಛಟ ಛಿಳಿಛಿಳಿ ಧಗಧಗ ಭುಗುಭುಗು
ಪಟಿ ಪಟಿಸುತ ಉರಿ ಹೊಗೆಯೊಂದಾಗುತಿದೆ ೩

ಹಲವು ಬ್ರಹ್ಮಾಂಡವ ಸುಟ್ಟರು ಹಸಿವಡಗದು
ಹಲವು ಸಾಗರ ಕುಡಿದೆ ತೃಷೆಯಡಗದು ೪

ಬಿರುಗಣ್ಣಿಂದಲಿ ಖಡ್ಗವ ಬೀರುತ
ಗುರುಚಿದಾನಂದ ತಾನಾಗಿಹ ಬಗಳೆ ೫

೫

ಅನ್ಯವನರಿಯೆನು ಮತ್ತೆಂದು ಅನ್ಯವ ಅರಿಯೆನು
ನಿನ್ನ ಕಾಂಬೆ ಕಂಡದನೆಲ್ಲ ನಿರ್ವಿಕಾರ ಬಗಳೆ ಕೇಳು ಪ

ತನ್ನ ಹೆಂಡತಿಯನೀಗ ತನ್ನ ಸುತನು ರಮಿಸುತಿರಲು
ಭಿನ್ನದಿಂದ ಕಂಡೆನಾದರೆ ಮೆಚ್ಚಬೇಡ
ಎನ್ನಲಿ ಇಚ್ಚೆ ಬೇಡ ಹೊನ್ನು
ರನ್ನವು ಮುಂದೆ ಇರಲು ಹರಿದುದಾದರೆ
ಎನ್ನ ಚಿತ್ತ ನಿನ್ನ ಮೇಲೆ ಎನಗೆ ಆಣೆ ಸತ್ಯ-
ವೆನ್ನು ಇದು ತಪ್ಪದೆನ್ನು ೧

ಪಡೆದ ತಾಯಿ ತಾನು ಹೋಗಿ
ಕಂಡವನ ಕೂಡುತಿರಲು
ಮಿಡುಕು ಹುಟ್ಟಿತಾದರೆ ನಾನು ಸತ್ಯ ಬಿಟ್ಟೆ-
ನಾದರೆ ನೀನು ದೊರೆವುದೆಂತು ನಿನ್ನ ಕರುಣವೆಂತು ೨

ತಂದೆ ಕೆಡಹಿ ಕೊರಳನೀಗ
ನಂದನನನು ಕೊರೆಯುತಿರಲು
ಎಂದೆನಾದರೆ ಮನದಿ ಇವನ ಜ್ಞಾನಿಯಲ್ಲವು
ನಾನು ಏನು ಅಲ್ಲವು
ಸುಂದರವ ಚಿದಾನಂದ ಬಗಳೆ ಎಂದು ಕಾಣದಿರಲು
ಎಂದು ಎಂದಿಗೆ ನಿನ್ನ ಚರಣ ಭಕ್ತನಲ್ಲವು
ನಾನು ಮುಕ್ತನಲ್ಲವು ೩

೬

ಇಷ್ಟ ಲಿಂಗವ ಪೂಜಿಸೆಂದು ಗುರುವು ಕೈಯಲಿ ಕೊಟ್ಟ
ಇಷ್ಟಲಿಂಗ ನೀನೆ ಎಂದು ಕಿವಿಯಲಿ ಹೇಳಿಬಿಟ್ಟ ಪ

ಉದಯದಲಿ ಲಿಂಗವನ್ನು ಬಯಲ ಕಡೆಗೆ ಒಯ್ಯುವೆ
ಅದರ ತರುವಾಯದಲಿ ಲಿಂಗಮುಖವನೀಗ ತೊಳೆವೆ
ಹದ ಮಾಡಿಯೆ ಬಿಸಿನೀರನು ಲಿಂಗಕ್ಕೆ ಎರೆವೆ
ವಿಧವಿಧದ ವಸ್ತ್ರಗಳನ್ನು ಲಿಂಗಕ್ಕೆ ಉಡಿಸುವೆ ೧

ಬಸಿತವನು ಹಣೆಯ ತುಂಬ ಲಿಂಗಕ್ಕೆ ಧರಿಸುವೆ
ಕುಸುಮವೇನು ದೊರಕಿದರು ಲಿಂಗಕ್ಕೆ ಮುಡಿಸುವೆ
ಬಿಸಿಯಾರಿದ ಎಡೆಯ ನಾನು ಲಿಂಗಕ್ಕೆ ಉಣಿಸುವೆ
ಪಶುಪತಿಯೆ ಉದಕವೆಂದು ಲಿಂಗಕ್ಕೆ ಕುಡಿಸುವೆ ೨

ಲಿಂಗ ಕೊಳ್ಳೆಂದು ತಾಂಬೂಲ ನೀಡುವೆ
ಭಂಗಭವನ ಸ್ತೋತ್ರ ಮಾಡಿ ಲಿಂಗವನ್ನು ಮಲಗಿಸುವೆ
ಲಿಂಗವನ್ನು ನಡೆಸ್ಯಾಡಿ ಲಿಂಗವನ್ನು ಮಲಗಿಸುವೆ
ಲಿಂಗ ಚಿದಾನಂದ ಬ್ರಹ್ಮಲಿಂಗವಾಗಿ ಇರುತಿಹೆ ೩

## ೭

ಉಗ್ರ ನರಸಿಂಹ ಜ್ವಾಲಾ ಉಗ್ರನರಸಿಂಹ
ಶೀಘ್ರದಿ ಬಂದು ಪ್ರಹ್ಲಾದನ ಮೊರೆಯನು
ಕೇಳ್ವ ಅಸುರನ ಸೀಳ್ವಾ ಪ

ಘಳ ಘಳಯೆನುತಾರ್ಭಟಿಸುತ ಕುಂಭ
ದ ಲೊಡೆದು ಕೋಪವ ಝಡಿದು ಛಿಳಿ ಛಿಳಿ
ಛಿಳಿರನೆ ಕಣ್ಣಲಿ ಕೆಂಗಿಡಿಯುಗುಳೇ ದಿವಿಜರು ಪೊಗಳೇ
ಭಳಿ ಭಳಿ ಭಳಿರೆಂದಬ್ಬರಿಸುತ ದುಂದುಭಿ–
ಯೊದರೇ ಅಸುರರು ಬೆದರೇ
ಝುಳಪಿಸಿ ಖಡುಗದಿ ರಕ್ಕಸ ಬಲವನು
ತರಿದಾ ಶಿಶುವನು ಪೊರೆದಾ ೧

ಭುಗು ಭುಗಲೆನೆ ನಾಸಿಕದಿ ಉಸುರ್ಹೊಗೆ
ಹೊರಟು ಖಳನುದ್ದುರುಟು
ಜಿಗಿ ಜಿಗಿದವನನು ಕೆಡಹಿ ತೊಡೆಯೊಳಗಿಟ್ಟು
ರೋಷವ ತೊಟ್ಟು
ಬಗೆದುದರವ ರಕ್ತವ ನೊಕ್ಕುಡಿತೆಯಲಿ
ಸುರಿದು ತಾ ಚಪ್ಪರಿದು

ಸೊಗಸು ಉರಕೆ ಕರುಳ ಮಾಲೆಯ
ಹಾಕಿದ ದೇವ ಭಕ್ತರಕಾಯ್ವ ೨

ಹಿರಣ್ಯಕಶಿಪನ ಹತ ಮಾಡಿದ ಭಕ್ತ ಪ್ರಹ್ಲಾದನಿಗೆ ಆಹ್ಲಾದದ
ವರವನು ಪಾಲಿಸಿ ಸುರರನು ಪೊರೆದು
ಕರುಣದಿ ಸುರಿದು ಧರಣಿಯೊಳಗೆ ಪೆ-
ಸರಾಗಿಹ ಅಹೋಬಲ ಸ್ಥಳದಿ ನೀನಾ ನೆಲದಿ
ಗುರು ಚಿದಾನಂದ ಅವಧೂತರೆನಿಪ ದಾತಾ ಸಜ್ಜನ ಪ್ರೀತಾ ೩

## ೮

ಎಂಥ ವಿಕ್ರಮಳೆ ನೀನು
ಎಂಥ ವಿಕ್ರಮಳೆ ನಿನಗೆಣೆ ಯಾರು ಶ್ರೀ ಲಕ್ಷ್ಮೀ-
ಕಾಂತ ರೂಪದಿ ಕೊಂದೆ ಮಧುಕೈಟಭರ ದೇವಿ ಪ

ಹರಿಕಿವಿಯಲಿ ಅವತರಿಸಿ ಮಧು ಕೈಟಭರ-
ವರೆನಿಸಿ ಪಡೆಯೆ ವಿಧಿಯಿಂ ವರವ
ಅರಿದು ವಿಷ್ಣುವಿನಿಂದ ಮರಣ ಇವರಿಗೆಂದು
ಸ್ಮರಣೆಯ ಮಾಡಿದ ದೇವಿ ಪಾದಪಂಕಜ
ಪರಮ ಮಂಗಳ ವಿಷ್ಣು ಎಬ್ಬಿಸು ಈ ಕ್ಷಣ
ಹರಣವನೆ ಕಾಯಲಿ ಮೂರ್ವರು ನಿಮ್ಮ
ಚರಣವ ನಂಬಿರಲಿ ಎತ್ತಿದಳಾಗ
ಅರಳಿದವು ಕಣ್ಣು ಉಸಿರಾಡಿತು ಮೂಗಿನಲಿ ೧

ಎದ್ದವನಚ್ಯುತ ಬ್ರಹ್ಮ ಏಳನೇ ಶರಧಿಯೊ
ಳೆದ್ದ ಬಡಬನಂದದಲಿ ಮೃತ್ಯುವ
ಗೆದ್ದ ಮೃತ್ಯುವಿನಂತಾಗಲು ಸಿಡಿಲಿನ
ಮುದ್ದೆಯಂದದಿ ಕಣ್ಣ ಕಿಡಿಯುಕ್ಕೆ ಔಡಗಿ-
ದೆದ್ದು ಚಕ್ರಕೆ ಕೈಯನಿಕ್ಕುತ ಹೊಯ್ದನು
ಅದ್ದಲು ಆ ಮಧುವ ಕೈಟಭನನ್ನು

ಒದ್ದು ಹಾಕಿದ ಶಿರವ ಇಬ್ಬರ ಕೂಡೆ
ಬಿದ್ದರು ಮಹಾಹವ ಮೂರ್ವರ ಬಹು-
ಯುದ್ಧವ ಹೇಳುವುದೇನು ಆ ಬಹು ರೌದ್ರವ ೨

ಆದುದು ಪಂಚ ಸಹಸ್ರ ವರುಷ ಯುದ್ಧ
ತೊಯ್ದರು ರಕ್ತದಿ ಕ್ರೋಧದುಬ್ಬಟ್ಟೆಯಿಂದ
ಕಾದು ಕರಗಿದುದುಕವು ವಿಷ್ಣು ಬೇಸರ್ತ-
ಮದ ಬೇಡಿರಿ ವರವನು ನೀಬೇಡೆನೆ ಕೊಟ್ಟ-
ರಾದರೆ ಚಕ್ರದಿ ತಲೆ ಹರಿಯಲೆಂದು
ಛೇದಿಸಿದನು ಶಿರವ ಮೇಧಸು ಕೊಬ್ಬು
ಮೇದಿನಿಯಾದಿರವ ಹೊಗಳಿದ ಬ್ರಹ್ಮ
ಮಾಧವನ ಸ್ತೋತ್ರವ ತಾನೆಯಾದ
ಬೋಧ ಚಿದಾನಂದ ಬಗಳಾ ಚಾರಿತ್ರವ ೩

## ೯

ಎನ್ನವಳಗೆ ಇದ್ದು ಪರದೇಶಿ ನಾ
ನೆನ್ನ ನೀಗ ಹಳಿವರೇನೋ ಪರದೇಶಿ ಪ

ಎನ್ನಲಿಂದ ಮಲಗುತಿದ್ದೆ ಪರದೇಶಿ
ಎನ್ನಲಿಂದ ಉಣ್ಣುತಿದ್ದೆ ಪರದೇಶಿ ನೀ
ಎನ್ನಲಿಂದ ಉಡುವುತಿದ್ದೆ ಪರದೇಶಿ ೧

ಎನ್ನಲಿಂದ ನಡೆವುತಿದ್ದೆ ಪರದೇಶಿ ನೀ
ಎನ್ನಲಿಂದ ನಡೆವುತಿದ್ದೆ ಪರದೇಶಿ
ಎನ್ನಲಿಂದ ಮಲಗುತಿದ್ದೆ ಪರದೇಶಿ ನೀ
ಎನ್ನಲಿಂದ ಕುಡಿವುತಿದ್ದೆ ಪರದೇಶಿ ೨

ಉಪಕಾರವ ನೀನರಿಯಾ ಪರದೇಶಿ ನೀ
ನಪಕಾರವ ಮಾಡುತಿದ್ದೆ ಪರದೇಶಿ

ಗುಪಿತ ಗುರು ಚಿದಾನಂದ ಪರದೇಶಿ
ನಿಪುಣ ನಾನು ನೀನೇ ಕಂಡ್ಯಾ ೩

## ೧೦

ಎಲ್ಲ ತಾಪತ್ರಯದ ಚಿಂತೆ ಬಗಳಗೆ ಹತ್ತಿಹುದು
ಸೊಲ್ಲು ಸೊಲ್ಲಿಗೆ ನೆನೆವ ಚಿಂತೆ ಎನಗೆ ಹತ್ತಿಹುದು ಪ

ಮಡದಿ ಸುತರು ಮನೆಯ ಪಶುವು ಬಗಳೆಗೆ ಹತ್ತಿಹುದು
ಷಡು ಚಕ್ರಂಗಳ ಭೇದಿಪುದೆಲ್ಲಾ ಎನಗೆ ಹತ್ತಿಹುದು
ಕೊಡು ಕೊಳ್ಳುವುದು ಹಾಕುವುದೆಲ್ಲಾ ಬಗಳೆಗೆ ಹತ್ತಿಹುದು
ಎಡೆದೆರಪಿಲ್ಲದೆ ನಾದವ ಕೇಳುವುದೆನಗೆ ಹತ್ತಿಹುದು ೧

ನಿತ್ಯ ನಿತ್ಯದ ಪರಾಮರಿಕೆಯು ಬಗಳೆಗೆ ಹತ್ತಿಹುದು
ಮತ್ತೆ ಭ್ರೂಮಧ್ಯದ ಅರಿವೆಯ ಹುಚ್ಚು ಎನಗೆ ಹತ್ತಿಹುದು
ಬಿತ್ತಿ ಬೆಳೆಯುವುದು ಮಳೆಯಿಲ್ಲೆಂಬುದು ಬಗಳೆಗೆ ಹತ್ತಿಹುದು
ಎತ್ತೆತ್ತಲು ತಾ ಬೆಳಕ ನೋಡುವುದು ಎನಗೆ ಹತ್ತಿಹುದು ೨

ಭಕುತರ ಬದುಕನು ಹಸನು ಮಾಡುವುದು ಬಗಳೆಗೆ ಹತ್ತಿಹುದು
ಭಕುತಿಯ ಶರಧಿಲಿ ಮುಳುಗಾಡುವುದು ಎನಗೆ ಹತ್ತಿಹುದು
ಸದಾ ಕಾಲವು ಕಾದಿರುತಿಹುದು ಬಗಳೆಗೆ ಹತ್ತಿಹುದು
ಚಿದಾನಂದ ಶ್ರೀ ಬಗಳೆಯ ಭಜಿಪುದು ಎನಗೆ ಹತ್ತಿಹುದು ೩

## ೧೧

ಏನ ಪಡೆದಿದ್ದೆನೋ ಸುಕೃತವ ಮುಂ-
ದೇನ ಪಡೆದಿದ್ದೆನೋ ಮಾನ ನಿಧಿಯು
ಚಿದಾನಂದ ಗುರುವ ಕಂಡು
ತಾನೆ ತಾನಾಗಿ ತನ್ನನು ಮರೆದಿರ್ದುದ ಪ

ಆನಂದ ಮೂರುತಿಯ ನಾನೀಗ ಅತಿ ವೇಗ ಧ್ಯಾನಿಸಲು
ಏನೇನು ತೋರದೆ ಯೋಚನೆಗಳು ಕುಂದಿ
ನಾನು ನೀನೆಂಬ ನೀತಿಯ ಮರೆದಿರ್ದುದಾ ೧

ಶತಕೋಟಿ ಶಶಿಸೂರ್ಯರ ಪ್ರಭೆಯ ತಾಳ್ದು
ಶತ ಪತ್ರಗಳ ಗೇಹನ ಅತಿಹರುಷದಿ ಕಂಡು ಆತನೇ ತಾನಾಗಿ
ಮತಿಯನೆ ತೊರೆದೆ ಮರೆತು ನಾ ನಿರ್ದುದ ೨

ನಿರುಪಮ ನಿರ್ಗುಣನ ನಿರ್ವಿಕಲ್ಪ ನಿರವಯ ನಿರೀಹನ
ವರಚಿದಾನಂದ ಗುರುವ ವರದಾತನ
ಚರಣ ನೆನೆದು ಮನ ಚಲಿಸದಂತಿರ್ದುದ ೩

## ೧೨

ಒಳಗೆ ಹೊರಗೆ ಓಡಾಡುವ ಉತ್ತಮಳಾರು ಹೇಳೆ
ಬಳಿಕ ಹೇಳುವೆ ಬಹಳ ಭಾಗ್ಯ ಬಗಳಾಂಬ ಕೇಳೇ ಪ

ಸರಿ ವಾಲೆ ಕಪ್ಪನ್ನಿಟ್ಟು ವಜ್ರಗಳ ಸರವನೆ ಹಾಕಿ
ಪರಮಾನಂದಪಡಿಸುತಿಹ ಪಂಡಿತಳಾರು ಹೇಳೆ
ದುರುಳ ಮಹಿಷಾಸುರನ ಕೊಂದು ಮರಳಿ ಚಿದಾನಂದನಲ್ಲಿ
ಸ್ಥಿರವ ಮಾಡಿಯಿಹಳು ಬಹಳ ಶಿಷ್ಟಳು ಕೇಳೇ ೧

ಪಿಲ್ಲಿ ಮಂಟಿಕೆ ಗೆಜ್ಜೆಯನಿಟ್ಟು
ಘುಲ್ಲು ಘುಲ್ಲು ಹೆಜ್ಜೆಯನಿಕ್ಕುತ
ಪಲ್ಯ ಕಾಯ ಬಡಿಸುತಿಹಳಾರು ಹೇಳೆ
ಮಲ್ಲ ನಿಶುಂಭರ ಕೊಂದು ಮಹಾತ್ಮ ಚಿದಾನಂದ
ನಲ್ಲಿ ಮೆಲ್ಲಗೆ ವಾಸವ ಮಾಡಿಹ ಬಗಳ ಮಹಿಮಳು ಕೇಳೇ ೨

ದುಂಡು ಮುತ್ತ ಕಟ್ಟಿ ಹೇಮಗುಂಡು ಸರವೊಲೆವುತ
ಮಂಡಿಗೆಯ ಹಿಡಿದು ಬಡಿಸುತಿಹ ಉದ್ದಂಡಳಾರು ಹೇಳೆ

ಚಂಡ ಮುಂಡರ ಶಿರವ ಖಂಡಿಸಿ ಚಿದಾನಂದನಲಿ ಅ-
ಖಂಡ ವಾಗಿಹಳು ಬಗಳ ಪುಂಡಳು ಕೇಳೇ ೩

ಹೊನ್ನ ಕಡಗ ಸೀರೆಯುಟ್ಟು ಚೆನ್ನ ರತ್ನದ ಕುಪ್ಪಸ ತೊಟ್ಟು
ಅನ್ನವ ಹಿಡಿದು ಬಡಿಸುತಿಹ ಮಾನ್ಯಳು ಯಾರು ಹೇಳೇ
ಕುನ್ನಿ ದುರ್ಜನರ ಭೇದಿಸಿ ಚಿದಾನಂದ ಗುರುವ
ಬೆನ್ನು ಕಾದು ಬಿಡದೆ ಇಹಳು ಬಗಳಾಂಬ ಕೇಳೇ ೪

ನಿತ್ಯಾತ್ಮ ಚಿದಾನಂದನಲ್ಲಿ ನಿಲುಗಡೆಯಿಲ್ಲದೆ ಓಡಾಡುತ
ಸುತ್ತಮುತ್ತ ಸುಳಿದಾಡುವ ಸೂಕ್ಷ್ಮಳಾರು ಹೇಳೇ
ಕರ್ತೃವಾಗಿ ತತ್ವವ ಕೇಳುತ ಚಿದಾನಂದನಲಿ ವಾಸವ
ಮಾಡುವ ಮಹಾಮಾಯಿ ಬಗಳೆ ಪಾರುಪತ್ಯಳು ಕೇಳೇ ೫

## ೧೩

ಕಂಡಿರೆ ಬಗಳಾಶ್ಚರ್ಯವ ಕಂಡಿರೇ ಬಗಳಾಶ್ಚರ್ಯವ
ದಿಂಡೆಯರಾದವರನ್ನೆಲ್ಲ ತುಂಡು ಮಾಡಿ
ಶುಂಭ ನಿಶುಂಭರಸುವ ಕೊಂಡವಳ ಪ

ಕ್ರೂರ ಧೂಮ್ರಾಕ್ಷ ಶುಂಭರಾಜನ ನೇಮದಿಂದ
ಸಾರಿ ದೇವಿಯನ್ನು ಮುಂದಲೆ ಹಿಡಿದು ಎಳೆವೆನೆನಲು
ವೀರಳೀಗ ಕೇಳಿ ಅವಡುಗಚ್ಚಿ ಕಣ್ಣು ತೆರೆಯೆ
ಹಾರಿದನು ಧೂಮ್ರಾಕ್ಷನುರಿದು ಭಸ್ಮವಾದನು ೧

ಚಂಡ ಮುಂಡಗಪ್ಪಣೆಯನುದ್ದಂಡ ಶುಂಭನೀಗ ಕೊಡಲು
ಖಂಡೆಯವನೆ ಹಿರಿದು ಮುಂಕೊಂಡು ದೇವಿ ಬಲಕೆ ನಿಂದು
ಗುಂಡೆಯರ ಕೂದಲು ಹಿಡಿದು ತುಂಡು ಮಾಡಿಯೆ ತಿಂದು
ಚಂಡ ಮುಂಡರ ತಲೆಯ ಖಂಡಿಸಿದ ವೀರಳ ೨

ರಕ್ತ ಬೀಜನ ರಕ್ತದಿಂದ ರಕ್ತಬೀಜರಾಗೆ
ರಕ್ತನಯನಿ ಹಾಸಿದಳು ನಾಲಿಗೆಯ ಭೂಮಿಗೆ
ರಕ್ತ ಬೀಜರನ್ನು ಕಡಿದು ನುಣ್ಣಗೆ ನುಂಗಿ ಆದಿ–
ರಕ್ತ ಬೀಜನನ್ನು ಶೂಲದಿಂದ ತಿವಿದು ತಿಂದಳು ೩

ಅಂಬನ ಮೇಲೆ ನಿಶುಂಭನೆರಡು ಹಸ್ತ ಹೋಗಿ
ಎಂಬೆನೇನು ಒದಯಲಾಗ ಅಂಬುಜಾಕ್ಷಿ ತೊಡೆಯ ಕಡಿಯೆ
ತುಂಬಿ ಕೋಪದಿಂದಲವನು ತಿಂಬೆನೆಂದು ಮುಂದೆ ಬರಲು
ಅಂಬಿನಿಂದ ತಲೆಯ ಕಳೆದಳಂಬರದಲುಘೇ ಎನಲು ೪

ತಕ್ಕೆಯಲ್ಲಿ ಬಿದ್ದು ದೆಕ್ಕಬುಕ್ಕಿಯಾಡೆ ಶುಂಭನನ್ನು
ನಕ್ಕು ಶಿವನ ಶೂಲದಿಂದಲಿಕ್ಕಿದಳು ಖಳನ ಎದೆಯ
ಉಕ್ಕಿ ಹರುಷ ದೇವತೆಗಳು ಓಲಗವನೆ ಮಾಡಿದರು
ದುಃಖಾತೀತ ಚಿದಾನಂದ ತಾನಾದ ಬಗಳೆಗೇ ೫

## ೧೪

ಕವಚ ಕವಚದೊಳು ಬ್ರಹ್ಮಾಸ್ತ್ರ ವಜ್ರ ಕವಚ
ಕವಚ ಏಳು ಕೋಟಿಯೊಳು ರಾಜ ಕವಚ ಪ

ಬಗಳಾ ಸ್ಮರಣೆಯಲಿ ಇರುಳು ಹಗಲು ಇಹುದೇ ವಜ್ರಕವಚ
ಬಗಳಾ ಸ್ತೋತ್ರವ ಮಾಡುತಿಹುದೇ ವಜ್ರ ಕವಚ
ಬಗಳಾ ಮೂರ್ತಿಯ ಧ್ಯಾನದೊಳಿರುವುದೇ ವಜ್ರ ಕವಚ
ಬಗಳೆಯ ಅರ್ಚನೆಯೊಳಿಹುದೇ ವಜ್ರ ಕವಚ ೧

ಬಗಳಾದೇಹವ ತನ್ನದು ಮಾಡುವುದೇ ವಜ್ರ ಕವಚ
ಬಗಳಳಾಗಿ ತಾನಿರುವುದೇ ವಜ್ರಕವಚ
ಬಗಳಾ ಒಳಹೊರಗೆ ಒಂದಾಗಿಹುದೇ ವಜ್ರಕವಚ
ಬಗಳೆ ನಿಜವಾಗಿ ಒಲಿದಿಹುದೇ ವಜ್ರಕವಚ ೨

ನಾರಾಯಣ ಕವಚ ಶಿವಕವಚ ಶಕ್ತಿಕವಚ
ಸೂರ್‍ಯ ಕವಚ ಎಲ್ಲ ದೇವ ಕವಚ
ಕಾರಣಾತ್ಮಕ ಚಿದಾನಂದ ಬಗಳ ಕವಚ
ಆರ ಯತ್ನವು ನಡೆಯದಿಹುದದು ವಜ್ರಕವಚ ೩

## ೧೫

ಗೆಳೆತನ ಹಿಡಿದನೆ ಬಗಳೆಯ ಕೂಡೆ
ಗೆಳೆತನ ಆರಿಗೂ ದೊರಕದ
ತನಯ ಸತಿಯು ಧನವೆಂಬುದ ಸೇರದ
ಜನನ ಮರಣಕೆ ಹೊರತಾದ ಪ

ಎನ್ನ ಕಾಲು ಬಗಳೆ ಕಾಲಾಗಿ
ಎನ್ನ ಹಸ್ತ ಬಗಳೆ ಹಸ್ತವಾಗಿ
ಎನ್ನ ಬುಜ ಬಗಳೆ ಬುಜವಾಗಿ
ಎನ್ನ ಕಣ್ಣೇ ಬಗಳೆ ಕಣ್ಣಾಗಿ ೧

ಎನ್ನ ದೇಹವು ಬಗಳೆ ದೇಹವಾಗಿ
ಎನ್ನ ಇಂದ್ರಿಯ ಬಗಳೆ ಇಂದ್ರಿಯವಾಗಿ
ಎನ್ನ ಮನವು ಬಗಳೆ ಮನವಾಗಿ
ಎನ್ನ ಜೀವ ಬಗಳೆ ಜೀವವಾಗಿ ೨

ನಾನೇ ಬಗಳೆಯಾಗಿ ಬಗಳೆಯೇ ನಾನಾಗಿ
ನಾನು ನೀನು ಎಂಬೆರಡುಳಿದು
ಜ್ಞಾನ ಚಿದಾನಂದ ಬ್ರಹ್ಮಾಸ್ತ್ರ ತಾನಾಗಿ
ತಾನೇ ತಾನಾದ ಗೆಳೆತನವ ೩

## ೧೬

ಚಂಡಳಹುದೋ ನೀನು ಕದನ ಪ್ರಚಂಡಳಹುದೋ ನೀನು
ದಿಂಡೆಯರನ್ನು ಖಂಡಿಸಿ ತುಂಡಿಪ
ಚಂಡ ವಿಕ್ರಮ ಮಾರ್ತಾಂಡ ಮಂಡಿತ ದೇವಿ ಪ

ಭುಗು ಭುಗು ಭುಗಿಲೆಂದು ಮಧು ಕೈಟಭೆಂಬುವರು
ನೆಗೆ ನೆಗೆ ನೆಗೆಯುತ ರಣಕೆ ಬರಲು ಪೋಗಿ
ಜಿಗಿ ಜಿಗಿ ಜಿಗಿದವರ ನೀನು ಯುದ್ಧವ ಮಾಡಿ
ನೆಗೆದುರೆ ಖಡ್ಗವನು ಝಡಿದು ಧಗ ಧಗ
ಧಗಿಸುವ ಚಕ್ರವನು ಇಡಲು ಶಿರವು
ಜಿಗಿಯೆ ಚರ್ಮವ ಸೀಳಿ ಮಾಡಿದೆ ಭೂಮಿಯ ನೀನು ೧

ಘಟ ಘಟಾಕೃತಿಯಿಂದ ಮಹಿಷಾಸುರನ ಬಲ
ನಟ ನಟ ನಟಿಸುತ ಪಟು ಭಟರಿದಿರಾಂತು
ಘಟಿಸಿ ರಣಕೆ ಬರಲು ಫಲ್ಗಳ ಕಟ
ಕಟನೆ ಕಡಿದು ನಿಲ್ಲಲು ಅಸುರ ಬಲ
ಸೆಟೆದು ಹಿಂದಾಗುತಲಿರಲು ಸುರ
ಕಟಕ ನಿಮ್ಮನ್ನು ಹೊಗಳಿ ಕೊಂಡಾಡಲು ೨

ಘುಡು ಘುಡು ಘುಡಿಸುತ್ತ ಮಹಿಷಾಸುರನು ಬರೆ
ದಢ ದಢನೆ ಪೋಗಿ ಹೊಡೆದು ನಿನ್ನಯ ಪಾದ
ದಡಿಯೊಳವನ ಕೆಡಹಿ ಚದುರ ಬೀಳೆ-
ಕಡಿದು ಕಂಡವ ಕೊಡಹಿ ನಿಲ್ಲಲು ಸುರ
ರೊಡೆಯ ನೆಲ್ಲರ ನೆರಹಿನಿಲ್ಲಲು ನೀನು
ಬಿಡದೆ ಅಭಯವಿತ್ತು ಹರುಷದಿ ವಾರಾಹಿ ೩

ಶುಂಭ ನಿಶುಂಭರೆಂಬ ರಾಕ್ಷಸರುಪಟಳ
ಅಂಬುಜಾಂಡಕೆ ರಂಭಾಟವದು ಹೆಚ್ಚೆ

ಜಂಭಾರಿ ದಿವಿಜರೆಲ್ಲ ನಿಲ್ಲದೆ ದೂರ
ಬೆಂಬಿಡದ್ಹೇಳಲೆಲ್ಲ ಕೇಳಿಯೆ ಉ-
ಗ್ರಾಂಬಕಳಾಗಿ ನಿಲ್ಲೆ ಅಸುರ ಕಾದಂಬ ನಿನ್ನನು
ಕಂಡು ಬೆದರಿ ವೋಡಿದರೆಲ್ಲ ೪

ಆರು ನೀನೆಂದು ಶುಂಭನ ದೂತ ವಿ
ಚಾರಿಸೆ ಕೇಳಿಯೆ ಎಮ್ಮರಸನಿಗೆ
ನಾರಿ ನೀ ಸತಿಯಳಾಗು ಜಾಗತ್ಯಕ್ಕೆ
ವೀರ ಶುಂಭನ ಸೊಬಗು ಬಣ್ಣಿಸುವೊಡೆ
ಮೂರು ಲೋಕಕೆ ಹೊರಗು ಬಾ ಎನೆ ನೀನು
ಚೋರಗುತ್ತರ ವಿತ್ತೆ ಹೇಳ್ವೆನೇನದ ಬೆರಗು ೫

ಕೇಳು ಶುಂಭನ ದೂತ ಖೇಳ ಮೇಳದಿ ನಾನು
ಕೀಳು ಸಪ್ತದಿಯಾಡ್ದೆ ಈರೇಳು ಲೋಕದಲಿ
ತೋಳು ಸತ್ವವು ಬಲಿದು ಸಮರದಲಿ
ಸೋಲಿಸೆನ್ನನು ಪಿಡಿದು ಒಯ್ಯಲು ಅವ
ರಾಳು ಆಗಿಯೆ ನಡೆದು ಬಹೆನು ಪೋಗಿ
ಖೂಳರ ಕರೆದು ತಾ ರಣಕೆಂದು ನುಡಿಗು ೬

ಅಂಬ ವಚನವ ಶುಂಭ ಕೇಳಿ ಸುಗ್ರೀವ
ನೆಂಬ ನಿಶಾಚರ ಶುಂಭನಲ್ಲಿಗೆ ಪೋಗಿ
ಶಾಂಭವಿಯಾಡಿದುದ ಶಬ್ದವ ಕೇಳ-
ಲಂಬುದಿಯ ನೀಂಟುವುದ ವಡಬಾನಳ-
ನೆಂಬವೋಲ್ ಕೋಪವ ತಾಳ್ದು ಬರಲು ಸರ್ವ
ಸಂಭ್ರಮದಲಿ ನೋಡಿ ಎದ್ದು ನೀ ನಿಂದುದನು ೭

ಸರಸರನೆ ಶುಂಭಾಸುರನ ಬಲ ಬರೆ ಕಂಡು
ಗರಗರನೆ ಹಲ್ಲ ಕೊರೆದು ಅವನ ದಂಡ
ಸರಕುಗೊಳ್ಳದೆ ಛೇದಿಸಿ ಸುಭಟ
ವೀರರಿರವನೆಲ್ಲಾ ಶೋಧಿಸಿ ಶುಂಭ ನಿಶುಂ

ಭರ ಶೋಣಿತ ಕಾರಿಸಿ ಸುರರಿಗಿತ್ತೆ
ಸ್ಥಿರವಪ್ಪ ಸೌಭಾಗ್ಯದವರ ನೀ ಪಾಲಿಸಿದೆ ೮

ದುಷ್ಟ ಜನರೆಲ್ಲ ಸುಟ್ಟು ಭಸ್ಮಮಾಡಿ
ಶಿಷ್ಟ ಜನರ ಪ್ರಾಣಗುಟ್ಟು ನೀನೆಂತೆಂಬರ
ನಟ್ಟಿ ದಟ್ಟಿಸಿದೆ ಪರಾಂಬ ಭಕ್ತರ ಅ–
ಭೀಷ್ಟ ಪಾಲಿಪ ಜಗದಾಂಬ ದುರ್ಜನರಘ–
ರಟ್ಟಳಹುದೇ ತ್ರಿಪುರಾಂಬ ರಕ್ಷಿಸು ಎನ್ನ
ಶಿಷ್ಟ ಚಿದಾನಂದ ಅವಧೂತ ಬಗಳಾಂಬ ೯

## ೧೭

ಚಂಡಿಯ ಕಂಡಿರಾ ಪ್ರಚಂಡೆಯ ಕಂಡಿರಾ
ದಿಂಡೆಯರಾದವರ ಖಂಡಿಸುತಿರುವ ಕತ್ತಿಯ
ತಿರುಹುತಿರುವ ಗದೆಯ ಪ

ನಿಷ್ಟರಾಗಿಹ ಭಕ್ತರ ದೂರನು ಕೇಳಿ ಕೋಪವತಾಳಿ
ಕಟ್ಟುಗಳಿಲ್ಲದ ರೌದ್ರವು ತೋರಲು
ಮೋರೆ ಕಂಗಳು ಕೆಂಪೇರಲು
ಉಟ್ಟಿಹ ಪೀತಾಂಬರವನೆ ಕಾಶಿಯ
ಹೊಯ್ದು ದಿಟ್ಟ ನಿಟ್ಟುಸಿರಸುಯ್ದು
ಕಟ್ಟಿದಳು ಆಯುಧಂಗಳ ಧರಿಸಿ ಝಳಝಳ ಝಳಪಿಸಿ ೧

ಹೂಕಾಂರವನೇ ಮಾಡುತ ದೇಹವ ಮರೆದು ಕಂಗಳ ತೆರೆದು
ಬೆಂಕಿಯ ಸುರಿಯಲು ಎಡಬಲ ಅದಿರೆ ಹರಿಹರ ಬೆದರೆ
ಅಂಕೆಯಿಲ್ಲದ ಸಿಡಿಲಬ್ಬರದಂತಾಗೆ ಹಾ ಎಂದು ಕೂಗೆ
ಪಂಕಜಮುಖಿ ತಾ ಕೂಗುತ ಅವುಡುಗಚ್ಚೆ
ಭೂಮಿ ಬಾಯಿ ಬಿಚ್ಚೆ ೨

ನಡೆದಳು ಶತ್ರುಗಳೆಡೆಗೆ ಆಗ ವೇಗದಲಿ ಮನೋ ಯೋಗದಲಿ
ತೊಡರಿಕೊಂಡಳು ವೈರಿ ಸೇನೆಯ ನಿಲಿಸಿ ತಾ ಘುಡು ಘುಡಿಸಿ
ತುಡುಕಿ ಪಿಡಿದಳು ದುಷ್ಟರ ಜಿಹ್ವೆಯ
ನೂಕಿ ತಾ ಮುಂದಕೆ ಜೀಕಿ
ಖಡುಗದಿ ಸೀಳುತ ರೌದ್ರದಿ ನಿಂತಳು ವೀರೆ
ಕಂಗಳು ಕಿಡಿಯನೆ ಕಾರೆ ೩

ಹೊಯ್ದಳಾಕ್ಷಣ ದುರ್ಜನ ಸೇನೆಯ ಬಗಳೆ
ರಿಪುತಲೆಗಳು ಉರುಳೆ
ತೊಯ್ದಳಾಕ್ಷಣ ರಕ್ತದ ಬಿಂದಿಗೆ ಉಕ್ಕೆ ಮುಖ ಮಟವಿಕ್ಕೆ
ಸುಯ್ದರು ವೈರಿಗಳೆಲ್ಲರು ಗತಿಮತಿಗೆಟ್ಟು ಬಹುಕೇಡ ಕೆಟ್ಟು
ಕಾಯ್ದಳು ತನ್ನನು ನಂಬಿದವರ ಭಯ ಹರಿಯೆ
ಬಹು ಸುಖ ಸುರಿಯೆ ೪

ಹಮ್ಮಿನವರನೆಲ್ಲರ ತೊಳೆದು ಶಾಂತಳಾಗಿ ಬಗಳೆ ತಾ ತೃಪ್ತಳಾಗಿ
ಬ್ರಹ್ಮ ಚಿದಾನಂದ ಭಕ್ತನಾಥನ ಸೇರಿ ಅಮಿತಾನಂದವೇರಿ
ಸುಮ್ಮಗೆ ಪೂಜಿಸಿಕೊಳುತ ಕೇವಲ ಘನದಿ ತಾ ನಿತ್ಯನುದಿನದಿ
ಬ್ರಹ್ಮರಂಧ್ರದಿ ವಾಸ ಮಾಡಿಹ ಸುಖಿಯ
ಆ ಬಗಳಾಮುಖಿಯ ೫

## ೧೮

ಚಂದವೇ ಚಕ್ರವಾಹಿನಿ ಚಿದ್ರೂಪಿಣಿ
ಸಾಂದ್ರ ಸರ್ವತ್ರ ಸಾಕ್ಷಿಣಿ
ಮಂದಹಾಸ ಮುಖಾಂಬುಜ ಕೋಮಲ
ಸುಂದರಗಾತ್ರೇ ಸುಮನಸ ಸ್ತೋತ್ರೆ ಪ

ವಿಶ್ವಾತ್ಮ ವಿಶ್ವರೂಪಿಣಿ ವಿಶ್ವಂಭರಿ
ವಿಶ್ವ ಪ್ರಕಾಶ ಮಣಿ

ವಿಶ್ವಕರ್ತೃ ವಿಶ್ವೇಶ್ವರ ವಿನುತೇ
ವಿಶ್ವಾತೀತೇ ವಿಶ್ವ ಭಗಿನೇ ೧

ನಾದ ಬಿಂದು ಕಳಾತೀತೆ ನಾರಾಯಣಿ
ವೇದ ವೇದಾಂತ ವೇದ್ಯೆ
ಭೇದಾತೀತೆ ಯೋಗೀಶ್ವರ ಭರಣಿ
ಸಾಧು ಜನರ ಭವ ಸರ್ವ ಸಂಹಾರಿಣಿ ೨

ಭೀಮ ತೀರದಿ ನೆಲೆಸಿಹ ಸನ್ನುತಿ ಮಧ್ಯ
ಪ್ರೇಮದಿ ನಿಂತಿಹ
ಕಾಮಿತವೀವ ಕರುಣಾಮಯಿ
ಸ್ವಾಮಿ ಚಿದಾನಂದ ಬಗಳ ಸ್ವರೂಪಿಣಿ ೩

## ೧೯

ಜಗಲಿಯ ಹಾಕಿದಳೆ ಬಗಳೆ ಜಗಲಿಯ ಹಾಕಿದಳೆ
ಸೊಗಸೇನ ಹೇಳಲಿ ಶತ್ರುಗಳನೆ ತಂದು
ಝುಗಿ ಝುಗಿಸುತ ಎನ್ನಯ ಎದುರಿಗೆ ಕುಳಿತು ಕೊಳ್ಳಲು ಪ

ತಲೆಗಳು ಥರದ ಕಲ್ಲು ಒಳ್ಳೊಳ್ಳೆಯ ಎಲುವುಗಳು ಹಾಸುಗಲ್ಲು
ಬಲಿದ ಮಾಂಸದ ಕೆಸರನೆ ಹಾಕಿ ಮೆತ್ತಿ
ಎಳೆದು ಹೆಣಗಳನು ತಂದು ಭರ್ತಿಯ ತುಂಬುತ ೧

ಮೆದುಳನೆ ಮಲ್ಲವ ಮಾಡಿ ಮೇಲೆಯೆ
ಪದರಂಗಾರವ ಮಾಡಿ ವಿಧವಿಧ ಚಿತ್ರವ ರಕ್ತದಿ ಬರೆದು
ತಿದಿಯ ಸುಲಿದು ಚರ್ಮವ ಹಾಸಿಗೆ ಹಾಕುತ ೨

ಕತ್ತಿಯ ಹೆಗಲಲಿಟ್ಟು ಎನ್ನಯ ಸುತ್ತ
ಮುತ್ತ ತಿರುಗಾಡುತ ಸತ್ಯ ಚಿದಾನಂದನ ರಾಣಿ ಬಗಳಾಮುಖಿ
ಮತ್ತೆ ದುಷ್ಟರ ಕೊಂದು ವಿಶ್ರಾಂತಿ ಪಡೆಯಲು ೩

## ೨೦

ಜಯತು ಜಯತು ಜಯತು ಶ್ರೀ ಜಗ ಪ್ರೀತೆ
ಜಯತು ಹರಿಹರ ಮಾತೆ
ಜಯತು ಸುರಮುನಿ ಪೂತೆ ಭುವನ ವಿಖ್ಯಾತೆ ಪ

ಜಡಿ ಜಡಿ ಜಡಿದು ಕೋಪದಲಿ ಮಧು ಕೈಟಭರಿಬ್ಬರನು
ಘುಡು ಘುಡು ಘುಡಿಸು ಸಹಸ್ರ ಪಂಚಬುದ ಕಾದಿ
ತಡೆ ತಡೆ ತಡೆಯೆ ಸುದರ್ಶನಾಸ್ತ್ರದಿಂದವರ ಶಿರವ
ಕಡಿ ಕಡಿ ಕಡಿದೆ ಬಗಳಾಂಬ ಭಳಿರೆ ಜಗದಾಂಬ ೧

ಒದ ಒದ ಒದರಿ ಭೋ ಎಂದು ಮಹಿಷಾಸುರನ ಬಲವ
ಗದೆ ಗದೆಗದೆಯಿಂದವರ ಬೀಳಗೆಡಹಿ
ಬೆದ ಬೆದ ಬೆದಕಿ ಸುಭಟಾಗ್ರಣಿಗಳೆಂಬುವರನ್ನೆಲ್ಲ
ಸದೆ ಸದೆ ಸದೆದು ನೀಬಿಟ್ಟೆ ಅಖಿಲರಣ ದಿಟ್ಟೆ ೨

ಭರ ಭರ ಭರದಿ ಬರಲು ಮಹಿಷಾಸುರನೆಂಬುವನ
ತರಿ ತರಿ ತರಿದು ಅವನ ಸಾಹಸವ ಮುರಿದು
ಗರಗರಗರನೆ ಪಲ್ಗಳನೆ ಕೊರೆದು ಪದದಿಂದಲೊದ್ದೆ
ಸರಿ ಸರಿ ಸರಿಯೆ ಶಾರದಾಂಬ ಭಳಿಕೆ ತ್ರಿಪುರಾಂಬ ೩

ಖಣಿ ಖಣಿ ಖಣಿಲು ಖಣಿಲೆಂದು ಶುಂಭ ನಿಶುಂಭರನು
ದಣಿ ದಣಿ ದಣಿಸಿ ಕಾಳಗದಿ ಬೇಸರಿಸಿ ಬಳಿಕ
ಕಣೆ ಕಣೆ ಕಣೆಯಿಂದಲವರ ತಲೆಗಳನೆ ತರಿಸಿದೆ ನಿನಗೆ
ಎಣೆ ಎಣೆ ಎಣೆಯಾರು ದಿನಮಣಿಯೆ ಕಣಿಯೆ ೪

ಇಂತು ರಕ್ಕಸರನೆಲ್ಲ ಮರ್ದನವ ಮಾಡಿ
ಸಂತಸದಿ ದಿವಿಜರಿಗೆ ಅಭಯವಿತ್ತೆ
ಚಿಂತಾಯಕ ಚಿದಾನಂದಾವಧೂತನಿಗೆ
ಪಂಥದಾಸತಿ ಎನಿಪ ಪ್ರೀತೆ ವಿಖ್ಯಾತೆ ಜಯತು ಜಯತು ೫

## ೨೧

ದೂತ ಸಂವಾದ ದೇವಿಯೊಡನಾದುದು ಪ್ರೀತಿಯಲಿ ಕೇಳಿರೆಲ್ಲ
ದಾತೆ ಶುಂಭನ ಯುದ್ಧಕೆತಾಯೆಂದಟ್ಟಿ ಮಾತ ಮುಗಿಸಿದಳಲ್ಲ ಪ

ತೆರೆಕಣ್ಣ ಮುಚ್ಚಿದ್ದಿ ಯಾಕೆ ಕಾಡೊಳಗಿರುವೆ ಕೇಳೆಲೆ ಮಹಾದೇವಿ
ಪುರುಷರು ನಿನಗಾರು ಓರ್ವಳೆ ಮಾತಾಡು ಕೇಳೆಲೆ ಮಹಾದೇವಿ
ಕರೆಯಲು ಬಂದೆ ಹಿಮಾಚಲಕೆ ನಿನ್ನ ಕೇಳೆಲೆ ಮಹಾದೇವಿ
ಅರಸ ಶುಂಭನ ದೂತ ಸುಗ್ರೀವ ನಾನೀಗ ಕೇಳೆಲೆ ಮಹಾದೇವಿ ೧

ಕಣ್ಣ ತೆರೆದು ನುಡಿದಳು ದೇವಿ ಖಳನಿಗೆ ಕೇಳೆಲೋ ಸುಗ್ರೀವ
ನನ್ನ ಗೊಡವೆ ಏನು ನುಡಿಯಿಂದ ಕೆಲಸವೇನು ಕೇಳೆಲೋ ಸುಗ್ರೀವ
ನಿನ್ನಧಿಕಾರವದೇನು ಶುಂಭನಾರು ನೀನಾರು ಕೇಳೆಲೊ ಸುಗ್ರೀವ
ನನ್ನ ಗೊಡವೆ ಏನು ನುಡಿಯಿಂದ ಕೆಲಸವೇನು ಕೇಳೆಲೋ ಸುಗ್ರೀವ ೨

ನಂಬೆನ್ನ ಮಾತನು ಕಪಟವೇನಿಲ್ಲ ಕೇಳೆಲೆ ಮಹಾದೇವಿ
ಶುಂಭನ ಭಾಗ್ಯ ಹೇಳಲಿಕಳವಲ್ಲ ಕೇಳೆಲೆ ಮಹಾದೇವಿ
ತುಂಬಿವೆ ಮನೆಯೊಳು ದಿವ್ಯ ರತ್ನವು ಕೇಳೆಲೆ ಮಹಾದೇವಿ
ಶುಂಭಗೆ ನೀನು ಕಡೆರತ್ನ ದೊರಕಲು ಕೇಳೆಲೆ ಮಹಾದೇವಿ ೩

ಕರುಣದಿ ಕಪಟವಿಲ್ಲದಲೆ ನೀನು ಕೇಳ್ವೊಡೆ ಕೇಳೆಲೋ ಸುಗ್ರೀವ
ಇರಬಾರದು ಸುಮ್ಮಗಿದ್ದುದನಾಡಿವೆವು ಕೇಳೆಲೋ ಸುಗ್ರೀವ
ಪುರುಷರು ಇಂದಿನವರೆಗಿಲ್ಲ ನಾ ಸ್ವತಂತ್ರ ಕೇಳೆಲೋ ಸುಗ್ರೀವ
ಪುರುಷರಿಗೋಸ್ಕರ ನಾನು ತಪವನು ಮಾಡುವೆ ಕೇಳೆಲೋ ಸುಗ್ರೀವ ೪

ಶುಂಭನು ಶೀಘ್ರದಿ ಕರೆತಾರೆಂದನು ನಿನ್ನ ಕೇಳೆಲೆ ಮಹಾದೇವಿ
ಶುಂಭನ ಭಾಗ್ಯ ದೊರಕಿದಡೆ ನೀ ಕೃತಾರ್ಥೆ ಕೇಳೆಲೆ ಮಹಾದೇವಿ
ಶುಂಭಗೆ ನಿನಗೆ ಸಕ್ಕರೆ ಹಾಲು ಬೆರೆತಂತೆ ಕೇಳೆಲೆ ಮಹಾದೇವಿ
ಶುಂಭಗೆ ಚಾಕರ ನಿನಗೆ ಚಾಕರ ನಾನು ಕೇಳೆಲೆ ಮಹಾದೇವಿ ೫

ಮಾಡಬಾರದ ಪ್ರತಿಜ್ಞೆಯ ಮಾಡಿಹೆನು ಕೇಳೆಲೋ ಸುಗ್ರೀವ
ಆಡಲಿ ಏನ ಅದೃಷ್ಟಹೀನೆಯು ಕಂಡ್ಯಾ ಕೇಳೆಲೋ ಸುಗ್ರೀವ
ಖಾಡಾ ಖಾಡಿಯಲಿ ಜಯಿಸಿದವನೆ ಭರ್ತನೆಂದೆನೆ ಕೇಳೆಲೋ ಸುಗ್ರೀವ
ಕೂಡಿ ಬರುವೆ ಮಾಡಿದ ಭಾಷೆಯ ಹುಸಿಯದೆ ಕೇಳೆಲೋ ಸುಗ್ರೀವ ೬

ಕರೆಯಲು ಬಿಗಿಯಲು ಬೇಡವೆ ನೀನೀಗ ಕೇಳೆಲೆ ಮಹಾದೇವಿ
ಥರಥರ ಸಾಲು ಸಾಲಿನ ಛತ್ರಿ ನಿನ್ನವು ಕೇಳೆಲೆ ಮಹಾದೇವಿ
ಇರುವನು ನೀ ಹೇಳಿದಂತ ಶುಂಭನು ಕೇಳೆಲೆ ಮಹಾದೇವಿ
ದೊರೆವುದು ನಿನಗೆ ತ್ರೈಭುವನದರಸುತನ ಕೇಳೆಲೆ ಮಹಾದೇವಿ ೭

ಕಂಡುದಿಲ್ಲವೋ ಈವರೆಗೆನ್ನ ಜಯಿಸಿದವರನ್ನು ಕೇಳೆಲೋ ಸುಗ್ರೀವ
ದಿಂಡುಗಡೆದರು ಎನ್ನೆದುರು ನಿಂತವರೆಲ್ಲ ಕೇಳೆಲೋ ಸುಗ್ರೀವ
ಗಂಡನ ಪಡೆದಿರೆ ಶುಂಭ ಜಯಿಸುವನೆನ್ನ ಕೇಳೆಲೋ ಸುಗ್ರೀವ
ಗಂಡನಾವನಿಲ್ಲದಿರೆ ಏನ ಮಾಡುವೆ ಕೇಳೆಲೋ ಸುಗ್ರೀವ ೮

ಚಾರ್ವಾಕರ ಮಾತಾಡಲು ಬೇಡ ಕೇಳೆಲೆ ಮಹಾದೇವಿ
ಬರ್ವಳು ನಿನ್ನ ಮಾತಿಗೆ ಶುಂಭ ಬಹನೇ ಕೇಳೆಲೆ ಮಹಾದೇವಿ
ಉರ್ವಿಗೆ ಕರ್ತನ ಎದುರಿಗೆ ನೀ ನಿಲ್ಲುವೆಯ ಕೇಳೆಲೆ ಮಹಾದೇವಿ
ಗರ್ವವ ಮಾಡಲು ಮುಂದಲೆ ಹಿಡಿದೊಯ್ವರು ಕೇಳೆಲೆ ಮಹಾದೇವಿ ೯

ಎನ್ನ ಪ್ರಾರಬ್ಧವು ಇದ್ದಂತೆ ಆಗುವುದು ಕೇಳೆಲೋ ಸುಗ್ರೀವ
ನಿನ್ನ ಮೇಲೇನು ಮಾತಿಲ್ಲವೋ ಕೇಳೆಲೋ ಸುಗ್ರೀವ
ಎನಗೆ ಹಿತಕಾರಿ ನೀನು ಅಹಿತ ನಾನೇ ಕೇಳೆಲೋ ಸುಗ್ರೀವ
ಇನ್ನು ಮಾತಾಡಬೇಡವೋ ಕರೆತಾನಡಿ ಕೇಳೆಲೋ ಸುಗ್ರೀವ ೧೦

ಇಂತು ವಿಳಾಸ ಮಾತನಾಡಿಯೆ ಖಳನನು ಕಳುಹಿದಳು ಪರಾಂಬೆ
ಎಂತು ಹೇಳ್ವನೋ ಶುಂಭನಾವಾಗ ಬರುವನೋ ಎನುತಲಿ ಜಗದಂಬೆ
ಚಿಂತೆ ಹರಿಪೆ ಸುರರನು ಶುಂಭನನು ಕಟ್ಟಿ ಎನುತಲಿ ಸರ್ವಾಂಬ
ಚಿಂತಯಕ ತಾನಾದ ಚಿದಾನಂದ ಕರುಣೆಯು ಬಗಳಾಂಬ ೧೧

## ೨೨

ದೂರಹವು ದೂರಹವು ದುರಿತಗಳೆಲ್ಲ
ಕ್ರೂರ ಸ್ತಂಭಿನಿ ಬಗಳೆ ಸ್ಮರಣೆ ಮಾತ್ರದಲಿ ಪ

ಕಳ್ಳರಡಕಟ್ಟಿದಲ್ಲಿ ಕಾರಾಗೃಹದಲ್ಲಿ
ಗುಲ್ಲಾದ ಸ್ಥಳದಲ್ಲಿ ಘನ ಗಾಳಿಯಲ್ಲಿ
ಎಲ್ಲ ರೋಗಗಳಲ್ಲಿ ಚಿಂತೆಗಳು ಮುತ್ತಿದಲ್ಲಿ
ಬಲ್ಲ ಬಗಳೆಯ ಸ್ಮರಣೆ ನಾಲಗೆಗೆ ಬರಲು ೧

ಮಾರಿ ದುರ್ಗಿಯಲ್ಲಿ ಮಹಾಗ್ರಹವು ಹಿಡಿದಲ್ಲಿ
ಮಾರಣವು ಮುಟ್ಟಿದಲ್ಲಿ ಮಹಾಕಾರ್ಯದಲ್ಲಿ
ಊರು ಮುತ್ತಿದಲ್ಲಿ ವಸ್ತು ಹೋಗಿದ್ದಲ್ಲಿ
ಕಾರಣ ಬಗಳೆ ಸ್ಮರಣೆ ನಾಲಗೆಗೆ ಬರಲು ೨

ಮಳೆಯೊಳು ಸಿಕ್ಕಿದಲ್ಲಿ ಸಾಯ್ವಸಮಯದಲ್ಲಿ
ಹೊಳೆಯೊಳು ಮುಳುಗಿದಲ್ಲಿ ಹೊಲ ಬೆಳೆಯದಲ್ಲಿ ಬ-
ಹಳ ದಾರಿದ್ರ್ಯದಲ್ಲಿ ಬೇಗೆ ಸುತ್ತಡಸಿದಲ್ಲಿ
ಬಲು ಚಿದಾನಂದ ಬಗಳೆ ಸ್ಮರಣೆ ನಾಲಗೆಗೆ ಬರಲು ೩

## ೨೩

ದೆಕ್ಕಬುಕ್ಕ ಇಕ್ಕಬೇಕು ಅಂಬನ ಮನದ
ಅಕ್ಕರವು ತೀರುವತನಕ ಪ

ಕೊರಳಿಗೆ ಬೀಳಬೇಕು ಅಂಬನ ಎದೆಯ
ಸೆರಗ ಹಿಡಿದು ಎಳೆಯಬೇಕು ಅಂಬನ
ಕರುಳನೀಗ ಪೀಕಬೇಕು ಅಂಬನ ಉಟ್ಟ
ನಿರಿಗೆ ಜಗ್ಗಿ ಬೀಳಬೇಕು ಅಂಬನ ೧

ತೊಡೆಯ ಮೇಲೆ ಹೊರಳಬೇಕು ಅಂಬನ ಮುಸುಕ
ಹಿಡಿದು ಎಳೆಯಬೇಕು ಅಂಬನ
ಕಡಿಯಬೇಕು ಗಲ್ಲವನ್ನು ಅಂಬನ ಸ್ತನವ
ಹಿಡಿದು ಕುಡಿಯ ಬೇಕು ಅಂಬನ ೨

ಓಡಿ ಬಂದು ಅಪ್ಪಬೇಕು ಅಂಬನ ಕುದುರೆ
ಮಾಡಿ ಹೆಗಲನೇರಬೇಕು ಅಂಬನ
ಓಡಬೇಕು ಒಡನಮುಟ್ಟಿ ಅಂಬನ ಸಾಕ್ಷಿ
ಗೂಢ ಚಿದಾನಂದ ಬಗಳಾಂಬನ ೩

## ೨೪

ದೇವಿಯ ನೋಡಿರೊ ಪರ ದೇವಿಯ ನೋಡಿರೋ
ಭಾವಿಸೆ ಅನುದಿನ ಹೃದಯದಿ ಬೆಳಗುವ ಕಳೆಯ ಚಿತ್ಪ್ರಭೆಯ ಪ್ರಭೆಯ ಪ

ಎಲ್ಲರ ಕೈಯಲಿ ಪೂಜೆಯಕೊಂಬ ಗುಣಿಯ ರತ್ನದ ಗಣಿಯ
ಒಲ್ಲೆನೆಂದರು ವರಗಳ ಕೊಡುವ ದಯಾಮಯಿಯ ಭಕ್ತ ಪ್ರಿಯೆಯ
ಬೆಲ್ಲದಂದದಿ ಮಾತುಗಳಾಡುವ ಸುಧೆಯ ಸುಖ ಶಾರದೆಯ
ಬಲ್ಲಿದ ಶತ್ರುಗಳಾಗಿಹ ರವರನು ಬಡಿವ ಕಡಿದುಡಿವ ೧

ಬ್ರಹ್ಮ ವಿಷ್ಣುರುದ್ರಾದಿಗಳವರ ತಾಯಿ ಮಹಾಮಾಯಿ
ಬೊಮ್ಮನು ಬರೆದಿಹ ಪ್ರಾರಬ್ಧವೆಲ್ಲವ ಸೆಳೆವ ಎಲ್ಲವ ಕಳೆವ
ಚಿಮ್ಮಿ ಹಾಕುವಳು ಕಂಟಕಂಗಳ ಬಿಡಿಸಿ ಅಭಯ ಕೊಡಿಸಿ
ತಮ್ಮವರೆಂದೇ ಭಕ್ತರ ಬದಿಯಲಿ ಇಹಳ ಮಹಾಮಹಿಮಳ ೨

ಚಿತ್ಕಲಾತ್ಮ ಚಿದಾನಂದನೆಂಬ ವಿಭುವಾಮಹಾ ಪ್ರಭುವ
ಹತ್ತಿರ ನಿಂತು ಬೆಳಗುತಲಿಹಳು ಕೋಟಿ ಸೂರ್ಯರ ಸಾಟಿ
ಮತ್ತೇ ಮೀರಿಯೆ ಬ್ರಹ್ಮರಂಧ್ರಕೆ ಸಾಗಿ ತಾ ವಾಸವಾಗಿ
ನಿತ್ಯದಿ ಜ್ಯೋತಿರ್ಮಯವಾಗಿ ತೋರುವ ಸಖಿಯ ಬಗಳಾಮುಖಿಯ ೩

## ೨೫

ನಿನ್ನ ನಾನೇನೆಂದೆನೆ ಬಗಳಾಮುಖಿ ನಿನ್ನ ನಾನೇನೆಂದೆನೆ
ನಿನ್ನ ನಾನೇನೆಂದೆ ತತ್ವವ ಕೇಳುತ ಚೆನ್ನಾಗಿ
ಎನ್ನ ಬಳಿ ಕುಳ್ಳಿರೆಂದೆನಲ್ಲದೇ ಪ

ಹತ್ತಿಯನರೆ ಎಂದೆನೇ ಹಳ್ಳದ ನೀರ
ಹೊತ್ತು ಹಾಕೆಂದೆನೆ ಮತ್ತೆ ಹರಡಿಯ ತೋರಿ ಬೀ-
ಸುತ್ತೆ ಚವುರಿಯಲಿ
ಮತ್ತೆ ಗಾಳಿಯ ನೀಗ ಬೀಸೆಂದೆನಲ್ಲದೇ ೧

ಕುಸುಬೆಯ ಒಡೆಯೆಂದೆನೇ ಕುದುರೆಯ ಮೈ-
ಹಸನಾಗಿ ತೊಳೆಯೆಂದೆನೇ
ಹೊಸ ಪೀತಾಂಬರವನುಟ್ಟು ಹೂವಮುಡಿಯೊಳು ಇಟ್ಟು
ಅಸಿಯ ಹಿಡಿದು ಮುಂದೆ ನಡೆಯೆಂದೆನಲ್ಲದೆ ೨

ಕಲ್ಲನು ಹೊರು ಎಂದೆನೆ
ಎಲ್ಲ ಕೆಲಸವನೀಗ ಮಾಡೆಂದೆನೆ
ಬಲ್ಲಂತೆ ಪಾರುಪತ್ಯವನು ಮಾಡುತ್ತಾ ಕಾಲ್ಗೆಜ್ಜೆ
ಘುಲ್ಲೆನಿಸಿ ನಡೆ ಎಂದೆನಲ್ಲದೇ ೩

ಗೋಡೆಯನು ಬಳಿ ಎಂದೆನೆ
ರಾಗಿಯ ಹಿಟ್ಟನು ಬೀಸೆಂದೆನೆ
ಈಡಾಗಿ ಒಪ್ಪುವಾಭರಣಗಳ ನೀ ತೊಟ್ಟು
ಆಡುತ್ತ ಮಠದೊಳಗೆ ಇರು ಎಂದೆನಲ್ಲದೇ ೪

ಬಟ್ಟೆಯನು ಒಗೆ ಎಂದೆನೆ
ದುಷ್ಟರನು ಕೂಡಿ ನಲಿಯೆಂದೆನೇ
ಶಿಶು ಚಿದಾನಂದ ಬ್ರಹ್ಮಾಸ್ತ್ರ ದೈವ ತಾ
ನಿಷ್ಟ ದೇವತೆಯಾಗಿ ನೆಲೆಸೆಂದೆನಲ್ಲವೆ ೫

## ೨೬

ನೀನು ನಾನಾಗಿಹೆ ದೇವರೆ
ನೀನು ನಾನೆ ಎಂದು ಪೂಜಿಸುವೆ ದೇವರೆ ಪ

ನಿನಗೆ ಸ್ನಾನ ಮಾಡಿಸುತ್ತೇನೊ ದೇವರೆ ನಾ
ನಿನಗೆ ಮೈಯನೊರೆಸುತ್ತೇನೊ ದೇವರೆ
ನಿನಗೆ ವಸ್ತ್ರವುಡಿಸುತ್ತೇನೋ ದೇವರೆ
ನಿನಗೆ ಭಸಿತ ಹಚ್ಚುತ್ತೇನೋ ದೇವರೆ ೧

ನಿನಗೆ ಗಂಧ ಹಚ್ಚುತ್ತೇನೊ ದೇವರೆ
ನಿನಗೆ ಅಕ್ಷತಿಡುತ್ತೇನೊ ದೇವರೆ
ನಿನಗೆ ತುತ್ತುಗಳುಣಿಸುತ್ತೇನೊ ದೇವರೆ
ನಿನಗೆ ನೀರ ಕುಡಿಸುತ್ತೇನೊ ದೇವರೆ ೨

ನಿನಗೆ ಬಾಯ ತೊಳೆಸುತ್ತೇನೊ ದೇವರೆ
ನಿನಗೆ ವೀಳ್ಯ ಮಾಡಿಸುತ್ತೇನೊ ದೇವರೆ
ನಿನಗೆ ಶರಣು ಮಾಡುತ್ತೇನೊ ದೇವರೆ ನಾ
ನಿನಗೆ ಧ್ಯಾನ ಮಾಡುತ್ತೇನೊ ದೇವರೆ ೩

ನಿನಗೆ ಹಾಸಿಗೆ ಮಾಡಿತ್ತೇನೊ ದೇವರೆ ನಾ
ನಿನಗೆ ಮಲಗಿಸುತ್ತೇನೊ ದೇವರೆ
ನಿನಗೆ ಹಾಡಿ ಹೊಗಳುತ್ತೇನೊ ದೇವರೆ ನಾ
ನಿನಗೆ ಎಚ್ಚರಗೊಡುತ್ತೇನೊ ದೇವರೆ ೪

ನಿನ್ನನರಿವರಿಲ್ಲ ದೇವರೆ ಕೇಳು
ನಿನ್ನನರಿವಗೆ ನೀನೇ ದೇವರೆ
ನಿನ್ನ ಹೆಸರು ಚಿದಾನಂದ ದೇವರೆ ಎನಗೆ
ನಿನ್ನ ಸೇವೆ ನಿತ್ಯವಿರಲೋ ದೇವರೆ ೫

## ೨೭

ಪಾಲಿಸೆನ್ನ ಪಾರ್ವತೀಪತಿ ಪಾಲಿಸೆನ್ನನು
ಪಾಲಿಸೆನ್ನನು ಚೆಲ್ವ ಕಾಲಕಂದರ ಹರ
ಪಾಲಯಮಾಂ ಶಿವ ಲೋಲ ವಿರೂಪಾಕ್ಷ ಪ

ಶರನಾಮ ಸುರನ ಕುವರಿಯನಾಳಿದವನ
ಹಿರಿಯ ಪಿತನ ಶಿರವ ತರಿದವನ ಸುತನಿಗೆ
ತುರಗವಾದವನ ಜೆಷ್ಠೆಯ ತುದಿಗೆ ಸಿಲುಕಿ
ಮರುಳಾಗಿದ್ದವನ ಬಾಯ ತುತ್ತಾಗಿ
ಮರೆಯೊಳಿದ್ದವನ ಕಾಯವಾಧರಿಸಿ ನೀ
ಶಿರದೊಳು ತಾಳಿದೆಯಾ ಎನ್ನೊಡೆಯ ೧

ಬಾಯೊಳಗಿಹ ರಮಣನ ಅನುಜನ ಮಾವನ ದಿನದ
ಮೈಯವನ ಮಗನ ಶಿರದಾಯತವಾಗಿಪ್ಪನ ವೈ–
ರಿಯ ನೇರಿದಾಯತಾಕ್ಷಿಯ ಪೆತ್ತನ ವಂಶವ ಮುರಿ–
ದಾ ಯಾಗಗಳ ಕಿತ್ತವನ ಆತ್ಮಜನಿಗೆ
ಆಯಾ ಮಾರ್ಗಣ ವಿತ್ತವನೆ ೨

ಸರಸಿಜ ಮಿತ್ರನ ಸೂನುವಿನ ಕಂದನ
ವರಪುರಂಧ್ರಿಯ ಮಾನವ ಕಾಯ್ದನಣ್ಣನ
ಕರದೊಳಿದ್ದಾಯುಧವ ಪೆಗಲೊಳಾತು
ನರರ ರಕ್ಷಿಸಿ ಪೊರೆವ ದೇವನನೇರಿ
ಚರಿಪ ಪಂಪಾಪುರವನಾಳ್ವ ಸದ್ಗುರು
ಚಿದಾನಂದ ದೇವಭಕ್ತರ ಕಾವ ೩

## ೨೮

ಬಗಳ ತಾ ಪ್ರತ್ಯಕ್ಷದಲಿರೆ ತನ್ನನು ಮನುಜನೆಂಬುವನಜ್ಞಾನಿ
ಬಗಳಾ ಸತ್ಯವು ಜೀವನ ಮಿಥ್ಯವು ಎಂಬುವನೇ ಜ್ಞಾನಿ ಪ

ಪರುಷಮಣಿ ತಾ ತನ್ನಲ್ಲಿರಲು ಕಲ್ಲೆಂದು ಕಂಡಂತೆ
ಸುರತರು ಮನೆ ಮುಂದೆ ಬೆಳೆದಿರೆ ಕಾಡಮರನೆಂದಂತೆ ೧

ಸುರಧೇನುವ ಕಟ್ಟಿರೆ ಮನೆಯಲಿ ಗೊಡ್ಡಾವು ಎಂದಂತೆ
ಇರೆ ಚಿಂತಾಮಣಿ ತನ್ನ ಹಸ್ತದಿ ಇಟ್ಟಂಗಿಯ ಚೂರೆಂದಂತೆ ೨

ಕೆಂಡವು ಕಾಣೆವು ಎಂದೆನ್ನದಿರಿ ಬಗಳದೇವಿ ತಾ ಸತ್ಯ
ಖಂಡಿತ ಮಾತಿದು ನೀವರಿಯದಿರೆ ಚಿದಾನಂದ ದೊರಕುವುದು ಮಿಥ್ಯ ೩

## ೨೯

ಬಗಳ ಸ್ಮರಣೆಯಲ್ಲಿ ಫಲವು ಸಂಶಯ
ವೆಂಬುವನ ಬಾಯನೀಗ ಸೀಳಬೇಡವೆ
ಬಗೆಯುತ್ತಂ ತನಗೆ ತಾನಾಗಲಾಗಿ ಬರೆಯನೀಗ
ಭ್ರಷ್ಟಗೆ ಬರೆಯಬೇಡವೆ ಪ

ನೆನಸದ ಮುನ್ನ ಕಾಮ್ಯ ನಿಜವೆ
ತಾನಾಗಲು ನೀಚನ ನಾಲಗೆಯ ಕೀಳಬೇಡವೆ
ದಿನದಿನಕೆ ಸಂಪತ್ತು ದಟ್ಟವಾಗಿ ಹೆಚ್ಚುತಿರಲು ದಿಂಡೆಯ-
ವನ ದವಡೆ ದವಡೆ ತಿವಿಯಬಾರದೆ ೧

ಕವಲಿಲ್ಲದಲೆ ಕಲ್ಯಾಣ ತನಗಾಗಲು ಕುಹಕಿ
ಕಿವಿಯ ಕೊಯ್ಯಬೇಡವೆ
ಯವೆಯ ಮಾತ್ರ ಅಷ್ಟರೊಳು ಯೋಚಿಸಿದ್ದು ಸಿ-
ದ್ಧವಾದೆ ದುರ್ಜನನ ಎದೆಯನೀಗ ನಿರ್ದಯದಿ ಒದೆಯ ಬೇಡವೆ ೨

ಆವುದನ್ನೆ ಚಿಂತಿಸಲು ಆ ಕ್ಷಣದಿ ಆಗಲಾಗಿ ಅದನು ತೆಗಳು-
ವವನ ಮೂಗ ಕೊರೆಯಬೇಡವೆ
ದೇವ ದೇವ ಚಿದಾನಂದ ಬಗಳೆ ಕರು-
ಣವಿರೆ ದಬಕು ದಬಕು ಎಂದು ನನಗೆ ಇಕ್ಕ ಬೇಡುವೆ ೩

## ೩೦

ಬಗಳಾ ಬ್ರಹ್ಮವಾಗಿ ತೋರುತಿದೆ ನೀ ಕಣ್ಮುಚ್ಚಿ ತೆರೆಯೆ
ಬಗಳಾ ಬ್ರಹ್ಮವಾಗಿ ತೋರುತಿದೆ ನೀ ಬಗೆ–
ಬಗೆಯ ಜ್ಯೋತಿಯ ಬೆಳಕನು ಕಾಣುತ
ಝಗ ಝಗಿಸುತ ಎರಕದ ಪುತ್ಥಳಿಯಂತೆ ಪ

ಉಣ್ಣುವಲ್ಲಿ ಉಡುವಲ್ಲಿ ಉಚಿತಂಗಳಲ್ಲಿ
ಮಣಿವಲ್ಲಿ ಏಳುತಿರುವಲ್ಲಿ ಮುಂದಣ ಹೆಜ್ಜೆಯಲಿ
ಘಣ ಘಣ ಘಂಟಾಸ್ವರವನೆ ಕೇಳುತ
ತ್ರಿಣಯನಳಾಗಿ ಒಳಗೆ ಹೊರಗೆ ೧

ತಾಗುವಲ್ಲಿ ತಟ್ಟುವಲ್ಲಿ ತತ್ತರವಾದಲ್ಲಿ
ಹೋಗುವಲ್ಲಿ ನಿಲ್ಲುವಲ್ಲಿ ಶಯನದಲ್ಲಿ ನಿದ್ದೆಯಲ್ಲಿ
ನಾಗಸ್ವರದ ಧ್ವನಿಯಿಂಪನೆ ಕೇಳುತ
ಯೋಗಾನಂದದಿ ಓಲಾಡುತಲಿ ೨

ಇಹಪರವೆರಡದು ಹೋಗಿ ಇರುಳು ಹಗಲನೆ ನೀಗಿ
ಮಹಾಜೀವ ವಾಸನೆ ಗತವಾಗಿ ಮತಿಯಿಲ್ಲವಾಗಿ
ಬಹು ಬೆಳಗಿನ ಬೆಳದಿಂಗಳ ಬಯಲಲಿ
ಮಹಾ ಚಿದಾನಂದ ಬ್ರಹ್ಮಾಸ್ತ್ರವಾಗಿ ೩

## ೩೧

ಬಗಳಾಂಬ ನಿನ್ನ ಲೀಲೆ ಮಂಗಳಾ ಮಂಗಳ
ಬಗಳಾಂಬ ನಿನ್ನ ಲೀಲೆ ಮಂಗಳಾ ಮಂಗಳ ಪ

ಭಸ್ಮಾಸುರನಾಗ ಜಗವರಿಯೆ ಬೇಕೆಂದು
ಗೌರಿಯನು ಮೋಹಿಸಿಯೆ

ವಿಸ್ಮಯದಲಿ ವಿರೂಪಾಕ್ಷ ಭಜಿಸಿ
ವಿಷ ಹೃದಯದಿ ಘಾತಕವನೆ ಚಿಂತಿಸೆ ೧

ಉರಿವ ಹಸ್ತವ ಪಡೆದು ಹರುಷದಲಿ ಬರಲು
ಪಶು ಪತಿಯು ಭಯದಿಂದ ಓಡುತಿರಲು
ದೇವತೆಗಳೆಲ್ಲರೂ ಸ್ತೋತ್ರ ಗೈಯೆ
ಶಿವನನು ಕಾಯಲವತರಿಸಿದೆ ದೇವಿ ೨

ಥಳ ಥಳಿಸುತ ಮೋಹದಿಂದಿರಲು
ತವಕಿಯು ಹರುಷದಿ ಕೈ ಹಿಡಿದು ಬರಲು
ಕಳರಿದ ಶಿವ ಪ್ರಾಣ ಉಳಿಯಲೆಂದು
ತಾಮಸನ ನಾಟ್ಯದಲಿ ಗೆಲಲು ಎಂದೆ ೩

ಧಿಮ್ಮಿ ತತ್ತಧಿಕಿತಕ ಎಂದು
ದಿಟ್ಟವಾಗಿ ಕುಣಿಯುತಲಂದು
ಸುಮ್ಮನೆ ಕೈಯಲಿಡಿಸಿದೆ ಕೈಯ
ಸುಟ್ಟೆಯಸುರನ ಸುರರುಘೆ ಎನೆ ೪

ಸುರರು ಹೂವಿನ ಮಳೆಯ ಸುರಿಯಲು
ಸುರಗಣಿಕೆಯರು ನಾಟ್ಯವಾಡಲು
ಪರಮ ಚಿದಾನಂದ ಬಗಳೆಯು ಸಾರ್ತರೆ
ಪಾರ್ವತಿ ಪತಿ ನೋಡಿ ನಗುನಗುತಿರೆ ೫

## ೩೨

ಬಗಳೆ ತಾನಾದವಗೆ ಏನು ಚಿಂತೆ
ನಿಗಳ ಬಂಧನದ ಮತ್ತಗಜದಂತೆ ಪ

ನಿದ್ರೆಯೊಳಗಣ ನಿದ್ರೆ ನಿತ್ಯದಿ ತಾಳ್ದಿಳಿದು
ನಿದ್ರೆ ದೃಷ್ಟಿಯೊಳಗೆ ದೃಷ್ಟಿಯಿಟ್ಟು

ನಿದ್ರೆಯನು ಸೋಂಕದಲೆ ನಿಂದು ನಿದ್ರೆಯ ಸುಖವ
ನಿದ್ರೆಯೊಳಗನುಭವಿಸಿ ನಿತ್ಯ ತಾನಾದ ೧

ಕುಣಿಯುತಿಹ ಚಿತ್ಕಳೆಯ ಮನಕೆ ತಾ ತೋರುತಲಿ
ಘಣ ಘಣಿಪ ಘಂಟೆ ನಾದವನಾಲಿಸಿ
ಎಣಿಕೆಯಿಲ್ಲದ ಸೂರ್ಯ ಚಂದ್ರ ಬೆಳಗನೆ ಬೆಳಗಿ
ಮನ ಸುಖಿಸಿ ಮನವಳಿದು ಮಹಿಮ ತಾನಾದ ೨

ನಿಂದ ನಿಜದಲಿ ಬೆರತು ಬಾಹ್ಯಾಂತರವ ಮರೆತು
ಹೊಂದದಲೆ ದುರ್ಗುಣದ ವಾಸನೆಗಳಾ
ಬಂಧನಂಗಳ ಕಳೆದು ಬವಣೆಗಳ ತಾ ನೀಗಿ
ಸುಂದರಾತ್ಮನೆ ಆಗಿ ಶೂನ್ಯ ತಾನಾದ ೩

ಎಲ್ಲೆಲ್ಲಿ ತಾನುಂಡು ಎಲ್ಲೆಲ್ಲಿ ತಾ ಮಲಗಿ
ಎಲ್ಲ ಸ್ಥಳದೊಳು ತಾನು ಚರಿಸಿ
ಎಲ್ಲ ಜನ ಬೆರಗಾಗೆ ತನ್ನ ದರುಶನ ನೀಡಿ
ಸೊಲ್ಲುಡುಗಿ ಸಾಕ್ಷಾತ್ತು ಸಹಜ ತಾನಾದ ೪

ತೂಗಾಡುತ ಕಣ್ಣ ಮುಚ್ಚಿ ತೆರೆಯುತ್ತ
ಆಗ ಜರೆ ಜನನ ಮರಣಂಗಳಳಿದು
ಯೋಗಿ ಚಿದಾನಂದ ಗುರು ತಾನಾದ
ಬಗಳಾಂಬ ತಾನಾಗಿ ಪೂರ್ಣಬ್ರಹ್ಮ ತಾನಾದ ೫

## ೩೩

ಬಹಳ ಸಂತೋಷಿ ಭಕ್ತರು ಬಹಳ ಸಂತೋಷಿ
ಬಹಳ ಸಂತೋಷಿ ಬಗಳ ಬಹಳ ಸಂತೋಷಿ ಪ

ಕಾಂತಿಯೆಂಬ ಸತಿಯು ದೊರಕಲಿ ಬಹಳ ಸಂತೋಷಿ
ಕಾಂತಿ ಎಂಬ ಕುಲ ಕುಡಿ ಬೆಳೆಯಲಿ ಬಹಳ ಸಂತೋಷಿ ೧

ಕ್ಷಮೆಯು ಎಂಬ ಕ್ಷೇಮವು ಬೆಳೆಯಲಿ ಬಹಳ ಸಂತೋಷಿ
ದಮೆಯು ಎಂಬ ದನಕರು ಹೆಚ್ಚಲಿ ಬಹಳ ಸಂತೋಷಿ ೨

ಆತ್ಮ ಸಂತೋಷದಾ ಅಂಗಡಿ ನಡೆಯಲಿ ಬಹಳ ಸಂತೋಷಿ
ಸ್ವಾತ್ಮಾನುಸುಖ ಸಾಮ್ರಾಜ್ಯ ದೊರೆಯಲಿ ಬಹಳ ಸಂತೋಷಿ ೩

ಭೂತ ದಯೆಯ ಅಂಗಿಯ ತೊಡಿರಿ ಬಹಳ ಸಂತೋಷಿ
ಖ್ಯಾತಿ ಎಂಬ ಕುಪ್ಪಸ ಹಾಕಿರಿ ಬಹಳ ಸಂತೋಷಿ ೪

ಸೂಸಲಿ ಚಿದಾನಂದ ಕೃಪೆಯಿಂದಿಗೆ ಬಹಳ ಸಂತೋಷಿ
ವಾಸವ ಮಾಡಲಿ ನಮ್ಮಲ್ಲಿ ಬಗಳೆ ಬಹಳ ಸಂತೋಷಿ ೫

## ೩೪

ಭಾಷೆಯ ಪಡೆದಿಹೆನು ಭಾಷೆಯ ಪಡೆದಿಹೆನು
ಈಶಳಾದ ಬಗಳಾ ದೇವಿಯ ಕೈಯಲಿ ಕೈಯನು ಹೊಯ್ದು ಪ

ಎತ್ತ ಎತ್ತ ಹೋಗೆ ಬೆನ್ನಹತ್ತಿ ತಿರುಗು ಎಂಬ
ಹತ್ತಿರಿರಬೇಕು ಕಾದು ನಿತ್ಯದಿ ಎಂದೆಂಬ ಹಾಗೆ ೧

ಎಲ್ಲ ಕ್ಷೇಮ ಪರಾಮರಿಕೆ ನಿನ್ನದೀಗ ಎಂಬ ಹಾಗೆ
ಎಲ್ಲ ಮಾನಾವಮಾನ ನಿನ್ನ ಹೊಂದಿತು ಎಂಬ ಹಾಗೆ ೨

ದೇಹವಿದು ಎನ್ನದಲ್ಲ ನಿನ್ನದೀಗ ಎಂಬ ಹಾಗೆ
ದೇಹಿ ಚಿದಾನಂದ ಬಗಳೆ ನೀನು ನಾನೆ ಎಂಬ ಹಾಗೆ ೩

## ೩೫

ಮದ್ದಿನ ಹವಾಯಿ ನೀ ನೋಡು ಬಗಳ
ಮದ್ದಿನ ಹವಾಯಿ ನೀ ನೋಡು

ಮದ್ದಿನ ಹವಾಯಿ ಹೃದಯ ಬಯಲಲ್ಲದೆ
ಎದ್ದಿರು ಚತುಷ್ಟ ತನುವಿಗೆ ಬೇರೆಯು ಪ

ತೂರ್ವುತಲಿದೆ ಬಿರಿಸಾಕಾಶದ ತುದಿ
ಗೇರ್ವುತಲಿದೆ ಅಂಬರ ಬಾಣ
ಬೀರ್ವುತಲಿದೆ ಚಕ್ರದ ಕಿಡಿಯಗಲಕೆ
ಜಾರ್ವುತಲಿದೆ ಅಜ್ಞಾನದ ಖೂನ ೧

ಗಡಿಗ ಬಾಣದ ಗತಿಯನೆ ನೋಡು
ಗಜುಗಿಂಗಳ ಕಾಯಬ್ಬರವ
ಗಿಡುಗಳು ಹಾರ್ವವು ಜಿನಿಸು ಜಿನಿಸುಗಳು
ಭಡಲ್ ಭಡಲ್ಲಿಹ ಸಪ್ಪಳವು ೨

ಅಂತರ ದೌಸು ಸರಬತ್ತಿಗಳು
ಅಗಸೆಯ ಹೂವಿನ ಅಚ್ಚರಿಯ
ಕಂತುಕ ಪೆಟಲವು ಮುತ್ತಿ ಸೇ-
ವಂತಿಗೆ ಕವಳೆಯ ಹೂವಿನ ಸುರಿಮಳೆಯು ೩

ಕೋಳಿಯು ಮುಳುಗುತಲೇಳುತಲಿರುತಿರೆ
ಕೋಣ ಆನೆಗಳ ಕಾದಾಟ
ಬಾಳೆಯ ಗೊನೆಗಳು ಬೆಳ್ಳಿಯ ಚುಕ್ಕೆಯು
ಬೆಳ್ಳನೆ ಜ್ಯೋತಿಯ ಕಡಕದಾಟ ೪

ನಿನ್ನ ಕಾಂತಿ ಇವು ನೀನೇ ನೋಡುತಲಿರು
ತನ್ಮಯ ದೃಷ್ಟಿಯನಿಟ್ಟು
ಚೆನ್ನ ಚಿದಾನಂದ ಬಗಳೆ ನೀ ಸಾಕ್ಷಿಯಿರೆ ಚೈ-
ತನ್ಯಾತ್ಮಕ ಶುದ್ಧನವ ೫

ಸೂಚನೆ : ದೀಪಾವಳಿ ಮುಂತಾದ ಸಂದರ್ಭಗಳಲ್ಲಿ ಹಾರಿಸುವ ಮದ್ದಿನ ವಸ್ತುಗಳ ಬೆಳಕಿಗೆ ದೇವಿಯನ್ನು ಹೋಲಿಸಿದ್ದಾಗಿದೆ. ಇದರಲ್ಲಿ ಬಂದಿರುವ ಕೆಲವು ಮದ್ದಿನ ಪದಾರ್ಥಗಳ ಹೆಸರುಗಳು ಆಗಿನ ಕಾಲದವು.

## ೩೬

ಮರತೆ ಮರತೆ ಪ್ರಪಂಚವ ಎನಗೆ ಈಗ
ಹರಿಯಿತು ಅಜ್ಞಾನದ ಋಣವು ಅಯ್ಯ ಪ

ಸುರಪತಿ ಕಲ್ಪವೃಕ್ಷವು ತಾನು ಈಗ
ಸಿರಿ ಗಿರಿಯನೀಗ ಬಯಸೆನು ನಾನು
ಪರಮ ಬಗಳೆ ತಾನಾಗಿಹ ನಾಶವಹ
ಮುರುಕಿ ದೇಹ ಭ್ರಾಂತಿಯಲಿರುವೆನೆ ಕೇಳಕ್ಕಯ್ಯ ೧

ಸತ್ಯವಾದ ಕಾಮಧೇನುವು ಅದು ಈಗ
ಬುತ್ತಿಗೆ ಕೈ ನೀಡುವುದೇ ಕೇಳಕ್ಕಯ್ಯ
ನಿತ್ಯ ಮಂಗಳೆ ಬಗಳೆಯಾಗಿಹಳು ಸ್ವಪ್ನದಿ ತೆರದಿ
ಮಿಥ್ಯ ಸಂಸಾರಕೆ ಆಸೆ ಮಾಡುವೆನೆ ಕೇಳಕ್ಕಯ್ಯ ೨

ಚಿಂತೆ ದೂರ ಚಿಂತಾಮಣಿಯನು
ಕ್ಷುದ್ರ ದೂರ ಕಲ್ಪವೃಕ್ಷವನು ನೆನೆವೆ ಕೇಳಕ್ಕಯ್ಯ
ಚಿಂತಾಯಕ ಚಿದಾನಂದನಾದ ಬಗಳೆ ಇರುವಾಗ
ಎಂತು ಜನನ ಮರಣದ ಚಿಂತೆ ಕೇಳಕ್ಕಯ್ಯ ೩

## ೩೭

ಮರತೆ ಮರತೆ ಬಗಳ ಮಹಾಮಂತ್ರವ
ಸುರತರುವಿಗೆ ತರುವಾದ ಬ್ರಹ್ಮಾಸ್ತ್ರವ ಪ

ಭುಗುಭುಗಿಸಿ ಭುವನಗಳನ್ನೆಲ್ಲಾ ಪಾಲಿಪ ಮಂತ್ರ
ಧಗಧಗಿಸಿ ಝಗ ಝಗಿಸಿ ನಿಗಿ ನಿಗಿವ ಮಂತ್ರ
ಜಗದೊಡೆಯರಾದವರಿಗೆ ಒಡೆಯಳ ಮಂತ್ರ
ತಗತಗನೆ ಶತಕೋಟಿ ರವಿ ಸೂಸುವ ಮಂತ್ರ ೧

ಸರಸಿಜಾಸನ ತಾನೆ ಜಪಿಸುತಿಹ ಮಂತ್ರ
ಹರಿಹರರು ಅನವರತ ಸ್ಮರಿಸುವಾ ಮಂತ್ರ
ಸುರಪ ಇಂದ್ರಾಗ್ನಿಗಳಿಗಭಯ ನೀಡಿಹ ಮಂತ್ರ
ದುರುಳರಿಪು ವನಗಳಿಗೆ ದಾವಾಗ್ನಿ ಮಂತ್ರ ೨

ಹರಿಯ ಸಮಭಾಗ್ಯ ಕೋ ಎಂದು ಕೊಡುವ ಮಂತ್ರ
ಹರಗೆ ಸರಿಯಾದ ಸತ್ವವನೀವ ಮಂತ್ರ
ಗುರು ಚಿದಾನಂದ ತಾನಾದ ಬಗಳ ಮಹಾ ಮಂತ್ರ
ಪರಬ್ರಹ್ಮ ಸತ್ಯ ಬ್ರಹ್ಮಾಸ್ತ್ರ ಮಂತ್ರ ೩

## ೩೮

ಮಾಯಿ ಬಗಳಾಂಬ ಸತ್ಯ ಬ್ರಹ್ಮ ರುದ್ರರ
ತಾಯಿ ನಿಜ ಮುಕ್ತಿ ದಾಯಿ ನಂಬಿದವರ
ತಾಯಿ ಈ ಅಜಾಂಡಾನಂತ ಕೋಟಿಯನು
ಕಾಯ್ವ ಕೊಲ್ವ ತಾಯಿ ಪ

ಹೆಚ್ಚೇ ಕೋಪವು ಅವಡುಗಚ್ಚೆ ಕೇವಲರೌದ್ರ
ಮುಚ್ಚೆ ಖಡ್ಗವ ಒರೆಯಿಂ ಬಿಚ್ಚೆ ಶತ್ರುಗಳೆದೆ
ಬಚ್ಚೆ ಸಚ್ಚರಿತಳು ತಾ ಸವರಿಯೆ ರಿಪುಗಳನು
ನುಚ್ಚು ನುಚ್ಚನೆ ಮಾಡಿ ನಲಿವ ಅಂಬ ೧

ಬಿಗಿದೆ ಬತ್ತಳಿಕೆಯಿಂದಲುಗಿದೆ ಶರವನೆ ಕೆನ್ನೆಗೆ
ತೆಗೆದೆ ಬಿಡಲಿಕೆ ತಟ್ಟುಗಿದೆ ಪ್ರಾಣಗಳೆಲ್ಲವ ಮುಗಿಸಿದೆ
ತೆಗೆದಸುರರ ತೆಕ್ಕೆಯಲಪ್ಸರೆಯರು
ನೆಗೆ ನೆಗೆದು ಹಾರಲು ನಸುನಗುವ ಅಂಬ ೨

ತ್ಯಾಗಿ ಸರ್ವಸಾಮ್ರಾಜ್ಯ ಭೋಗಿ ಅಮಿತ್ರರೆಂಬರ
ನೀಗಿ ಸರ್ವ ಶಾಂತಿಯದಾಗಿ ಭಕ್ತರ ಭಯ ಹೋಗಿ

ಯೋಗಿ ಎನಿಪ ಚಿದಾನಂದ ಬಗಳೆ
ನೀಗಿದಳೀಪರಿ ದ್ವೇಷಿಗಳೆಂಬರ ೩

## ೩೯

ಮಾಯೆಯನ್ನು ಗೆದ್ದೆನೆಂದು ಮುರುಕಿ ಮುರುಕಿ ಕಿರುಚುವ
ಮೂರ್ಖನವನ ಮಂದ ಮತಿಯನೇನ ಹೇಳಲಿ
ರಾಯರಾದ ಮೂರು ಮಂದಿ ಮೊರೆಯ ಹೊಕ್ಕಿಹರು ಬಗಳ
ಮಾಯೆಯನ್ನು ಗೆದ್ದೆನೆನಲು ಲಜ್ಜೆಯಿಲ್ಲವೆ ಪ

ಮೋಡದಾ ಮಿಂಚಿನಂತೆ ಮೋಹಕವೆ ಬೆಳಗುತಿರಲು
ಗೂಢವಿಹ ಮುನಿಯು ತಪಿಸಿ ಮುಳುಗಿಹೋದರು
ರೂಢಿಯಲ್ಲ ಮೋಹನದಿ ಮುಳುಗಿ ತೇಲಲು ಆ-
ರೂಢ ಆರಕ್ಷಕರುದಯದಲಾದರು ೧

ತಾನದಾರು ತಾನದೆಲ್ಲಿ ತನ್ನ ಸ್ಥಳವು ಎತ್ತಲು
ತಾನು ನಾನು ಎಂಬುದಕ್ಕೆ ಠಾವು ಇಲ್ಲವು
ತಾನು ಗೆದ್ದೆ ಗೆದ್ದೆನೆಂದು ಹೇಳಿಯಾಡೆ
ಏನು ರೂಪು ನಾಮಕ್ರಿಯೆ ಜೀವ ಶಿವರು ಮಾಯೆಯು ೨

ತಾನೆ ಸಾಕ್ಷಿಯಾಗಿ ಪ್ರಪಂಚ ನಾಶವಾಗಿ
ಏನೇನು ವಾಸನೆ ಹುಟ್ಟದಾಗಿಯು
ತಾನು ಜಗವು ಸರ್ವವಾಗಿ ಸರ್ವಜಗವು
ತಾನೆಯಾಗಿ ತಾನೆ ಚಿದಾನಂದ ಬಗಳೆ ತಾನಾದರಲ್ಲದೆ ೩

## ೪೦

ಮುಕ್ತನಾಗುವೆ ನಿತ್ಯ ಮುಕ್ತನಾಗುವೆ
ಭಕ್ತಿಯಿಟ್ಟು ಗುರುವಿನಲ್ಲಿ ಭಜಿಸಿ ಬಗಳೆ ನೀನೆಯಾಗಿ ಪ

ಮುರುಕಿ ಮೂಳಿಯರ ಜೊಲ್ಲು ಮಧುವೆಂದು ಸವಿದಂತೆ
ಹಿರಿಯರಂಘ್ರಿ ತೀರ್ಥವನು ಕುಡಿದು ತೃಪ್ತನಾಗೋ ನೀನು ೧

ಏಣಲೋಚನೆಯನ್ನು ನೀನು ಬಿಡದೆ ಬಿಡದೆ ನೋಡಿದಂತೆ
ಜ್ಞಾನಿಗಳ ಮೂರ್ತಿಯನ್ನು ಘಳಿಗೆ ಘಳಿಗೆ ನೀನು ನೋಡೋ ೨

ಕಾಮ ಕೇಳಿಗಾಗಿ ಹಲ್ಲ ಕಿರಿದು ಕಾಲಿಗೆರಗಿದಂತೆ
ಪಾಮರೋದ್ಧಾರನಾದ ಗುರುಪದಕ್ಕೆ ಶರಣು ಹೋಗೋ ೩

ನಾರಿಯಲ್ಲಿ ಲೋಲನಾಗಿ ನೀಚಮಾತು ಕೇಳಿದಂತೆ
ವೀರ ಸಾಧು ತತ್ವವನ್ನು ವಿವರವಾಗಿ ನೀನು ತಿಳಿಯೋ ೪

ಚದುರೆ ಮೇಲೆ ನಿನ್ನ ಚಿತ್ತ ಚದುರದಂತೆ ಇದ್ದ ಹಾಗೆ
ಚಿದಾನಂದ ಬಗಳೆಯಲ್ಲಿ ನೆಲಸೆ ಚೇತನಾತ್ಮ ಶುದ್ಧನಹೆಯೋ ೫

## ೪೧

ರಂಗನಹುದೋ ನೀನು ಕನಕಾಚಲ
ರಂಗನಹುದೋ ನೀನು ತುಂಗ ಮಹಿಮ ಕೃ-
ಪಾಂಗ ಚೆಲುವ ಮುದ್ದು ರಂಗಲಕ್ಷ್ಮಿಯ ರಮ-
ಣಾಂಗ ಜಪಿತ ಮೂರ್ತಿ ಪ

ದುರುಳ ರಕ್ಕಸನು ವೇದ ಕದ್ದೊಯ್ಯೆ
ಮೀನಾಗಿ ತಂದೆಯದನ ಕೂರ್ಮನಾಗಿ
ಗಿರಿಯ ಪೊತ್ತು ಎರೆದೆ ಸುರರಿಗೆ ಅಮೃತವ
ವರಾಹನಾಗಿ ಧರೆಯ ಕದ್ದವನ
ಶಿರವ ಖಂಡಿಸಿ ನೃಕೇಸರಿಯಾಗಿಯೆ
ಕಂಬವನೊಡೆದು ನಿಶಾಚರನ ಸಂಹ-
ರಿಸಿದೆ ರಣಧೀರ ಮಾಧವ ೧

ಪುಟ್ಟಿ ಮಾನವನಾಗಿ ಬಲಿಯ ದಾನವ ಬೇಡಿ
ಅಷ್ಟು ಬ್ರಹ್ಮಾಂಡವನೆಲ್ಲ ಈರಡಿ ಮಾಡಿ
ತುಟ್ಟ ತುದಿಗೆ ಅವನ ಶಿರದ ಮೇ–
ಲಿಟ್ಟು ದ್ವಾರವ ಕಾಯ್ದನಾ ಭೂಸುರರಿಗೆ
ಕೊಟ್ಟ ಮೇದಿನಿಯ ದಾನವ ಭಳಿರೆ ಜಗ
ಜಟ್ಟಿ ಪರಶುರಾಮ ಕ್ಷತ್ರಿಯ ಛೇದನ ೨

ದಶರಥನ ಸುತನಾಗಿ ವಸುಧಜೆಯ ಕಳೆದು
ಅಸಮ ಕಪಿವೀರರ ನೆರಪಿ ಸೇತುವೆ ಕಟ್ಟಿ
ಅಸದಳ ರಾಕ್ಷಸರ ಇಂದ್ರಜಿತು
ದಶಶಿರ ಅತಿಕಾಯರ ಕುಂಭಕರ್ಣ
ಅಸಹಾಯ ರಣಶೂರರ ಛೇದಿಸಿ ಸೀತಾ
ಶಶಿಮುಖಿಯ ಕರೆತಂದ ರಘುರಾಮ ಕಂಠೀರವ ೩

ದೇವಕೀಸುತನಾಗಿ ಬಾಣನ ಭಂಗಿಸಿ
ಮಾವ ಕಂಸನ ಶಿಶುಪಾಲ ನರಕಾಸುರ ಕೌ–
ರವ ವೀರರನು ಕೊಂದು ಪಾಂಡುರಾಜನ ಪುತ್ರ–
ರನು ಪಾಲಿಸಿ ಪೃಥವಿ ಪಾವನರಾದರನು ರಕ್ಷಿಸಿ ಬೌ–
ದ್ಧಾವತಾರ ತಾನಾಗಿ ವ್ರತ ಭಂಗಿಸಿದೆ ನೀನು ೪

ತೇಜಿಯನೇರಿ ನೇಣನೆ ಹಿಡಿದು ಪಾಪದ
ಬೀಜವನುರುಪಿ ಪುಣ್ಯದ ಬಿತ್ತನುರುಹಿಯೆ
ಸೋಜಿಗಸಹಸ್ರರ ಕನಕಗಿರಿ
ಮೂಜಗದೊಳು ವಿಸ್ತಾರವಾಗಿಹ ಘನ
ತೇಜೋ ಮೂರುತಿ ಗಂಭೀರ ಸಿದ್ಧ ಪರ್ವತ
ರಾಜ ಸದ್ಗುರು ಚಿದಾನಂದಾವಧೂತ ೫

## ೪೨

ರಕ್ಷಿಸೆನ್ನ ರಕ್ಷಿಸೆನ್ನನು ಸುರಯಕ್ಷರಕ್ಷಕ ಮಹಾ
ದಕ್ಷ ಯತಿ ಮುನಿ ಪಕ್ಷ ವಿರೂಪಾಕ್ಷ
ಕುಕ್ಷಿಯೊಳು ನೀ ನೆಲಸಿ ಎನ್ನ ಕೃಪೇಕ್ಷಣದಿ ಕೈವಿಡಿದು
ರಕ್ಷಿಪ ಅಕ್ಷಯ ರಾಕ್ಷಸಾಂತಕ ಪಕ್ಷಿವಾಹನ ದೇವಪ್ರಿಯ ಪ

ವೇದವೇದ್ಯ ಸುಜನ ರಕ್ಷ ನಾದಭೇದ್ಯ
ಸಾಧನ ನಾಲ್ಕನು ಸಾಧಿಪ ಸಾಧಕ
ನಾದ ದೇವನೆ ನಿನ್ನ ಪಾದವ ಸ್ತುತಿಪೆನು
ವೇದ ಸ್ಮೃತಿಗಳು ಆದಿಶೇಷನು
ಸಾಧಿಸುತ ಭೇದಿಸಿಯೆ ನಿನ್ನನು
ಹಾದಿ ಕಾಣದು ಪೊಗಳ್ವಡೆನಗೆ ಅರಿಯದಾ-
ಗಿದೆ ಅನಾದಿ ಮೂರುತಿ ೧

ಹಾರಹೀರ ಫಲಿಸಿದಂಥಾ ಶೂರ ವೀರ
ಸಾರವಿಲ್ಲದ ಸಂಸಾರ ದೂರ ವಿ-
ದೂರ ಭಯ ಜರ್ಜರ ಕರುಣಾಕರ
ಸಾರ ಪೂರಿತ ಕಾರಣಾತ್ಮಕ
ಮಾರ ವೈರಿಯೆ ಧೀರ ಜಗದುದ್ಧಾರ ಎನಗೆ
ತೋರಿ ಶಕುತಿಯ ಸಾರ ಹೃದಯನೆ
ಗೌರಿ ವಲ್ಲಭನೆ ೨

ಪರಮ ಪುರುಷ ಪಾರ್ವತೀಪ್ರಿಯ
ಶರಣ ಹೃದಯ ನಿರುತ ಪಾಲಿಪ ಶಂಭು
ಹರ ಪಿನಾಕಿ ಶಿವ ವರ ಚಿದಾನಂದ
ಗುರು ಅವಧೂತಾತ್ಮ ನಿರುಪಮ ನಿರ್ಮಾಯ
ನಿರವಯ ನಿರುತ ಪರಮ ಶಿವ ವಿಶ್ವಹೃದಯ
ಪರತರಾತ್ಮಕ ಪರಮ ಮಂಗಳ
ಪರಮ ಚೈತನ್ಯಾತ್ಮ ವಸ್ತುವೇ ೩

## ೪೩

ರೂಪ ತೋರೆನಗೆ ಬಗಳೆ ರೂಪ ತೋರೆನಗೆ
ರೂಪದೊಳಗಲೆ ಮಂಗಳವಾದ ಪ

ಕಾಲ ಕಡಗ ಕಂಠಾಭರಣ ಕಂಕಣ ತೊಟ್ಟಿರುವ
ಲೋಲ ಕರ್ಣಾಭರಣದಿಂದಲಿ ಲಕ್ಷ್ಮಿಯ ರೂಪದ ೧

ಒಡ್ಯಾಣವು ಚಿಂತಾಕನು ಸರಿಗೆ ವಂಕಿಯ ಧರಿಸಿರುವ
ದೊಡ್ಡ ರತ್ನಂಗಳ ಕೆತ್ತಿಹ ವೋಲೆಯನ್ನಿಟ್ಟಿರುವ ೨

ಸತ್ಯ ರೂಪಿಣಿ ಬಗಳ ನಾಯಕಿ ಶರಖಡ್ಗಪಾಣಿ
ಸತ್ಯ ಚಿದಾನಂದ ಬ್ರಹ್ಮದವರ ಕುಟುಂಬಿನಿ ೩

## ೪೪

ವೀರೆಯ ನೋಡಿರೋ ಅಸುರರ ಮಾರಿಯ ನೋಡಿರೋ
ಶೂರಾದಿ ಶೂರರ ದಾರಿಯ ಹಚ್ಚಿಸಿ
ಮುರಿದ ಮಹಿಷಾಸುರನ ತರಿದ ಪ

ರಿಶಿಲೋಮನು ಶಕ್ತಿಯ ಪಡೆದು ನಡೆದು ಕಣ್ಕೆಂಪಿಡಿದು
ಮಸಗುತಲಿಡಲು ಶಕ್ತಿಯ ದೇವಿಯು ಹಿಡಿದೆ ಹಲ್ಲನು ಕಡಿದೆ
ಕೊಸರಿಯೆ ಇಟ್ಟಳು ಅಸುರನ ಎದೆಗೆ ಹೊಯ್ದು ರಕ್ತದಿ ತೊಯ್ದು
ಬಸವಳಿಯುತ ರಿಶಿಲೋಮನು ಭೂಮಿಗೆ ಬೀಳೆ ಬಹು ಹುಡಿಯೇಳೆ ೧

ವರ ರುದಗ್ರನು ಗದೆಯನು ಹೊತ್ತು ಬರಲು ದೇವಿಗೆರಗಲು
ಶರದಿಂದಲಿ ತಲೆಯುರುಳಿಸಿ ಶಿರ ಬೊಬ್ಬಿರಿದು ಡಿಂಬವು ನಡೆದು
ಭರದಲಿ ಹೊಯ್ದುದು ಗದೆಯಲಿ, ಶರ ಸೋನೆಯ ಸುರಿದು ಖಡ್ಗವ
ಹಿರಿದು ಪರಮೇಶ್ವರಿ ಭಾಪೆನಲು ನಡೆದು ಬಿತ್ತು ಪ್ರಾಣ ಹೋಗಿತ್ತು ೨

ದಳಪತಿಯಹ ಚಿಕ್ಷುರಗೆ ಸಮನೆ ತ್ರಿಣಯನ ಕಾಣೆನು ಎಣೆಯನ
ಹೊಳಕಿದ ನಾನಾ ಪರಿ ಆಯುಧದಿ ಮುಂದೆ ಧಿರುಧಿರು ಎಂದೆ
ಒಳ ಹೊಕ್ಕಿರಿದನು ದೇವಿಯ ಶೂಲದಿ ಎದೆಯ ಶೌರ್ಯ ಶರಧಿಯ
ಬಳಿಯದ ದೇವಿಯು ತಪ್ಪಿಸಿ ಶೂಲದಿ ತಿವಿಯೆ ಕಂಗಳ ಮುಗಿಯೆ ೩

ದುಷ್ಟ ಬಿಡಾಲನು ಶರಗಳ ಸುರಿದನು ಮುಚ್ಚೆ ಸುರರೆದೆ ಬಿಚ್ಚೆ
ಎಷ್ಟನು ಹೇಳಲಿ ಮಾಯದಿ ಮುಸುಕಿ ಇರಿದ ಬಹು ಬೊಬ್ಬಿರಿದ
ಮುಷ್ಟಿಯಲಿ ತಿವಿದನು ದೇವಿಯ ಕೋಪವು ಹೆಚ್ಚಿ ತಾನವುಡುಗಚ್ಚಿ
ಬಿಟ್ಟನು ದೇಹವ ದೇವಿಯು ಶೂಲದಿ ತಿವಿಯೆ ರಿಪುಭವವಳಿಯೆ ೪

ಎಡಬಿಡದಲೆ ರೌದ್ರದಿ ಮಹಿಷಾಸುರನೊತ್ತೆ ದೇವಿಯು ಮತ್ತೆ
ಕಿಡಿಕಾರುತ ಹೊಕ್ಕೊದೆದಳು ಬೀಳಲು ಕವಿದು ಶೂಲದಿ ತಿವಿದು
ಕಡಿದಳು ಕೊರಳನು ತಲೆಯನು ಮೆಟ್ಟಿ ಓಡಿತು ಭಯ ಹಿಮ್ಮೆಟ್ಟಿ
ಮೃಡ ಚಿದಾನಂದನು ತಾನಾದ ಬಗಳ ಕರುಣಿ ಭಕ್ತರ ಭರಣಿ ೫

## ೪೫

ಶ್ರೀ ಕಾಶಿವಿಶ್ವನಾಥ ಶಿಷ್ಟ ಜನ ಪ್ರೀತ
ಲೋಕ ರಕ್ಷಕ ವರದಾತ ಪ್ರಖ್ಯಾತ
ಏಕಾನೇಕ ವಿವೇಕ ಶರಧಿ ಶರ
ಪಾಕಾರಿ ಪ್ರಿಯ ಪಾಹಿಮಾಂ ಶಂಭೋ ಪ

ಕರಿಮುಖಪಿತ ಈಶ ಕಲಿವಿನಾಶಕ
ಕರಿಚರ್ಮ ವಸ್ತ್ರಧಾರಿ ಕದನ ಕಂಠೀರವ
ಉರಗಭೂಷಣ ದೇವ ಉತ್ತಮ ಭಾವ
ಕರದಿ ಬ್ರಹ್ಮಕಪಾಲ ಶಿರರುಂಡಮಾಲಧರ
ದುರಿತ ನಿವಾರ ಗುಣಸಾರ ಗಂಭೀರ
ಸಾರ ರಹಿತ ಸಂಸಾರ ವಿದೂರ
ಆರಾಧಿತ ಪ್ರಜ್ಞಾಂಬುಜಭವನುತ
ಸಾರಾಸಾರ ವಿಚಾರ ಪಿನಾಕಿ ೧

ಶಶಿಯ ಶಿರದೊಳಿಟ್ಟ ಸುರಮುನಿ ಶ್ರೇಷ್ಠ
ಅಸಮ ಅಂಧಕಾಸುರ ಸಂಹಾರ
ಭಸಿತ ಮೈಯೊಳು ಪೂಸಿ ಭುಜಗನ ವಿಷತಾಳ್ದ
ವೃಷಭವಾಹನ ಲೋಲ ಉರ್ವಿಜನ ಪಾಲ
ಈಶ ಸುರೇಶ ಉಮೇಶ ಭೂತೇಶ
ಭಾಸುರ ಕೋಟಿ ಸವಿತ ಸಂಕಾಶ ವಿನು-
ತಸುರಜನ ಪಾಲಿತ ಶುಭಾಂಗ ಕಪರ್ದಿ ೨

ಮೆರೆದೆ ಭುವನ ಈರೇಳು ಧರಿಸಿ ಕುಕ್ಷಿಯೊಳು
ನರರ ರಕ್ಷಿಸಿ ಪೊರೆದು ನಾದದೊಳ್ಬೆರೆದು
ಧರಣಿಯೊಳೆ ಪೆಸರ್ವಡೆದ ವರ ಕಾಶಿಪುರದ
ಮೆರವ ವಿಶ್ವೇಶದೇವ ಸುರನಿಕರ ವಂದಿತಹರ ಅಸುರ
ಹರ ಭವದೂರ ವೀರ ಚಿದಾನಂದ ಅವಧೂತ
ಕಾರಣ ನಿರ್ಮಲ ಚಾರುಪರಾತ್ಮಕ
ಮಾರ ಭಸ್ಮಾಂಕಿತ ಗೌರಿಯ ರಮಣ ೩

## ೪೬

ಸತ್ಯಕೆ ಶಿವನೀಗ ಮೆಚ್ಚುವ
ಸತ್ಯವಿಲ್ಲದಿರೆ ಶಿವನೆಂತು ಒಲಿವ ಪ

ಕೊಟ್ಟನಲ್ಲವೆ ಶಿಖಿಧ್ವಜ ಕೃಷ್ಣಗರ್ಧ ದೇಹವ
ಕೊಡನೆ ಶಿಬಿಯು ಕೊಯ್ದು ಇಂದ್ರಗೆ ಮಾಂಸವ
ಕೊಡನೆ ಚಂದ್ರಹಾಸ ಕೊರೆದು ಹೋಮ ಕಂಗವ
ಕೊಡನೆ ಕಪೋತ ಶಿಬಿಗೆ ಶರೀರವ ೧

ಕೊಡನೆ ಭದ್ರಾಯು ತನ್ನ ಕುಲವಧುವ
ಕೊಡನೆ ದಧೀಚಿ ಕಲಹಕೆ ಬೆನ್ನೆಲುವ
ಕೊಡನೆ ಶಿರಿಯಾಳನೀಗ ತನ್ನ ಮಗನ
ಕೊಡನೆ ಕರ್ಣನೀಗ ಕರ್ಣ ಕುಂಡಲವ ೨

ಈ ಪರಿಯ ನಿಷ್ಠೆಯಂತೋ ಆಶ್ಚರ್ಯವನೀಗ
ಪಾಪಲೇಪಕೆ ತಾನು ಹೊರತೀಗ ಆದವ
ಕಾ ಪಥಗಳನ್ನೆಲ್ಲಾ ಕಡೆಯ ದಾಟಿದವ
ಭೂಪ ಚಿದಾನಂದ ಬಗಳೆ ಯಾದವ ೩

## ೪೭

ಹರ ಹರ ಹರ ಹರ ಹರ ಹರ
ಹರ ಹರ ಹರ ಹರ ಹರ ಹರ ಪ

ಹರ ಹರ ಹರ ಹರ ಹರ ಹರ
ಏಳುತಲೆನ್ನಿ ಹರ ಹರ ಹರ ಹರ
ಬೀಳುತಲೆನ್ನಿ ಹರ ಹರ ಹರ ಹರ ೧

ನಡೆಯುತಲೆನ್ನಿ ಹರ ಹರ ಹರ ಹರ
ನುಡಿಯುತಲೆನ್ನಿ ಹರ ಹರ ಹರ ಹರ ೨

ಉಣ್ಣುತಲೆನ್ನಿ ಹರ ಹರ ಹರ ಹರ
ಉಡುವಾಗಲೆನ್ನಿ ಹರ ಹರ ಹರ ಹರ ೩

ಮಲಗುತಲೆನ್ನಿ ಹರ ಹರ ಹರ ಹರ
ವಂದಿಸುತೆನ್ನಿ ಹರ ಹರ ಹರ ಹರ ೪

ಚಿದಾನಂದನನು ಹರ ಹರ ಹರ ಹರ
ಚಿಂತಿಸೆ ಚಿಂತೆಯು ಹರ ಹರ ಹರ ಹರ ೫

## ೪೮

ಹೇಮಾಂಬರವನುಟ್ಟು ತತ್ವವ ಕೇಳುತ ಕೈಮುಗಿದಿಹಳವಳಾರೆ
ಭೂಮಿಗೆ ಕರ್ತಾ ಬ್ರಹ್ಮಾಂಡ ಕೋಟಿಗೆ ತಾಯಿಯಾದ ಬಗಳೆ ವೀರೆ ಪ

ಹರಡಿಯ ತಿರುವುತ ಹೂಗಳ ಬೀರುತ
ಹರಿದಾಡುತಿಹಳವಳಾರೆ
ಪರಮ ಬಗಳೆ ಚಿದಾನಂದ ಗುರುವ ಕಾಯ್ದು
ಇರುಳು ಹಗಲು ಇಹವೀರೆ ೧

ಮುಸಿ ಮುಸಿ ನಗುತಲಿ ಕರುಣೆಯ ತೋರುತ
ಹೊಸಬಳು ಇಹಳವಳಾರೇ
ಶಶಿ ಜೂಟೆ ಬಗಳ ಚಿದಾನಂದ ನೆಡಬಲ
ಅಸಿಯ ಹಿಡಿದು ಕಾವ ವೀರೆ ೨

ಘುಲು ಘುಲು ನಡೆಯುತ ಢಾಲು ಕತ್ತಿಯ ಹಿಡಿದು
ಗಾಳಿ ಹಾಕುತಳಿಹಳವಳಾರೆ
ಖಳನಾಶ ಬಗಳೆ ಚಿದಾನಂದನಲಿ
ಬಳಿಕ ಮನ್ನಣೆ ಪಡೆದ ವೀರೆ ೩

## ಗುರು ಸಂಕೀರ್ತನೆ

### ೪೯

ಅರಿತ ಗುರುವಿನ ಪಾದ ಹುಡುಕಿ
ಹೊಂದು ಮುಕ್ತಿಯಿಂದು
ಮರೆತ ಗುರುವಿನಸಂಗ ಕೇಡು
ಇಂದು ನರಕ ಮುಂದು ಪ

ಒಳ್ಳೆ ನಾವೆಯೊಳು ಕಲ್ಲು ಹಾಕಿಸಿಡು
ಅದು ದಾಟಿಸುವುದು
ಕಲ್ಲಿಗೆ ಕಲ್ಲು ಕಟ್ಟಿದರಲ್ಲೆ ಮುಳುಗುವುದು
ಅದು ಮುಂದಕೆ ಹೋಗದು ೧

ಜಾರುವವನ ಕೈಯ ಹಿಡಿದರೆ ತಾನು
ಜಾರುವ ಮೇಲೆ ಜಾರಿ ಬೀಳುವ
ಘೋರ ಗುರುವಿನ ಸಂಗ ಹಿಡಿದು
ಭ್ರಷ್ಟನಾಗುವ ಮುಂದೆ ಕೆಟ್ಟು ಹೋಗುವ ೨

ತಾನು ಮೂರ್ಖ ಅವನು ಮೂರ್ಖ
ಕೂಡಲೆಂದು ಮತ್ತೂ ಕೇಡು ಇಂದು
ಜ್ಞಾನಿ ಚಿದಾನಂದನ ಪಾದ ಹುಡುಕಿ
ಹೊಂದು ಮುಕ್ತಿ ಇಂದು ೩

## ೫೦

ಉಣ್ಣು ಉಣ್ಣು ಉಣ್ಣು ದೇವ ಉಣ್ಣು ಪ

ಕಣ್ಣಲಿ ನೋಡು ದೇವ ಮತ್ತನ್ನಕೆ ತುಪ್ಪ ಹಾಕು
ಚೆನ್ನಾಗಿ ಕಲಸಿ ಬಾಯೊಳಗಿಕ್ಕು ೧

ಎಡದಲೀಶ ಕಂಡ್ಯ ನೀ ದೃಢ ಸಮಾಧಿಯ ಪುರುಷ
ಬಿಡಬೇಡ ಬೇಡಿಕೋ ಪೂರ್ಣ ೨

ನಿತ್ಯತೃಪ್ತನೆ ದೇವ ನೀ ನಿತ್ಯ ಪರವಸ್ತು
ನಿತ್ಯ ಚಿದಾನಂದ ತಾನಾದ ದೇವ ೩

## ೫೧

ಎಂಥಾ ದಯಾಕರನು ನೋಡೆ ಸದ್ಗುರುರಾಯ
ಎಂಥಾ ದಯಾಕರನು ನೋಡೆ ಅಂತರಂಗದ
ತಾಪವ ಹರಿಸಿ ಅಂತರಾತ್ಮನ ತೋರಿದ ಪ

ಹಸಿವು ತೃಷೆ ಪರಿಹರಿಸಿ ನಾನಾಬಗೆ
ವಿಷಯವೆಲ್ಲವ ತೊರೆಸಿ
ಮುಸುಕ ನುಗಿದು ಮಾಯೆಯ
ಪರಂಜ್ಯೋತಿಯ ಬೆಳಗಿಸಿದನು ನೋಡೆ ೧

ಸಂಸಾರದ ಬಹು ದುಃಖವ ಹರಿಸಿ
ಶಿಂಶುಮಾರ ಚಕ್ರವ ಹಂಸೋ
ಹಂಸೋಹಮೆಂದೆನ್ನನೇರಿಸಿ
ಸಂಶಯ ಹರಿಸಿದನೆ ೨

ನಿರುಪಮ ನೀನೆ ಎಂದು ನಿರ್ಗುಣ
ಪರಮ ಪುರುಷನೆ ಬಂದು
ಗುರು ಚಿದಾನಂದ ಸಾಕ್ಷಾತ್ಕಾರ ನೀನೆಂದು
ಗುರು ನೀನೆ ನಿಜವೆಂದನೆ ೩

## ೫೨

ಎನಿಕೆ ಒಂದಾಗಲಿ ಗುರುವೆ ಎನಿಕೆ ಒಂದಾಗಲಿ
ಎನಿಕೆ ಒಂದಾಗಲಿ ಯೋಚನೆ ಇದಾಗಲಿ
ಧ್ಯಾನ ಚಿದಾನಂದ ಗುರುವ ಧ್ಯಾನ ಮರೆಯದಂತೆ ಎನಗೆ ಪ

ಕಂಡವರು ಉಗುಳಲಿ ಕಾಲಲೆನ್ನ ಒದೆಯಲಿ
ಭಂಡ ಮನುಜನಿವನು ಎಂದು ಬಾಳುಗೇಡಿ ಎನಲಿ ಎನಗೆ ೧

ಅನಾಯಾಸ ಬರಲಿ ಅಸಹ್ಯಿಸಿಕೊಳ್ಳುತಿರಲಿ
ಹೀನಮನುಜನಿವನು ಎಂದು ಬಾಳುಗೇಡಿ ಎನಲಿ ಎನಗೆ ೨

ಮುಂದೆ ಕೆಡಹಿ ಬೀಳಲಿ ಮುಂಗೈ ಮೊಳಕಾಲ್ಮುರಿಯಲಿ
ಹಿಂದಣಿಂದ ಕಳ್ಳರು ಕಟ್ಟಿಯೆಹಿಮ್ಮಡ ಕಡಿಯಲೆನಗೆ ೩

ತನುವು ಎಲ್ಲ ನೋಯಲಿ ತಲೆ ಬೇನೆಯು ಬರಲಿ
ಘನ ಕುರುವು ಕುತ್ತವು ಬಲಿದು ಘನವಾಗಿ ಇರಲಿ ಎನಗೆ ೪

ಇಂತು ಎನಗಾಗಲಿ ಇದೇ ಎನಗಿರಲಿ
ಚಿಂತಾಯುತ ಚಿದಾನಂದನ ಚಿಂತೆ ಮರೆಯದಂತೆ ಎನಗೆ ೫

## ೫೩

ಎನ್ನ ಗುರುವು ಬಂದನೆ ಏನಂತ ಅಂದನೆ
ನಿನ್ನ ನೀನು ತಿಳಿದು ನೋಡೆ
ನೀನೆ ನಾನು ಎಂದನೆ ಪ

ಒತ್ತು ಮಡವನೆಂದನೆ ವಾಯು ಪೀಕೆಂದನೆ
ಎತ್ತು ಸ್ವರವನೆಂದನೆ ಏರು ಮಾಳಿಗೆಂದನೆ ೧

ಕೆರೆಯ ಮುಳುಗು ಎಂದನೆ ಕಾಣುಜ್ಯೋತಿ ಎಂದನೆ
ಸುರಿವ ಸುಖವು ಎಂದನೆ ಸೂರೆ ಪ್ರಪಂಚೆಂದನೆ ೨

ಹಗರಣದಿಂದಂದನೆ ಹಮ್ಮಿನಿಂದಂದನೆ
ಬಗೆಬಗೆಯಿಂ ಚಿದಾನಂದ ನೀನೇ ಬ್ರಹ್ಮ ಎಂದನೆ ೩

## ೫೪

ಏನ ಮಾಡಿ ತೀರುವೆ ಸದ್ಗುರುನಾಥಗೆ ಏನಮಾಡಿ ತೀರುವೆ
ನೀನೆಯು ಬ್ರಹ್ಮವೆಂದು ಯನ್ನಕೈಯಲಿ ಹಿಡಿದು ಕೊಟ್ಟ ಪ

ವೇದಕ್ಕೆ ನಿಲುಕದಿಹ ಷಣ್ಮತಗಳ ವಾದಕ್ಕೆ ತೋರದಿಹ
ನಾದಕ್ಕೆ ಬೇರಿಹ ನಾಮರೂಪವಳಿದಿಹ
ಆದಿಯು ನೀನೆಯೆಂದು ಯನ್ನಕೈಯಲಿ ಪಿಡಿದು ಕೊಟ್ಟ ೧

ಬುದ್ಧಿ ಮನಕೆ ಹೊರತಾ ತತ್ವಂಗಳಲಿದ್ದ ಗುಣಕೆ ಅತೀತ
ಶುದ್ಧ ಬ್ರಹ್ಮವು ನೀನು ಸಿದ್ಧಾ ಸಿದ್ಧಾಂತೆಂದು
ಮುದ್ದಿಸಿ ನಿನ್ನನು ಎನ್ನ ಕೈಯಲಿ ಹಿಡಿಕೊಟ್ಟ ೨

ಕಾರ್ಯ ತನುವ ಧರಿಸಿ ಜನ್ಮ ಜನ್ಮಾದಿ ತೋರುವ ಜೀವವೆನಿಸಿ
ಕಾರ್ಯ ಕಾರಣಾತೀತನಾದ ಚಿದಾನಂದನು ಬೇರಿಲ್ಲ
ನೀನೇ ಎಂದು ಎನ್ನ ಕೈಯಲಿ ಹಿಡಿದು ಕೊಟ್ಟ ೩

## ೫೫

ಕಣ್ಣಿನೊಳು ಕಣ್ಣು ಕಂಡೆ ಕಾಣ ಬಾರದನು ಕಂಡೆ
ಪನ್ನಗಧರನ ಕಂಡೆ ನೋಡಿ ಕಣ್ಣಿನೊಳು ಪ

ಝಗ ಝಗಿಸುವುದನು ಕಂಡೆ ಜ್ಯೋತಿ ಪ್ರಕಾಶವ ಕಂಡೆ
ನಿಗಿ ನಿಗಿ ಕಿಚ್ಚು ಸುರಿಸುವುದು ಕಂಡೆ ನೋಡಿ ಕಣ್ಣಿನೊಳು ೧

ಮುತ್ತು ಸುರಿವುದು ಕಂಡೆ ಮಲ್ಲಿಗೆ ಮಳೆಗರೆವುದು ಕಂಡೆ
ರತ್ನದ ಕಾಂತಿ ಕಂಡೆ ನೋಡಿ ಕಣ್ಣಿನೊಳು ೨

ಸಾದು ಸತ್ಪುರುಷರ ಕಂಡೆ ಸಾಕ್ಷಾನ್ನಿರುಪಾಧಿಯ ಕಂಡೆ
ಗುರು ಚಿದಾನಂದನ ಕಂಡೆ ನೋಡಿ ಕಣ್ಣಿನೊಳು ೩

## ೫೬

ಕನಸ ಕಂಡೆ ನಿನ್ನಿನಿರುಳೊಳು ಕೇಳು
ಕನಸಿನ ಸೊಗಸನು ತರಳೆ
ಚಿನುಮಯಾತ್ಮಕ ಚಿದಾನಂದ ಅವಧೂತ
ದಿನಕರ ಪ್ರಭಾತೀತ ಗುರುನಾಥ ಬಂದಿಹ ಪ

ಕಾಶ ಕೌಪೀನವನುಟ್ಟು ಚೆಲ್ವ
ಬಾಸುರ ಕುಂಡಲವಿಟ್ಟು
ಕೇಶದ ಜಡೆಗಳು ಥಳಥಳಿಸಲು ಸರ್ವ
ಭೂಷಿತನಾಗಿ ತನ್ನೆದುರಿಗೆ ನಿಂತಿಹ ೧

ನೆಟ್ಟನೆ ನಡುಮನೆಯೊಳು ತಾನು
ನೆಟ್ಟನೆ ಬಂದು ಕುಳಿತಿಹನು
ಶಿಷ್ಟ ಮೂರುತಿ ತನ್ನ ಕಾಯಬೇಕು ಎಂದು
ಮುಟ್ಟಿ ಪಾದವ ನಾನು ಶರಣು ಮಾಡಲಿದ್ದೆ ೨

ಸುಂದರ ಕಳೆಯುಳ್ಳ ಸ್ವಾಮಿ
ತಾನು ಸಿಂಧು ಕೃಪಾಕರನಾಮಿ
ಎಂದಡಿಗಡಿಗೆ ಸಾಷ್ಟಾಂಗವೆರಗಿ
ನಿಂದು ಪೂಜಿಸಿ ಕಣ್ತುಂಬ ನೋಡಿನಲಿವ ೩

ನಾನಾ ಪೂಜೆಯನೆಲ್ಲವ ಮಾಡಿ ಗುರುಧ್ಯಾನದಿ
ನಾನೋಲಾಡಿ ಮಾನವನಾಗಿ
ನಾನು ನಿಂದಿರಲೆನ್ನ ಕಿವಿಯೊಳು
ನಾನು ನೀಗಿತ್ತೆಂದು ಉಪದೇಶ ನೀಡುವ ೪

ಈಪರಿ ಕನಸನು ಕಂಡು ಎಲ್ಲ
ತಾಪವು ಪರಿಹಾರಗೊಂಡು

ಭೂಪ ಚಿದಾನಂದ ಅವಧೂತ ತಾನಾದ
ರೂಪಾಗಿ ಬೆಳಗಿರೆ ಬೆಳಗಿರೆ ಬೆಳ್ಳನೆ ಬೆಳಕಿತ್ತು ೫

## ೫೭

ಕೊಡು ಬೇಡುವೆನೊಂದ ಚಿದಾನಂದ
ಕೊಡು ಬೇಡುವೆನೊಂದ
ಕೊಡು ಬೇಡುವೆನೊಂದ
ಕಡೆ ಹಾಯ್ದು ಹೋಗಿ ಮೆಲ್ಲಡಿಯಾದ ನಿಮ್ಮ
ಪಾದದಡಿಯೊಳಡಗುವುದಾ ಪ

ನಿರ್ಮಳ ನಿತ್ಯ ನಿರಂಜನ ಸ್ವರ್ಮಣಿ ಸುಸಾತ್ವಿಕ
ವರ್ಮ ಧರ್ಮ ಕರ್ಮ ನಿರ್ಮಾಯವಾದ ಷ–
ಡೂರ್ಮೆ ವಿರಹಿತೆಂಬ ಪೆರ್ಮೆಯೊಳಡಗುವುದ ೧

ವಿಶ್ವಾತ್ಮ ವಿಶ್ವಾಧಾರ ವಿಶ್ವಹರ ವಿಶ್ವ
ವಿಶ್ವದಾಕಾರ ಸ್ವಸ್ವ ನಿಸ್ವನದ ಸ್ವಸ್ವಪೂರಿತ ಮ–
ಹಾಸ್ವಯಂ ಜ್ಯೋತಿಯೆ ಭಾಸ್ವ ಮೂರುತಿ ಈಗ ೨

ಶತಕೋಟಿ ಸೂರ್ಯರಾಕಾರ ಶತಾಶತ
ಶತವಿಂದು ಪ್ರಭಾವಕಾರ
ಸ್ತುತಿಗೆ ಮೀರಿದ ದೊರೆಯೋಗಿ ಚಿದಾನಂದ
ಪತಿಯ ಪಾದಪದ್ಮನುತಿಸಿ ಕೊಡುವುದೀಗ ೩

## ೫೮

ಗುರು ಹೊಂದಿದವನೀಗ ಎಂದಿಗೂ ಕೆಡನು
ಮರಳಿ ಹುಟ್ಟಿದರೇನು ಗುರುವು ಕಾಯುವನು ಪ

ಗುರು ಹೇಳಿದಂತಿರದೆ ಗುರು ಆಜ್ಞೆಯಂತಿರದೆ
ಬರಿಯ ಪ್ರಾಪಂಚದ ನಡೆಯನೆ ನಡೆದು
ಮರೆತೆಯಾದರೇನು ಗುರು ಕರುಣ ತಾನದುವೆ
ನರಕಕ್ಕೆ ಕಳುಹದೋ ಯಮನ ಸೇರಿಸದೋ ೧

ತನ್ನ ಅವಗುಣದಿ ಜನ್ಮಗಳ ಸೇರಿದರೇನು
ಅನ್ಯಕೆ ಎಳಸದದು ಸೋಂಕಿನಲಿ ಮನವು
ಚೆನ್ನಾಗಿಯೇ ಗುರುದ್ವಾರವನು ಕಾದಿಹನು
ಭಿನ್ನಿಸದೆ ಪರತತ್ವ ಬೋಧೆ ಹೇಳುವನು ೨

ಭ್ರಷ್ಟತ್ವದಿಂ ತನ್ನ ಪಾಪವನು ಉಣುತಲಿ
ಹುಟ್ಟುತಿಹ ಹಂದಿ ಪಶುವಾಗಿ ತಾನು
ಘಟ್ಯಾಗಿ ನರಜನ್ಮ ಧರಿಸುತ್ತ ಕಡೆಯಲಿ
ಶಿಷ್ಟ ಚಿದಾನಂದ ಬಗಳೆಯನು ಕೂಡುವನು ೩

## ೫೯

ಗುರುಗಳಿಗೆ ಧೂಪ ಗುರುಗಣಗಳಿಗೆ ಧೂಪ
ಗುರುಪಾದಕೆ ನಿತ್ಯ ನಿತ್ಯದಲಿ ಧೂಪ ಪ

ನಾನದಾರಿಹೆನೆಂದು ತಿಳಿದವಗೆ ಧೂಪ
ನಾನು ಆತ್ಮವು ಎಂದು ಕಂಡವಗೆ ಧೂಪ
ನಾನಾ ಜೀವ ಭ್ರಾಂತಿಯಳಿದವಗೆ ಧೂಪ
ತಾನೆ ತಾನಾಗಿಹೆನೆಂದವಗೆ ಧೂಪ ೧

ಸಂಸಾರದೊಳು ಇದ್ದು ಇಲ್ಲದವನಿಗೆ ಧೂಪ
ಸಂಸಾರ ಸಂತೆಂದು ಕಂಡವಗೆ ಧೂಪ
ಸಂಸಾರ ಲೇಪ ಅಂಟದವನಿಗೆ ಧೂಪ
ಸಂಸಾರದೊಳು ಮುಕ್ತನಾದವಗೆ ಧೂಪ ೨

ಸೂರ್ಯ ಚಂದ್ರ ಸ್ವರದಿ ನಡೆದವಗೆ ಧೂಪ
ಆರು ಚಕ್ರದಿ ನಡೆದವಗೆ ಧೂಪ
ಘೋರೆನಿಪ ಓಂಕಾರ ಕೇಳ್ದವಗೆ ಧೂಪ
ಧೀರ ಚಿದಾನಂದ ಗುರುವಾದವಗೆ ಧೂಪ ೩

## ೬೦

ಗುರುಗಳೆಂಬರೆ ಇವರು ಸತ್ಯವು
ಗುರುಗಳೆಂಬರೆ ಇವರು ಸತ್ಯವು ಪ

ಅಣುರೇಣು ತೃಣಕಾಷ್ಠ ಬ್ರಹ್ಮ ಹೇಳುವರು
ಗುಣಗಳ ಹುಡುಕರು ಪ್ರಕೃತಿಯ ೧

ಜನನ ಮರಣಗಳ ಕಡಿದು ಹಾಕುವರು
ಜನನಕ್ಕೆ ಬರಗೊಡರು ಜನಗಳ ೨

ನರನನು ವೈದು ಹರನ ಮಾಡುವರು
ಗುರು ಚಿದಾನಂದರಹರು ನಿಜದಲಿ ೩

## ೬೧

ಗುರುವ ನೆನೆದರೆ ಸಾಲದೆ ಚಿದಾನಂದ
ಗುರುವ ನೆನೆದರೆ ಸಾಲದೆ
ಹಿರಿದು ಸಂಸಾರಗಳು ಮಾಡುತ್ತೊಂದು
ದಿನಕ್ಕೊಮ್ಮೆ ಗುರುವ ನೆನೆದರೆ ಸಾಲದೆ ಪ

ಜುಟ್ಟು ಜನಿವಾರ ಬಿಸುಟು ತಾವೀಗ
ಉಟ್ಟೊಂದು ಕೌಪೀನವ

ಕಟ್ಟಿ ಕಾಷಾಯ ಕಮಂಡಲು ದಂಡ ಹಿಡಿದು
ದಿಟ್ಟ ಸಂನ್ಯಾಸ ಪಡೆಯುವುದೇಕೆ ೧

ಅಡವಿ ಅರಣ್ಯವ ಸೇರಿ ಅಲ್ಲಿದ್ದ
ಅಡವಿ ತೊಪ್ಪಲನೆ ತಿಂದು
ಗಿಡ ಮರಗಳಲಿ ಮಲಗಿ ಮಳೆ ಛಳಿಗೆ ಕಂ
ಗೆಡೆದೆ ಕಡು ತಪವ ಮಾಡುವುದೇಕೆ ೨

ಉಡುದಾರಗಳನೆ ಹರಿದು ತಾವೀಗ
ಸುಡುಗಾಡಿನಲಿಹ ಬೂದಿಯನು
ಬಿಡದೆ ಲೇಪಿಸಿ ಮೈಗೆ ದಿಗಂಬರ ತಾನಾಗಿ
ಕಡು ಚರಿಯ ಬೇಡುವುದೇಕೆ ೩

ಕಾವಿ ವಸ್ತ್ರಗಳನುಟ್ಟು ಮೈಗೆಲ್ಲ
ತಾ ವಿಭೂತಿಯ ಧರಿಸಿ ಕಂಠದಲಿ
ತೀವಿ ರುದ್ರಾಕ್ಷಿ ತಾಳಿ ಶಿವಶಿವಾಯೆಂದು
ತಾವು ಗೊಣಗುವುದೇಕೆ ೪

ಜ್ಞಾನಿಗೀಯವಸ್ಥೆಯಾ ವೇಷಗಳು ತಾವು
ಇವಗೇನು ಇಲ್ಲಿಲ್ಲ ತಾನೆ ಚಿದಾನಂದ ಗುರು
ತಾನೆ ತಾನೇ ಎಂದು ಭಾವಿಸುತಲಿ
ತೀವಿ ತನ್ನನೇ ಮರೆತಿರಲದೇಕೆ ೫

## ೬೨

ಗುರುವನು ಸ್ಪರ್ಶಿಸಿ ಗುರುಮೂರ್ತಿಯಾದೆನು
ಗುರುವನು ಸ್ಪರ್ಶಿಸಿ ಪ

ಕ್ಷೀರದಿ ಕ್ಷೀರವು ಕೂಡಿ ಕ್ಷೀರವೇ ಆದಂತೆ
ಪಾರ ಪಾರವೆ ಕೂಡಿ ಪಾರವೇ ಆದಂತೆ ೧

ಜ್ಯೋತಿ ಜ್ಯೋತಿಯ ಕೂಡಿ ಜ್ಯೋತಿಯೇ ಆದಂತೆ
ನೀತಿ ನೀತಿಯೆ ಕೂಡಿ ನೀತಿಯೇ ಆದಂತೆ ೨

ಮಂಗಳವೆನಿಸುವ ಚಿದಾನಂದ ಬ್ರಹ್ಮದಿ
ಮಂಗಳದೊಳು ಕೂಡಿ ಮಂಗಳವಾದೆನು ೩

## ೬೩

ಗುರುವು ಬಂದ ನಮ್ಮ ಸಿರಿಯು ಬಂದ
ಹರಿ ಹರ ಬ್ರಹ್ಮರ ದೊರೆರಾಯ ಬಂದ ಪ

ಸರ್ವರೂಪಕ ಬಂದ
ಸರ್ವಾಂತರ್ಯಾಮಿ ಬಂದ
ಸರ್ವ ಚೇತನ ಬಂದ
ಸರ್ವಸಾಕ್ಷಿ ಬಂದ ೧

ಆನಂದಾತ್ಮಕ ಬಂದ ಅಜ
ಅನಾದಿಯು ಬಂದ
ಸ್ವಾನಂದ ಶರಧಿ ಬಂದ
ಸುಖರೂಪ ಬಂದ ೨

ಅಂತರಾತ್ಮಕ ಬಂದ
ಅವ್ಯಕ್ತಾಚಲ ಬಂದ
ಚಿಂತಾಮಣಿಯೆ ಬಂದ
ಚಿದಾನಂದ ಬಂದ ೩

## ೬೪

ಗುರುವಿನ ಕರುಣವ ನಾನೇನ ಹೇಳಲಿ
ಗುರುವಿನ ಕರುಣವ ಪ

ಇಟ್ಟನು ಕೊಟ್ಟನು ಉಪದೇಶ
ಸೃಷ್ಟಿಯೆ ನೀನೆಂದ ನಾನೇನ ಹೇಳಲಿ ೧

ಮೂಗಿನ ಕೊನೆಯಲ್ಲಿ ಮಾಡಿದ ಮನೆಯನ್ನು
ಕೂಗಿಸಿದನು ನಾದ ನಾನೇನು ಹೇಳಲಿ ೨

ಶರೀರನ ಮರೆಯಿಸಿ ದೊರೆಯು ಚಿದಾನಂದ
ಗುರುವನೆ ಮಾಡಿದ ನಾನೇನ ಹೇಳಲಿ ೩

## ೬೫

ಗುರುವಿನ ಗುಣಂಗಳ ನೆನೆವೆ ಸಿದ್ಧೇಶ ನಾನು
ಗುರುವಿನ ಪಾದಂಗಳ ನೆನೆವೆ ಸಿದ್ಧೇಶ ಪ

ಸುಖವು ಬಂದರೆ ಹಿಗ್ಗದವರು ಸಿದ್ಧೇಶ ನಾನಾ
ದುಃಖವು ಬಂದರೆ ಬಗ್ಗದವರು ಸಿದ್ಧೇಶ
ಅಖಿಳವೆಲ್ಲವ ಬ್ರಹ್ಮವೆಂದರು ಸಿದ್ಧೇಶ ಇವರು
ಮುಕುತ ಗಣಂಗಳು ಈಗ ಸಿದ್ಧೇಶ ೧

ಮಾನ ಹಚ್ಚಿಕೊಳ್ಳದವರು ಸಿದ್ಧೇಶ ಅಭಿ
ಮಾನಗಳು ನೀಗಿದವರು ಸಿದ್ಧೇಶ
ತಾನೆ ಎಂದು ತಿಳಿದವರು ಸಿದ್ಧೇಶ ಅವರು
ಜ್ಞಾನ ಮುಕ್ತಗಣಂಗಳು ಸಿದ್ಧೇಶ ೨

ಸಂಸಾರವಿದ್ದರೆ ಬಾಧಕವಿಲ್ಲದವರು ಸಿದ್ಧೇಶ
ಸಿದ್ಧ ಚಿದಾನಂದರಿಹರು ಸಿದ್ಧೇಶ ಇವರು
ಶುದ್ಧ ಮುಕ್ತ ಗಣಂಗಳು ಸಿದ್ಧೇಶ ೩

## ೬೬

ಗುರುವಿನ ನೆನೆದವನೆಲ್ಲರಿಗಧಿಕ
ಗುರುವಿನ ನೆನೆದವನೇ ಪ

ನರನಿಂದಧಿಕ ನರಪತಿಗಧಿಕ
ಸುರರಿಂದಧಿಕ ಸುರನಾಥಗಧಿಕ
ವರಮುನಿಗಧಿಕ ವಸುಧೆಗಳಿಗಧಿಕ
ಗುರುಪಾದವ ನಿತ್ಯ ನೆನೆದವನಯ್ಯ ೧

ಧರೆಗಿಂತಲಧಿಕ ಗಿರಿಗಿಂತಲಧಿಕ
ಹರಿಗಿಂತಲಧಿಕ ಹರಗಿಂತಲಧಿಕ
ಪರಕಿಂತಲಧಿಕ ಪರತರಕಧಿಕ
ಗುರುಪಾದವ ನಿತ್ಯ ನೆನೆದವನಯ್ಯ ೨

ಆವವರಧಿಕ ಅವರಿಗಿಂತಧಿಕ
ಭಾವಶುದ್ಧಿಯಿಂದ ಗುರುವಿನ
ಸಾವಧಾನದಿ ನಿತ್ಯ ಮನದಲಿ ನೆನೆದವ
ದೇವ ಚಿದಾನಂದ ಗುರುನಾಥನಯ್ಯ ೩

## ೬೭

ಗುರುವು ಗುರುವು ಎಂದು ಜಗದೊಳಗಿಹರು
ಗುರುವು ಅದ್ಯಾತರ ಗುರುವು

ನರನನು ತಿಳುಹಿಯೆ ಹರನನು ಮಾಡುವ
ಗುರುವು ಆತನೆ ಸದ್ಗುರುವು ಪ

ಜ್ಞಾನವನರುಹಿ ಅಜ್ಞಾನವ ಹರಿಸುವ
ಜ್ಞಾನಿಯಾದವ ಗುರುವು
ಏನೇನೋ ಭ್ರಾಂತಿಯದೆಲ್ಲವ ನೀಗಿ ನಿ–
ಧಾನ ಮಾಡಿದನಾತ ಗುರುವು
ನೀನೀಗ ನಾನೆಂದು ಸಂಶಯ ಬಿಡಿಸಿ
ಸನ್ಮಾನ ಮಾಡಿದನಾತ ಗುರುವು ೧

ಯಮ ನಿಯಮಾಸನ ಎಲ್ಲವನರುಹಿಯೆ
ಎಚ್ಚರಿಸಿದಾತನೆ ಗುರುವು
ಸಮರಸವಾಯು ಮನವ ಮಾಡಿ
ಕುಂಭಕಕಮರಿಸಿದಾತನೆ ಗುರುವು
ಘುಮು ಘುಮು ಘುಮು ಎಂಬ ಘಂಟಾ
ಘೋಷವನ್ನೆಬ್ಬಿಸಿ ಅನುವುಮಾಡಿದವ ಗುರುವು
ದ್ಯುಮಣಿಕೋಟಿ ಕಳೆದೃಷ್ಟಿಗೆ ತುಂಬಿಸಿ
ದೃಢವ ಮಾಡಿದನಾತನೆ ಗುರುವು ೨

ದೃಷ್ಟಿಯ ನಿಟ್ಟಿಸಿ ಖೇಚರಿ ಮುದ್ರೆ ನಿಲಿಸಿ
ದಯ ಮಾಡಿದಾತನೆ ಗುರುವು
ಕಟ್ಟಳಿಲ್ಲದ ತೇಜ ಖವಖವ ನಗಿಸಿಯೆ
ದಿಟ್ಟ ಮಾಡಿದನಾತ ಗುರುವು
ಮುಟ್ಟಿ ತುಂಬಿದ ಬೆಳದಿಂಗಳ ಖಂಡದಿ
ಮುಳಿಗಿಸಿದಾತನೆ ಗುರುವು
ಶಿಷ್ಟ ಚಿದಾನಂದ ಸದ್ಗುರುವನಮಾಡಿ
ಸಾಕ್ಷಿ ಮಾಡಿದನಾತ ಗುರುವು ೩

## ೬೮

ಗುರುವೇ ಗುರುವೇ ಗುರು ಗುರುವೇ ಮಹಾ
ಗುರು ಗುರುವೇ ಶ್ರೀ ಗುರುವೇ ಪ

ನಿತ್ಯತೃಪ್ತ ನಿರಾಮಯ ನಿರಂಜನ ನಿಷ್ಕಲಂಕ ಗುರುವೇ
ಪ್ರತ್ಯಾಗಾತ್ಮ ಪರಾತ್ಪರಾತ್ಪರ ಪ್ರತ್ಯಯರಹಿತ ಗುರುವೇ ೧

ನಿರ್ವಿಕಲ್ಪ ನಿರಾಕಾರ ನಿರ್ಗುಣ ನಿರ್ಮಾಯನೇ ಗುರುವೇ
ನಿರ್ವಿಕಾರ ನಿರ್ದ್ವಂದ್ವ ನಿಜಾಕಾರ ನಿರುಪಮಾತ್ಮ ಗುರುವೇ ೨

ಪೂಜ್ಯಮಾನ ಸುರಾಸುರ ಸಿದ್ಧಾಯಿಂ ಪೂಜಾರ್ಪಿತ ಗುರುವೇ
ಈ ಜಗದೇಕ ನಾಥನೆ ಚಿದಾನಂದ ತೇಜಃಪುಂಜ ಗುರುವೇ ೩

## ೬೯

ತನ್ನ ತಿಳಿದು ತಾನಾದಂಥ ಗುರುವಿನ ಪಾದವ ಹೊಂದು
ತನ್ನನರಿಯದ ಗುರುವ ಹೊಂದಬೇಡೆಂದೆಂದು ಪ

ನಿನ್ನನು ದೇವನೆಂದೆನ್ನುವಗೆ ಈಗ ಶರಣು ಮಾಡೋ
ಅನ್ಯ ದೇವರನೆಂದೆನ್ನುವನ ಹಾದಿ ಹೋಗಬೇಡೋ ೧

ಕೋಟಿರವಿ ತೇಜವ ಕಣ್ಣಲಿ ನೋಡು
ಬೂಟಿಕ ಕಾಯಕಗಳ ದೂರಮಾಡು ೨

ಸೋಹಂ ಮಂತ್ರವ ಹೇಳದವನ ಸೆರಗ ಬಿಟ್ಟು ನೀನು
ಊಹಿಸುವ ಬೇರೆ ಗುರುವನು ಉತ್ತಮ ಅವನು ೩

ವಾಸನೆ ಕಳೆದಾತಂಗೆ ಒಪ್ಪಿಸಯ್ಯ ತನುವ
ಆಸೆ ಹಚ್ಚುವವನತ್ತ ಬಿಡಲಿ ಬೇಡ ಮನವ ೪

ಚಿದಾನಂದ ಗುರುವ ಹೊಂದು ಚಿನ್ಮಾತ್ರನಹೆ ಮದಮುಖ
ಗುರುವ ಹೊಂದದಿರು ತಿಳಿ ಮುಂದೆ ನೀನು ಕೆಡುವೆ ೫

## ೭೦

ಗುರುವೇ ನಿತ್ಯನು ಗುರುವೇ ನಿತ್ಯನು
ಗುರುವೇ ನಿತ್ಯನು ಸತ್ಯ ಪ

ಓದು ಓದು ಅದು ಯಾತರ ಓದು
ಓದು ಅಧ್ಯಾತ್ಮವ ಓದು
ಬೋಧ ಬೋಧ ತಾನ್ಯಾತರ ಬೋಧವು
ಬೋಧವೆ ಆತ್ಮದ ಬೋಧ ೧

ಬುದ್ಧಿ ಬುದ್ಧಿ ತಾನ್ಯಾತರ ಬುದ್ಧಿಯು
ಬುದ್ಧಿಯು ನಿಶ್ಚಯ ಬುದ್ಧಿ
ಸಿದ್ಧಿ ಸಿದ್ಧಿ ತಾನ್ಯಾತರ ಸಿದ್ಧಿಯು
ಸಿದ್ಧಿಯು ಜ್ಞಾನದ ಸಿದ್ಧಿ ೨

ಶಾಂತ ಶಾಂತ ತಾನ್ಯಾತರ
ಶಾಂತವು ಎಲ್ಲಕೆ ನಿಂತುದೆ ಶಾಂತ
ಭ್ರಾಂತುಭ್ರಾಂತು ತಾನ್ಯಾತರ
ಭ್ರಾಂತದು ಗುರುವಿನಲ್ಲಿದ್ದುದೆ ಭ್ರಾಂತು ೩

ಧ್ಯಾನ ಧ್ಯಾನ ತಾನ್ಯಾತರ ಧ್ಯಾನವು
ಧ್ಯಾನವು ತನ್ನದೆ ಧ್ಯಾನ

ಮೌನ ಮೌನ ಅದು ಯಾತರ ಮೌನವು
ಮೌನವು ತುರ್ಯದೆ ಮೌನ ೪

ಭಕ್ತಿ ಭಕ್ತಿ ತಾನ್ಯಾತರ ಭಕ್ತಿಯು
ಮುಕ್ತಿಯು ನಿಜವಹ ಭಕ್ತಿ
ಮುಕ್ತಿ ಮುಕ್ತಿ ತಾನ್ಯಾತರ ಮುಕ್ತಿಯು
ಮುಕ್ತಿ ಚಿದಾನಂದ ಮುಕ್ತಿ ೫

## ೭೧

ಗುರುವೆ ನಿನ್ನಯ ದಾಸನಾದೆ ಎನ್ನ
ಕರುಣದಿ ಪೊರೆವೊಡೆ ನಾನೇ ನೀನಾದೆ ಪ

ನಿರ್ಮಳ ಕಾವಿಯನುಟ್ಟು ಭೇದ
ಮರ್ಮವೆನಿಪ ರುದ್ರಾಕ್ಷಿಯ ತೊಟ್ಟು
ಧರ್ಮ ಕುಂಡಲವೆಂಬೊದಿಟ್ಟು ಹರ
ಕರ್ಮ ಭಸ್ಮವ ಸ್ಥಾನ ಸ್ಥಾನಕೆ ಇಟ್ಟು ೧

ಸ್ವಸ್ಥ ಸುಸ್ಥಳದಲ್ಲಿ ಕುಳಿತು ಗುರು
ವಿಸ್ತರಿಸಿದ ಗೋಪ್ಯವ ಮಾಡ ಕಲಿತು
ನಾಸ್ತಿ ಎಂಬುದ ನಾ ಮರೆತು ಪರ
ವಸ್ತುನೀ ನಿಜವೆ ಎಂಬುದ ನಾನರಿತು ೨

ತಾನೆಂದು ಚಿಂತಿಸಲ್ಯಾಕೆ ಚಿ-
ದಾನಂದ ಗುರುವೆ ಎದುರಲಿರಲಿಕೆ
ಧ್ಯಾನ ಮೌನಗಳವು ಯಾಕೆ ನಾನು
ನೀನೆ ಎಂಬುದ ಮನಗಂಡಿರಲೇಕೆ ೩

## ೭೨

ಗುರುವೇ ಮಹಾಗುರುವೇ ಚಿದಾನಂದ
ಗುರುವೇ ಕೊಡಿರಿ ಮತಿ ನಮಗೆ ಪ

ಅದ್ದಿ ಪಾಪದೊಳು ಸಮೃದ್ಧಿ ನನ್ನದೆಂಬ ಹಮ್ಮು
ಹೊದ್ದಿ ತುಂಬಿಹುದು ನನಗೆ ದು–
ರ್ಬುದ್ಧಿ ನಮಗೆ ಕೊಡಿರಿ ನೀವು
ಸದ್ಬುದ್ಧಿ ಮಹಾಗುರುವೇ ೧

ಅಂತೇ ಸಂಸಾರವು ಸತ್ಯಂತೆ ಇದನು ನಂಬುವನು
ಕತ್ಯಂತೆ ಮಾಡುವುದೆಲ್ಲ ಭ್ರಾಂತಂತೆ ನಮಗೆ ಕೊಡಿರಿ ಗುರು
ಚಿಂತೆ ಮಹಾಗುರುವೆ ೨

ಮಾನ ಉಳಿವುದಿಲ್ಲ ನಿದಾನಾ ಸಂಸಾರವೆ ಬಲು
ಹೀನ ತೊಳಲಿದೆ ನಾನು ಜನ್ಮನಾನಾ ನಮಗೆ ಕೊಡಿರಿ ಸು–
ಜ್ಞಾನ ಮಹಾಗುರುವೇ ೩

ಶಕ್ತಿ ಆದರೆಯು ವಿರಕ್ತಿ ಬ್ರಹ್ಮದಲಿ ಆ–
ಸಕ್ತಿ ಕೊಡುವುದದು ಬಲುಭಕ್ತಿ ನಮಗೆ ಕೊಡಿರಿ ನೀವು
ಮುಕ್ತಿ ಮಹಾಗುರುವೇ ೪

ಹಾರಿ ಭವದಾರಣ್ಯ ಕುಠಾರಿ ತೋರಿಸುವ ನಿಜ
ದಾರಿ ಸಚ್ಚಿದಾನಂದ ತೋರಿ ನಮಗೆ ಹಿಡಿದು ಕೊ–
ಡಿರಿ ಮಹಾಗುರುವೆ ೫

## ೭೩

ಜಯದೇವ ಜಯದೇವ ಜಯ ಚಿದಾನಂದ
ಜಯ ಜಯತು ಜಯ ಜಯತು ಜಯ ನಿತ್ಯಾನಂದ ಪ

ದೃಶ್ಯಾ ದೃಶ್ಯವಿದೂರ ದೂರ ಪರತತ್ವಾ
ಮಿಕ್ಕು ಮೀರಿಹ ತೇಜ ತೇಜ ಮಹತ್ವಾ
ಪೊಕ್ಕು ನೋಡಿಯೆ ಕಂಡು ನಿನ್ನ ನಿಜತ್ವ
ನಕ್ಕು ನಿಜದಲಿ ಮಾಳ್ಪೆ ಪಂಚೋಪಚಾರತ್ವ ೧

ತಾನೆ ತಾನಾದ ಸುವಸ್ತು ನಿರ್ಲೇಪ
ಧ್ಯಾನ ಮೌನ ಸಮಾಧಿಗೆ ತೋರ್ವರೂಪ
ಏನ ಬಣ್ಣಿಸುವೆನು ಈ ಜಗವ್ಯಾಪಾ
ನಾನರ್ಪಿಸುವೆ ನಿನಗೆ ಗಂಧಾನುಲೇಪ ೨

ನಿರ್ಗುಣಾಷ್ಟಾಂಗ ಯೋಗಗಳ ಸಾಗಿಸುವೆ
ಧರ್ಮದ ದುರಿತ ಕುಠಾರ ನೀನೆನಿಪೆ
ಭರ್ಗಾ ಶ್ರೀವತ್ಸ ವೀಥಿಗಳ ರಕ್ಷಿಸುವೆ
ಸರ್ಗಾದಿ ಮಹಾಪುಷ್ಪ ನಿನಗೆ ನಾನರ್ಪಿಸುವೆ ೩

ವಾಸನಕ್ಷಯದ ನಿರ್ವಾಸನ ಸ್ಫೂರ್ತಿ
ಭಾಸಮಾನದಿ ತೋರುತಿದೆ ನಿನ್ನ ವಾರ್ತೆ
ಈಶ ತಾಪಸರುಗಳು ನಿನ್ನ ಮೂರ್ತಿ
ದೇಶಿ ಕೋತ್ತಮ ನಿನಗರ್ಪಿಸುವೆ ಧೂಪಾರತಿ ೪

ವಿಶ್ವಾತ್ಮ ವಿಶ್ವ ವಿಶ್ವಾಧೀಶನಾಥ
ವಿಶ್ವ ನಾಟಕ ವಿಶ್ವ ಸೂತ್ರ ವಿಖ್ಯಾತ
ವಿಶ್ವ ಪೂರಿತ ತಂತ್ರ ವಿಶ್ವಾತೀತ
ವಿಶ್ವ ಜ್ಯೋತಿಯನರ್ಪಿಸುವೆ ಗುರುನಾಥ ೫

ನಿತ್ಯ ಸಂತುಷ್ಟ ಶಿರೋಭಾಗ
ಅತ್ಯಂತ ಆನಂದವಹ ಸದಾಭೋಗ
ಪ್ರತ್ಯಗಾತುಮತರ ಪುಷ್ಪಪರಾಗ
ಅರ್ಥಿಯಲಿ ಅರ್ಪಿಸುವೆ ನೈವೇದ್ಯ ನಾನೀಗ ೬

ಇಂತುಪಚಾರಪಂಚದ ಪೂಜೆಯನೀಗ
ಅಂತರಂಗದಿ ಚಿದಾನಂದನಿಗೆ ಈಗ
ಸಂತಸದಿಂದ ನಾ ಮಾಡುತಲಾಗ
ಎಂತು ಎನಲಿ ತಾನೇ ತಾನಾದ ಯೋಗ ೭

## ೭೪

ಜಾಗುರೇ ಯೋಗೀಶೇ ಭಲರೇ
ಜಾಗುರೇ ಯೋಗೀಶೇ
ಜಾಗುರೇ ಯೋಗೀ ಚತುರ್ಗುಣ ಪೋಗಿ
ರಾಗವ ನೀಗಿ ತಾನೆ ತಾನಾಗಿ ಪ

ಆಶಾವರ್ಜಿತೇ ಬಹಳಾಯಾಸ ನಿರ್ಜಿತೇ
ವಾಸನನಾದಂ ಮಹಮತ್ತಾದಂ
ಭಾಸುರತಾದಂ ಭವನೀಜಾದಂ ೧

ಕರ್ಮ ವಿದಾರಿತೇ ಬಹಳ ವರ್ಮನಿಸ್ಸಾರಿತೇ
ನಿರ್ಮಳಾತ್ಮಂ ನಿಷ್ಕಳಾತ್ಮಂ ಸ್ವಪೂರ್ಣಾತ್ಮಂ
ಸಮತೇಜಾತ್ಮಂ ೨

ವಾದಾ ದೂರಿತೇ ಬಹಳ ವಿ
ವಾದೋತ್ತಾರಿತೇ ಸದಾನಂದಂ ಸಹಜಾನಂದಂ
ಚಿದಾನಂದ ಗುರು ತಾನಾದಂ ೩

## ೭೫

ದೊರಕಿಸಬಹುದು ತಂದೆ ತಾಯಿಗಳ ಜನ್ಮ ಜನ್ಮದಲಿ
ದೊರಕಿಸಲಾಗದು ಸದ್ಗುರುನಾಥನ ಆವ ಜನ್ಮದಲಿ ಪ

ತಂದೆ ತಾಯ್ಗಳ ಋಣವ ಜನ್ಮಾಂತರದಲಿ ತೀರಿಸಬಹುದು
ಗುರು ಋಣವು ತೀರುವುದದೆಂತೋ ೧

ತಂದೆತಾಯಿ ಋಣಗಳಿಂದ ಜಾತನಾಗುವೆ
ಮುಂದೆ ಗುರು ಋಣಗಳಿಂದ ಅಜಾತನಾಗುವೆ ೨

ಗುರುವಿನ ಋಣವನು ತೀರಿಸಲಾಗದು
ಗುರು ಚಿದಾನಂದನ ಕೃಪೆಯಿಂ ತೀರುವುದು ೩

## ೭೬

ನರನೆನಬಹುದೆ ಸದ್ಗುರು ವರನಾ
ತರುವೆನಬಹುದೆ ಸುರತರುವನ್ನ ಪ

ಆಸನವನೆಹಾಕಿ ಕುಳ್ಳಿರಿಸಿದವನ
ನಾಸಿಕ ಕೊನೆದೃಷ್ಟಿ ಇರಿಸಿದವನ
ಬೀಸುವ ವಾಯುವ ಕುಂಭೀಸೀದವನ
ಸೂಸುವ ಮುತ್ತಿನ ಮಳೆ ಸುರಿಸಿದವನ ೧

ಆರು ಮಂಟಪ ನೆಲೆ ಅಡರಿಸಿದವನ
ಭೇರಿ ಘಂಟವು ಶಂಖವು ಭೋರಿಡಿಸಿದವನ
ಬೀರುವ ದ್ವಿದಳ ಸದರಕಾಶಿಸಿದವನ
ನೂರು ಕೋಟಿಯ ರವಿ ಬೆಳಕ ಚೆಲ್ಲಿದವನ ೨

ಸಾವಿರ ದಳದ ಮನೆಯ ಜೈಸಿದವನ
ಈವ ಬ್ರಹ್ಮರಂಧ್ರ ಸುಖವುಣಿಸಿದವನ
ಕೇವಲ ಶಿಂಶುಮಾರಕೆ ಸೇರಿದವನ
ದೇವ ಚಿದಾನಂದನ ಮಾಡಿದವನ ೩

## ೭೭

ನಾನಿನ್ನೇನ ಪೇಳಲಿ ಗುರುರಾಯ
ನೋಡ ನೋಡುತ ಆಡ ಆಡುತ ಕಳೆದೆಲ್ಲೋ ಮಾಯಾ ಪ

ನರದೇಹ ಎಂಬುದು ಎಂಥಾ ಮರವು
ನೀನೇ ಬ್ರಹ್ಮಾಂತ ತೋರಿದಿ ಅರಿವು ೧

ತತ್ತ್ವಮಸಿ ಮಹಾವಾಕ್ಯ ಕೇಳಿ ಹಾರಿ ಹೋ
ಯಿತು ದ್ವೈತದ ಧೂಳಿ ೨

ಮುತ್ತು ಮಾಣಿಕ ಪೆಸರಾಯಿತು ಲೋಪ
ತುಂಬಿ ಉಳಿಯಿತು ಚಿದಾನಂದ ಸ್ವರೂಪ ೩

## ೭೮

ನೀನೇ ದಯಾಳು ದೊರೆ ಸದ್ಗುರುನಾಥ
ನೀನೇ ದಯಾಳು ದೊರೆ ಪ

ಸತಿಸುತ ಮಿತ್ರರ ನೀನೇ ಮರೆಸಿದೆ
ಮತಿಯನೆ ತುಂಬಿದೆ ಸದ್ಗುರುನಾಥ ೧

ನನ್ನನು ವೈದೆ ನಿನ್ನನು ಮಾಡಿದೆ
ನನ್ನತನವ ಕಳೆದೆ ಸದ್ಗುರುನಾಥ ೨

ನಾಚಿದುದು ಭವ ನಿನ್ನನು ಸ್ಮರಿಸೆ
ನೀ ಚಿದಾನಂದರಸೇ ಸದ್ಗುರುನಾಥ ೩

## ೭೯

ಧ್ಯಾನವಿರಲಿ ಗುರುವೆ ನಿನ್ನಯ
ಧ್ಯಾನವಿರಲಿ ಗುರುವೆ
ನಿನ್ನ ನಿತ್ಯಾ ಕಾಲದಿ ಪದ
ಧ್ಯಾನದೊಳಗೋಲಾಡುವಂತೆ ಗುರು ಚಿದಾನಂದ ಎಂಬ ಪ

ಗಿರಿಯೊಳಿರಲಿ ಧರೆಯೊಳಿರಲಿ
ಗಿರಿಯ ಗುಹೆಯ ಗೃಹದೊಳಿರಲಿ
ಪುರದೊಳಿರಲರಣ್ಯಗಳೊಳು
ಚರಿಸುತಿರಲಿ ಮರೆಯದೇ ೧

ಮರದೊಳಿರಲಿ ಮುಳ್ಳೊಳಿರಲಿ
ಕೆರೆಯ ತೀರ್ಥ ಕ್ಷೇತ್ರದೊಳಿರಲಿ
ಹರವು ಹಳ್ಳ ಕೊಳ್ಳಗಳೊಳು
ಹರಿವುತಿರಲಿ ಮರೆಯದೆ ೨

ಹಸಿವೆಯಿರಲಿ ತೃಷೆಯೊಳಿರಲಿ
ಬಿಸಿಲು ಮಳೆ ಛಳಿಗಳೊಳಿರಲಿ
ವಿಷಯ ವ್ಯಾಧಿ ಕಂಟಕಗಳೊ
ಳ್ವಿಷಮವಿರಲಿ ಮರೆಯದೇ ೩

ನಡೆವುತಿರಲಿ ಎಡವುತಿರಲಿ
ನಡೆಯಲಾರದೆ ಕೆಡೆಯುತಿರಲಿ
ಕಡುವಿರೋಧದಿಂ ಕುವಾದ
ತಡೆಯುತಿರಲಿ ಮರೆಯದೆ ೪

ಹೆಂಡೆಲಿಡಲಿ ಹೆಂಟೆಲಿಡಲಿ
ಕಂಡ ಕಂಡದರಲಿಡಲಿ
ಭಂಡ ಮನುಜರವರು ಏನು
ಮಾಡುತಿರಲಿ ಮರೆಯದೇ ೫

ನಿನ್ನ ಧ್ಯಾನ ಷಟ್ಸಮಾಧಿ
ನಿನ್ನ ಧ್ಯಾನ ಮುಕ್ತಿ ನಿಲಯ
ನಿನ್ನ ಧ್ಯಾನಕಧಿಕವಿಲ್ಲ ನಿನ್ನ
ಧ್ಯಾನವೆನಗೆ ನಿತ್ಯವಿರಲಿ ಮರೆಯದೆ ೬

ಧಾನ ವಿದ್ದಡಿರದಡೇನು
ನಿನ್ನ ಪಾದ ಕಂಡ ಬಳಿಕ
ಧ್ಯಾನದಿಂದ ಸಾಧ
ನೇನು ಗುರು ಚಿದಾನಂದ ಯೋಗಿ ೭

## ೮೦

ಪದವಿಯಂಬುದದಿಹುದೆ ಪರಮ ಗುರುಪದಕಿಂತ
ಪದವಿಯಂಬುದು ಗುರುಪದದೊಳಗಡಗಿಹುದು ಪ

ನಿತ್ಯವೂ ಗುರುಪದವ ನೆನೆವುದೇ ನಿತ್ಯ ಪದವಿ
ಮತ್ತೆ ಶರಣೆಂಬುದೇ ವೈಕುಂಠ ಪದವಿ
ಅತ್ಯಂತ ಭಕ್ತಿಯಾಭಾವಾನಂದ ಪದವಿ ೧

ಬಂಧುರ ಸುವಾಕ್ಯಗಳ ಬಣ್ಣಿಪುದೆ ಬ್ರಹ್ಮಪದವಿ
ಇಂದು ಧನ್ಯನುನಾ ಎಂಬುದೀಶ್ವರ ಪದವಿ
ಸಂದುಸುಖಿಸುತ್ತಿಹುದೆ ಸದಾಶಿವ ಪದವಿ ೨

ಬೆರಗಿ ನಿಂದಿರುತಿಹುದೆ ಭೇದ ವಿಚ್ಛೇದ ಪದವಿ
ಮರೆತು ತನುವಿರುತಿಹುದೆ ಮಹಾ ಮೋಕ್ಷ ಪದವಿ
ಮರೆವು ಅರಿವೆರಡಿಲ್ಲದಿಪ್ಪುದೆ ಮಹಾಪದವಿ
ನಿರವಯ ಚಿದಾನಂದನಾದುದೆ ನಿಜಪದವಿ ೩

## ೮೧

ಬ್ರಹ್ಮ ತಾವೆಂದು ಭಾವಿಸಿರೋ ಭಾಗ್ಯರಿರಾ
ಬ್ರಹ್ಮತಾವೆಂದು ಭಾವಿಸಿದವರುಂಟು ಪ

ಕಪಿಲ ನಾರದನು ಗೌತಮನು ಕಣ್ವನು
ನಿಪುಣ ಕೌಶಿಕನು ನಿರ್ಮಲನು ಅಗಸ್ತ್ಯಾ
ಉಪಮಾನ್ಯ ಶಿಖಿ ಪಂಚ ದೂರ್ವಾಸ
ರಂತಿವರು ಬ್ರಹ್ಮ ತಾವೆಂದು ಭಾವಿಸುವರು ೧

ವ್ಯಾಸ ಶ್ರೀವತ್ಸ ಶುಕನು ಶೌನಕನು
ವಾಶಿಷ್ಟ ಅತ್ರಿ ಗಾರ್ಗೇಯನು ಕಶ್ಯಪನು
ದಾಸ ಪ್ರಹ್ಲಾದ ಬಕದಾಲ್ಭ್ಯ ಜಮದಗ್ನಿ
ಭಾಸುರರಿಂತಿವರು ಬ್ರಹ್ಮತಾವೆಂದು ಭಾವಿಸುವರು ೨

ಸನಕ ಸನಂದನ ಸನತ್ಸುಜಾತನು
ಮುನಿಯು ತೃಣಬಿಂದು ಮಾರ್ಕಾಂಡೇಯ ರೋಮಶನು
ಘನ ವಾಮದೇವ ದತ್ತಾತ್ರೇಯ ವಡಬನು
ಚಿನುಮಯರಿವರು ಬ್ರಹ್ಮತಾನೆಂದು ಭಾವಿಪರು ೩

ಭರದ್ವಾಜ ದಧೀಚಿ ಮರೀಚಿ ಕರ್ದಮನು
ಭರತ ಭಾರದ್ವಾಜ ಆಸ್ತಿಕನು ಪೌಲಸ್ತ್ಯ
ಹರಿಹರ ಬ್ರಹ್ಮ ತ್ರೈಮೂರ್ತಿ ಸಹಿತರಿವರು
ನಿರುತದಿಂ ನಿತ್ಯ ತಾವೆಂದು ಭಾವಿಸುವರು ೪

ಬ್ರಹ್ಮ ತಾವೆನಲು ಭವ ಮೂಲ ಹರಿವುದು
ಬ್ರಹ್ಮ ಬೇರೆನಲು ಬಹುಜನ್ಮವೇ ಬಹುದು
ಬ್ರಹ್ಮತಾವೆಂದು ಭಾವಿಸಿ ನೀವು ನಿತ್ಯ
ಬ್ರಹ್ಮ ಚಿದಾನಂದ ತಾವಾಗುವಿರಿ ಸತ್ಯ ೫

## ೮೨

ಭಜರೇ ಚಿದಾನಂದ ಮೇ ಮನಸಾ
ಭಜರೇ ಚಿದಾನಂದಂ ಭವ್ಯ ಚರಿತ ಸಾ
ಮಜ ವಸ್ತ್ರಾಂಗಂ ಸುಮನೋತ್ತುಗಂ ಪ

ಪಾಲ ಶರಣ ಪಾಲಿತಂ
ಫಾಲಾಕ್ಷ ವಿಶಾಲ ವಿಷಯ ಶೋಷಿತಂ
ನೀಲ ಕಂಧರ ನಿರಾಶ ನಿಗಮ ಶಿರ
ಲೋಲ ಸದಾನಂದಿತಂ ಮೇ ಮನಸಾ ೧

ಈಶ ತಾಪ ಭೀಷಣಂ ಈಶ್ವರ
ವಿಶ್ವೇಶನಾದ ಘೋಷಣಂ
ಭಾಸುರ ಕೋಟಿ ಸೇವಿತ ಸಂಕಾಶ ಮ
ಹೇಶ ಸದಾನಂದಿತಂ ಮೇ ಮನಸಾ ೨

ಪರಮ ಪರಾಪುರುಷಂ ಪಾರ್ವತಿ ಮನೋ
ಹರ ಹರಿ ವಿಶ್ವಾರ್ಚಿತಂ

ವರ ಚಿದಾನಂದ ಗುರುವೇ ಸಾಕ್ಷಾತಂ
ಸ್ಮರಣ ಮನೋನಿಶ್ಚಿತಂ ಮೇ ಮನಸಾ ೩

## ೮೩

ಮುಕ್ತನಾದೆನೋ ನಿನ್ನ ಮರೆತು ನೆನೆಯಲಿ ಮುನ್ನ
ಮುಕ್ತನಾಗುವುದೇನು ಗುರುನೀ ಮುಟ್ಟಿಲಿಕೆಂದು ಪ

ಪಾಶವೆಂಟು ಹರಿದು ಪರಿದು ತ್ರಿಗುಣಂಗಳ
ಕ್ಲೇಶ ಪಂಚಕವು ಕೆಡೆದುಪೋದುವು
ಆಸೆ ಮೂರೆಂಬುವು ಆಕ್ಷಣ ಉರಿದವು
ಘಾಸಿಯಾದವು ಸಪ್ತವ್ಯಸನ ಗಳಿಗೆಯೊಳು ೧

ನಾಲ್ಕು ಕರಣಂಗಳು ನಾಸ್ತಿಕವಾದುವು
ಬೇಕೆಂಬ ತ್ರಯತಾಪ ಬೆಳೆನಿಂತವು
ಪೋಕರಾದವು ಷಡುವರ್ಗ ಷಡಪುಗೆಟ್ಟು
ಹೋಕೆ ಮರೆತವು ದುರ್ಭಾವ ಹೊಲಬುದಪ್ಪಿ ೨

ಕನಕ ಪರುಷ ಮುಟ್ಟೆ ಕನಕ ಪರುಷವಾಗದು
ಘನಗುರುವಿನ ಮುಟ್ಟೆ ಗುರುವಹನು
ಚಿನುಮಯ ಚಿದಾನಂದ ಚಿದ್ರೂಪನಾದವರಿಗೆ
ಜನನ ಮರಣಗಳೆಂಬ ಜನಿತವೆಲ್ಲಿಹುದಯ್ಯ ೩

## ೮೪

ಯೋಗಿಯ ನೋಡಿರೋ ಸದ್ಗುರು ಯೋಗಿಯ ನೋಡಿರೋ
ಯೋಗಿ ಚಿದಾನಂದಾವಧೂತ ಗುರುದೊರೆಯ ಸದ್ಗುಣ ಚರಿತನ ಪ

ಆಶಾಪಾಶಗಳೆಂಬುವನೆಲ್ಲವ ಜರಿದು ವಾಸನೆ ತರಿದು
ದೋಷದುರ್ಗ ಜನನಾದಿಗಳನು ಬಳಿದು ಸಂಶಯ ತುಳಿದು
ಕ್ಲೇಶ ಪಂಚಕ ಕಾಮಕ್ರೋಧವ ಕಡಿದು ಮುಂದಕೆ ನಡೆದು
ಭಾಸುರ ತೇಜದಿ ತೋರುವ ಪ್ರಭೆಯನುಕೂಡುವ ತಲೆಯೊಲಿದಾಡುವ ೧

ಬಲಿದಾಧಾರವ ಕುಂಭಕದಿಂದಲಿ ಬಲಿಸಿ ವಾಯುವ ನಿಲಿಸಿ
ನೆಲೆಯನೆ ಹತ್ತಿ ಆ ನೆಲೆಯನೆ ನಿಲುಕುತ ಮತ್ತಾ
ನೆಲೆಯ ಹೊಲಬಲಿ ತೋರುವ ಭಾಸ್ಕರ ಕೋಟಿಯ ಮೀರಿ
ಕಳೆಗಳ ತೋರಿ ಥಳಥಳ ಥಳಿಸಿಯೆ ಮೆರೆವಾ ಆತ್ಮನ ನೋಡುವ ಸಂತಸಪಡುವ ೨

ಆರು ಚಕ್ರಗಳಲಿ ತೋರುವ ದಳಗಳನರಿದು ಅದರೊಳು ಬೆರೆತು
ಭೋರಿಡುತಿಹ ದಶನಾದದ ಬೊಬ್ಬೆಯ ಕೇಳಿ ಹರುಷವ ತಾಳಿ ಚಾ
ತುರದಿ ಮೆರೆಯುತಲಿಹ ಜ್ಯೋತಿಯ ಸಾರ ಸೇವಿಪ ಶೂರ
ಧಿರ ಚಿದಾನಂದಾವಧೂತಾತ್ಮ ಗುರುವಾ ಎನ್ನನು ಪೊರೆವಾ ೩

## ೮೫

ರಕ್ಷಿ ರಕ್ಷಿ ರಕ್ಷಿಸಯ್ಯ ಚಿದಾನಂದ ಸ್ವಾಮಿ
ರಕ್ಷ ಶಿಕ್ಷ ಕರ್ತನಾದ ದಯದಿಂದ ಪ

ದಾಸ ನಿಜವಲ್ಲವೆನೆ ಸಾಕ್ಷಿ ಬೇಕೆ ನಿನ್ನ
ದಾಸರ ದಾಸನಾಗಲಿಕೆ
ಏಸುಕಾಲ ಪರೀಕ್ಷೆ ನಿನ್ನ ನೋಡಲಿಕೆ ಎನ್ನ
ಲೇಸು ಹೊಲಬು ನಿನ್ನನು ಬಿಡದು ಜೋಕೆ ೧

ನಿನ್ನ ನೋಡೆ ನಾನು ಬೇರೆಯಲ್ಲವಯ್ಯ
ಇದು ಮಾಡಿ ಬಂದ ಸುಕೃತವೇಯೆಲ್ಲ
ನಿನ್ನವನ ನೀನೆ ಕೈವಿಡಿದೆಲ್ಲ ಕೇಳು
ನಿನ್ನೊಳಗೆನ್ನೊಳಗೆ ಭೇದವೇನೂ ಇಲ್ಲ ೨

ಖೂನ ವಿಲ್ಲದ ಖೂನದಿಂದ ನಿನ್ನ ಕಂಡೆ ನಾ
ಖೂನವಿದ್ದೂ ವಿಲ್ಲದಂತೆ ಬಲಗೊಂಡೆ
ಧ್ಯಾನ ಮೌನವೆಲ್ಲವ ನಾ ಕಳಕೊಂಡೆ
ಧ್ಯಾನವೆಂತು ನಿನ್ನನೆ ಭಜನೆಗೊಂಡೆ ೩

ನಿನ್ನ ಪಾದವ ನಂಬಿಯೆ ಸಂತೋಷನಾದೆ ನಾ
ನಿನ್ನ ಪಾಡಿ ಪೊಗಳಿ ವಿಶೇಷನಾದೆ
ನಿನ್ನ ಲೀಲೆ ನೆನೆದು ನಾನೀಶನಾದೆ
ನಿನ್ನ ನೋಡಿಯೆ ಕಂಡು ಜಗದೀಶನಾದೆ ೪

ಕೋಟಿ ಶತಶಶಿ ಪ್ರಭೆಯ ತಾಳ್ದ ಅಂದವನ್ನು
ಪಾಟಿಸಿ ಪೊಗಳಬಲ್ಲೆನೆ ಮುಂದಾ
ನೀಟೆನಿಪ ದೇವಗುರು ಚಿದಾನಂದ ನಿನ್ನ
ನೀಟಿನಂತೆ ನಿಲ್ಲಿಸು ಕರುಣದಿಂದ ೫

## ೮೬

ರೂಪ ತೋರೆನಗೆ ಗುರುವೆ ರೂಪ ತೋರೆನಗೆ
ರೂಪನಾಮಕೆ ವಿರಹಿತನಾದ ದೇವನೆ ರೂಪ ತೋರೆನಗೆ ಪ

ಬ್ರಹ್ಮಾಂಡ ತಂಡಗಳೊಳು ಹೊರಗಾವರಸಿಕೊಂಡು
ಬ್ರಹ್ಮಾಂಡ ಖಂಡಗಳ ಬೆಳಗುವೆ ವಿರೂಪವೆಡೆಗೊಂಡು ೧

ನಿನ್ನ ತೇಜಸ್ಸಿನಿಂದ ತೋರ್ಪುದು ತೋರ್ಪ ಜಗವೆಲ್ಲ
ನಿನ್ನನುಳಿದೇ ಬೇರೆ ತೋರೆನಲವಕಾಶವ ಇಲ್ಲ ೨

ನಾದ ಬಿಂದುಕಳೆ ನೀನೆಂಬೆನೆ ದೃಶ್ಯವು ಇವು ಎಲ್ಲ
ನಾದ ಬಿಂದುಕಳೆ ಸಾಧಕಗಳು ವಸ್ತು ನಿಜವಲ್ಲ ೩

ಬೋಧಾನಂದ ತುರೀಯಗಳೆಂಬೆನೆ ಆ ಅವಸ್ಥೆಗಳೆಲ್ಲ
ಬೋಧಾನಂದ ತುರೀಯದಿ ನೋಡಲು ಎದುರಿದ್ದವು ಎಲ್ಲ ೪

ನಿರ್ವಿಕಾರ ನಿರ್ಗುಣ ನಿರವಯ ನಿರಂಜನ
ಸ್ಫೂರ್ತಿ ಪರಮಗುರು ಪರಬ್ರಹ್ಮ ಚಿದಾನಂದ ಮೂರ್ತಿ ೫

## ೮೭

ಲಹರಿಕೊಂಡಿತು ಜ್ಞಾನ ಲಹರಿಕೊಂಡಿತು
ಮಿಹಿರ ಕೋಟಿ ಚಿದಾನಂದ ಮಿಹಿರಲೋಕ ಸೇರಲಾಗಿ ಪ

ನಿತ್ಯ ಗುರುವ ಧ್ಯಾನ ಮಾಡೆ ನಿಗಮಧರೆಗೆ ಕೈಗೆ ಕೂಡೆ
ನಿತ್ಯ ಆನಂದ ತುಳುಕಾಡುವ ನಿಜಬೋಧವೆಡೆಯಾಡೆ ೧

ಪ್ರಣವ ನಾದಗೀತೆ ಪಾಡೆ ಪಾಡುಪಂಥ ಸರಿದು ಆಡೆ
ಎಣಿಸಿ ಬಾರದ ದುಃಖ ಕೇಡೆ ಏಕವೆಂಬು ಘಟ್ಟಿಮಾಡೆ ೨

ಚಿದಾನಂದ ಗುರುವ ನೋಡೆ ಚಿತ್ತ ಮುಳುಗಿ ಮುಳುಗಿ ಆಡೆ
ಪದಸರೋಜವನ್ನು ಕೂಡೆ ಪರಿಣಾಮವ ದೋವಿಯಾಡೆ ೩

## ೮೮

ಶರಣು ಆತ್ಮಕ ಸರ್ವತೋಮುಖ ಶರಣು ಸರ್ವಲೀಲಾತ್ಮಕ
ಶರಣು ಗುರು ಚಿದಾನಂದ ವಿಗ್ರಹ ಶರಣು ಸುರಮುನಿ ಪಾಲಕ ಪ

ರೂಪು ಹರ ನಿರ್ಲೇಪ ಘನ ಚಿದ್ರೂಪ ರೂಪ ವಿರೂಪಕ
ತಾಪನಾಶಕ ಪೋಷ ಭಕ್ತಕೃತಪರಾಧಿ ಪವಿತ್ರಕ

ದೀಪ ಹೃದಯ ಸಭಾಸ ಉನ್ಮನ ದೀಪ್ಯಮಾನ ಮಹಾತ್ಮಕ
ಭೂಪ ಸುರಮುನಿ ಸಿದ್ಧರಕ್ಷಕ ಭುವನದಧಿಪತಿ ರಕ್ಷಕ ೧

ಪ್ರಣವ ಪುರುಷ ಪರೇಶಪಾವನ ಪ್ರಣತ ಸುಜನ ಪರಾವರ ಮ
ರಣ ರಹಿತ ನಿಜ ನಿಶ್ಚಲಾತ್ಮಕ ಗುಪ್ತ ಮೂರುತಿ ಗುರುವರ
ಎಣಿಸಬಾರದನಂತ ಲೋಕಕೆ ಏಕನಾಥ ದಿವಾಕರ
ಅಣಿಮ ಮಹಿಮಾಷ್ಟಾಂಗ ಯೋಗಗಳಳವಿಗೊಡದ ಪ್ರಭಾಕರ ೨

ಎರಡು ಮೂರಾರೆಂಬವೆಲ್ಲವ ಎಣಿಸೆ ಏಳೈದೆಂಬವ
ಪರಿವಿಡಿಯ ನಾಲ್ಕೆಂಟು ನವದಶ ಪರಿಪರಿಯ ವಿಕಾರವ
ಹರಿಹರ ಬ್ರಹ್ಮಮರೇಂದ್ರರು ಹರಿವರಿಯದ ಸ್ವಭಾವವ
ಬೆರಸದಿಹ ಚಿದಾನಂದ ಮೂರ್ತಿಯ ಭೇದವಿರಹಿತ ಚಿತ್ಪ್ರಭಾ ೩

## ೮೯

ಶ್ರವಣ ಶ್ರವಣಗಳೆನ್ನಿರಿ ಸರ್ವಕಾಲದಿ ನೀವು
ಶ್ರವಣವಾಗುವತನಕ ಶಿವನು ನೀವಾಗಲೆಂತೋ ಪ

ಗುರುಮೂರ್ತಿಯನು ಕಂಡು ಗುಣವಿಭಾಗಿಸಿದಂತ
ನರಪಶುವು ಕ್ರಿಮಿಕೀಟ ಸರ್ವಗಳಲಿ
ಗುರುವು ಪರಿಪೂರ್ಣ ಗುಣಿಸಲಿಂತಾದನೆಂದು
ಹಿರಿದು ಸಮನಿಸಿ ನೋಡಿ ನಿಶ್ಚೈಸಿದರೆ ಸಾಲದೆ ೧

ಜಾಗೃತದಿ ಸ್ವಪ್ನದಲಿ ಸುಷುಪ್ತಕಾಲದಿ ಕಂಡ
ವರ್ಗವೆಲ್ಲವ ಗುರುವೆ ಎಂದು ತಿಳಿದು
ಭರ್ಗಪೂರಿತನೆಂದು ಭೇದವಿಡದೇ ಮನದಿ ಸ-
ಮಗ್ರ ಸಂತೋಷನಾಗಿರುತಿರಲದೆ ಸಾಲದೆ ೨

ಕ್ರೂರ ಸಂಕಟ ಕಷ್ಟ ನಷ್ಟ ದುಃಖದಲಿ
ಆರು ಹೊದ್ದಿಹರೆಂದು ಇದನು ತಿಳಿದು
ಧೀರ ಚಿದಾನಂದ ಗುರು ದಿವ್ಯ ಮೂರುತಿ ತಾನು–
ದಾರನಾತನ ಚರಣವನು ನೆನೆಯೆ ಸಾಲದೆ ೩

## ೯೦

ಶ್ರೀಗುರು ಎಂಥಾ ದಯವಂತನಿಹ ನೋಡೆ
ಈಗ ಋಣವ ಕಳೆದೆನೆನಲು ಆನಂದವಹುದು ನೋಡೆ ಪ

ಕರೆಯುತ ಸನಿಹಕೆ ಚರಣವ ಶಿರದಲಿಟ್ಟನು ನೋಡೆ
ಹರುಷ ಉಕ್ಕುತ ಎನ್ನ ಮುಖವ ನೋಡಿದ ನೋಡೆ
ಪರಮಾತ್ಮನು ನೀತಿ ಎಂದು ಪರಿ ಪರಿ ಹೇಳಿದ ನೋಡೆ
ಅರೆಮರೆಯೆಲ್ಲವು ನೀ ಬ್ರಹ್ಮನೆಂದು ಆಡಿದ ಕರ್ಣದಿ ನೋಡೆ ೧

ತೋರುವುದೆಲ್ಲವು ನೀನೆ ಎಂದು ತಿಳುಹಿದ ಎನ್ನನು ನೋಡೆ
ದಾರಾಸುತ ಸಹೋದರರೆಂಬರ ದಾರಿಯ ಬಿಡಿಸಿದ ನೋಡೆ
ಮೂರು ಗುಣಗಳ ಮಂದಮತಿಗಳ ಮುಂದುಗೆಡೆಸಿದ ನೋಡೆ
ಕಾರಣಕಾರ್ಯವ ಕಳೆದ ಅವಿದ್ಯದ ಕಷ್ಟವ ಕಳೆದ ನೋಡೆ ೨

ಷಟ್ಚಕ್ರಂಗಳ ದಾಟಿಸಿ ಎನ್ನನು ಶ್ರೇಷ್ಠನ ಮಾಡಿದ ನೋಡೆ
ಅಡರಿಸಿ ಮೇಲಕೆ ಸಹಸ್ರಾರದಿ ಆನಂದಿಸಿದನು ನೋಡೆ
ಕಿಡಿಯುಗುಳುವ ಕೋಟ್ಯಾದಿತ್ಯರ ಬೆಳಕನು ತೋರಿದ ನೋಡೆ
ಮೃಡ ಚಿದಾನಂದ ಸದ್ಗುರು ಬ್ರಹ್ಮದಿ ಮುಕ್ತನು ಮಾಡಿದ ನೋಡೆ ೩

## ೯೧

ಸದ್ಗುರುನಾಥನ ಕರುಣ ದೇಹಕೆ ಬೀಳೆ
ಬದ್ಧ ಜೀವವದೆಂಬುದೆ ಮಾಡಿದನು
ಇದ್ದ ಸ್ವಾಸ್ಥಿಗಳೆಲ್ಲ ಆಶ್ರಯವದಾಯಿತು
ಶುದ್ಧಿ ಮಾಡಲಿಕ್ಕಿಲ್ಲ ಜೀವನನು ಪ

ಗುರುವೆ ನೋಡುವನಾದ
ಗುರುವೆ ಕೇಳುವನಾದ
ಗುರುವೆ ಶೀತೋಷ್ಣ ಅರಿವನಾದ
ಗುರುವೆ ಘ್ರಾಣಿಪನಾದ ಗುರುವೆ ಉಣ್ಣುವನಾದ
ಗುರುವೆ ಮನಸು ಬುದ್ಧಿ ತಾನಾದನು ೧

ನಡೆವವನು ತಾನಾದ ನುಡಿವವನು ತಾನಾದ
ಸಡಗರದ ಸಂಪತ್ತು ತಾನಾದನು
ಕೊಡುವವನು ತಾನಾದ
ಕೊಂಬುವವ ತಾನಾದ
ಕೊನಬುಗಾರಿಕೆಯೆಲ್ಲ ತಾನಾದನು ೨

ತಾನೆ ಸಾಕ್ಷಾತ್ತಾಗಿ ಕೂರುವವ ಮಲಗುವವ
ತಾನೆ ನಗುವವನು ತಾನೆ ಸಂತೋಷಿಯು
ತಾನೆ ಚಿದಾನಂದ ಗುರುನಾಥ ದೇಹದಿಂ
ತಾನೆ ತಾನಾಗಿರಲು ಜೀವ ಮುಳುಗಿದನು ೩

## ೯೨

ಸದ್ಗುರುವಿನ ಚಿಂತೆಯಲಿದ್ದವನೇ ಧನ್ಯ
ಧನ್ಯನಾದವನೆ ಪುಣ್ಯ ಪ

ಸತಿಯು ಕರೆಕರೆಯನು ಮಾಡೆ
ಸುತನಲ್ಲದ ಸ್ಥಳದಲ್ಲಿ ಓಡ್ಯಾಡೆ
ಅತಿ ಶತ್ರುಗಳು ತಾವೆಲ್ಲರೂ ಕೂಡೆ
ಮತಿಯದು ಸೂಚಿಸದಿರಲು ನೋಡೆ ೧

ಮನೆಯಲೆಲ್ಲರು ರೋಗದಿ ಬಿದ್ದಿರೆ
ದಿನದಿನಕೆ ಅಶನಕೆ ದೊರಕದಲಿರೆ
ತನಗೇ ಕೇಡನು ಬೇಡುತಲಿರೆ
ಅನುಕೂಲ ಉದರಕ್ಕಿಲ್ಲದಿರೆ ೨

ಮದುವೆಯ ಧಾವಂತದಲಿರಲು
ಮದಲಿಂಗನು ಈಗಾಗೆನಲು
ಅದರೊಳು ಮನದೆರೆಯು ಹೆಚ್ಚಿರಲು
ಚಿದಾನಂದನ ದಯತಾ ನಿಂತಿರಲು ೩

## ೬೩

ಸಾಧನವೇಕೆ ಸಾಧನವೇಕೆ
ಸದ್ಗುರುನಾಥ ಸನಿಹದಿ ಇರಲಿಕೆ ಪ

ಯಮನಿಯಮಾಸನ ಎಂಬಿವು ಯಾಕೆ
ಕಮಲಾಸನವನು ಬಲಿಯಲದೇಕೆ
ಶ್ರಮದಲಿ ವಾಯುವ ಬಿಗಿಯಲದೇಕೆ
ಭ್ರಮಿತದಿ ಬ್ರಹ್ಮನ ಕಾಣುವುದೇಕೆ ೧

ಮಿತ ಆಹಾರವ ಮಾಡಲದೇಕೆ
ಅತಿ ವೈರಾಗ್ಯವು ದೇಹಕೆ ಯಾಕೆ
ಸತತವು ಕಾಡನು ಸೇರುವುದೇಕೆ
ಮತಿ ತಿಳಿಯದೆ ತಿರುಗಾಡುವುದೇಕೆ ೨

ಶರಧಿಯು ತಾನಿರೆ ಒರತೆಯದೇಕೆ
ತರಣಿಯೆ ತಾನಿರೆ ದೀಪವದೇಕೆ
ಗುರು ಚಿದಾನಂದನಿರೆ ಯೋಗಗಳೇಕೆ
ಗುರುಕೃಪೆ ದೊರೆತರೆ ಭಯ ತಾನೇಕೆ ೩

## ೬೪

ಶಿವನೇ ನೀನೆನ್ನೊ ಮನುಜ
ಶಿವನೇ ನೀನೆನ್ನು ಶಿವನೇ ನೀನೆನ್ನು
ಶಿವನೇ ನೀ ನಿಜ ನಿಜ ಶಿವನಹುದಲ್ಲೋ-
ಎಂಬ ಸಂಶಯ ಬೇಡೋ ಪ

ಜನನ ರಹಿತನೆನ್ನೋ ವಿಶ್ವಾತ್ಮಕನೆನ್ನೋ
ವಿಶ್ವರೂಪನೆನ್ನೋ ವಿಶ್ವಾತೀತ-
ವಿಶ್ವ ಸಾಕ್ಷಿಯೆ ತಾನೆನ್ನೋ ೧

ನಿರ್ವಿಕಲ್ಪನೆನ್ನೋ ನಿರ್ಗುಣನೇ ಎನ್ನೋ
ನಿರ್ವಿಕಾರ ಚಿದಾನಂದನೆ ತಾನೆನ್ನೋ ೨

# ತಾತ್ವಿಕ ಹಿನ್ನೆಲೆಯ ಕೀರ್ತನೆಗಳು

## ೬೫

ಅದಕೋ ವೈರಾಗ್ಯ ಅದಕೋ ವೈರಾಗ್ಯ
ಅದಕೋ ವೈರಾಗ್ಯ ಕೇಳದಕೋ ವೈರಾಗ್ಯ ಪ

ಸತಿಸುತ ಭಾಗ್ಯವ ಸರ್ವವ ತ್ಯಜಿಸಿಯೆ
ಮತಿಬ್ರಹ್ಮವಾದುದೆ ಅದಕೋ ವೈರಾಗ್ಯ ೧

ಅನ್ನೋದಕ ವಸ್ತ್ರ ಅಪೇಕ್ಷೆ ಅಡಗಿಯೆ
ಚಿನ್ಮಾತ್ರನಾದುದೆ ಅದಕೋ ವೈರಾಗ್ಯ ೨

ದೂಷಣಭೂಷಣವೆರಡಕ್ಕೆ ಹೊಂದದೆ
ವಾಸನ ಕ್ಷಯವಿರೆ ಅದಕೋ ವೈರಾಗ್ಯ ೩

ಇಹಪರ ಭೋಗವ ತೊರೆದಿಹ ಭಾವವೆ
ಮಹಾಶಿವನಾದುದೆ ಅದಕೋ ವೈರಾಗ್ಯ ೪

ಇರುಳು ಹಗಲು ಚಿದಾನಂದ ಸದ್ಗುರುವಾಗಿ
ಶರೀರವ ಕಳೆದುದೆ ಅದಕೋ ವೈರಾಗ್ಯ ೫

## ೯೬

ಅಪ್ಪ ಕೇಳೋ ಬೇಡಿಕೊಂಬೆ ನಿನ್ನ ತಿಳಿಯಪ್ಪ
ಒಪ್ಪಿ ಮಾತನ್ನಾಡಿಸಿದರೆ ನೀನೆ ಜಗದಪ್ಪ ಪ

ನಾನದಾರು ಬಂದೆನೆಲ್ಲಿಗೆ ಎನ್ನುತ ನೀನಪ್ಪ
ನಾನು ಹೋಗುವೆ ಎಲ್ಲಿಗೆ ಎಂದು ಚಿಂತಿಸು ನೀನಪ್ಪ
ನೀನು ಸುಳಿಗಾಳಿಯ ಶಾವದ ತೆರದಂದದಿ ಇಹೆಯಪ್ಪ
ನಾನಾ ಭವವಾಚರಿಸುತಿಹೆ ಆದಿ ಅಂತ್ಯವಿಲ್ಲಪ್ಪ
ತನುವ ನೆಚ್ಚಬೇಡ ಮೊದಲಿನ ತನುವದೇನಾಯಿತಪ್ಪ
ತನಯ ಸತಿಯರನೆಲ್ಲ ಬಿಟ್ಟುಬಂದೆ ನೀನು
ಮನೆ ಕಟ್ಟುವೆ ನೀನು ಮೊದಲಿನ ಮನೆ ಏನಾಯಿತಪ್ಪಾ
ನಿನಗೆ ಕುಲವು ಎಷ್ಟಾದವು ಎಣಿಸಿಕೊಳ್ಳಪ್ಪ ೧

ಹಿಂದೆ ಮುಂದೆ ಕಾಣದಂತೆ ತಿರುಗಿ ತಿರುಗಿ ಅಪ್ಪ
ಬೆಂದು ಬೆಂದು ಓಡಾಡುತಿಹೆ ಸ್ವರ್ಗ ನರಕಕಪ್ಪ

ಎಂದೆಂದಿಗೂ ಅರಿವಾಗದ ಮರೆವು ಮುಚ್ಚಿ ಅಪ್ಪ
ಅಂಧಕಾರ ಸಂಸಾರದಿ ಕಳವಳಿಸುತ ಅಪ್ಪ ೩

ಕಣ್ಣುಯಿದ್ದು ಕಣ್ಣಿಗೀಗ ಬೀಳಬೇಡವಪ್ಪ
ನಿನ್ನ ನರಿವುದಕ್ಕೆ ಮನುಜ ಜನ್ಮ ಸಾಧನವಪ್ಪ
ಹೊನ್ನು ಹೆಣ್ಣು ಮಣ್ಣು ಎನಗೆ ಬೇಡ ಬೇಡಪ್ಪ
ಎನ್ನ ಬೋಧೆ ಕೇಳದಿರಲು ಕೆಟ್ಟುಹೋದೆಯಪ್ಪ ೪

ವಾಸನದಿಂದ ತಿರುಗುವೆ ರಾಟಾಳರಂತಪ್ಪ
ದೇಶಿಕ ಸದ್ಗುರು ಹೊಂದು ದೇವನಹೆಯಪ್ಪ
ನಾಶವಹವು ನಾನಾ ಗುಣಗಳು ಜೀವನ ತನುವು ಅಪ್ಪ
ಈಶ ಚಿದಾನಂದನಹೆ ಜನ್ಮವಳಿದು ಅಪ್ಪ ೫

## ೯೭

ಅರಿತುಕೊಳ್ಳಿರೋ ನಿಮ್ಮ ಆತ್ಮವಸ್ತುವನು
ಪರಮ ಗುರು ಕರುಣದಿ ನೀವು ನಿಮ್ಮನು ಪ

ಬಿದಿಗೆ ಚಂದ್ರನು ಆವುದೆಂದು ಕೇಳಲಿಕೆ
ಅದಕೋ ಶಾಖಾಗ್ರ ಎಂದೆನಲು ಅರಿದಂತೆ
ವಿಧಿಸಿ ಗುರುಮುಖದಿ ವಿವರಿಸಿ ಕಂಡು ಅರಿದು
ಸದಯಲಾನಂದ ತಾವೆಂದು ಭಾವಿಪುದು ೧

ಊರು ಆವುದು ಎಂದು ಕೇಳುತಿರಲಿಕೆ
ಊರದಕೋ ಗುಡ್ಡದ ಮೇಲೆನಲು ಅರಿದಂತೆ
ಧೀರ ಗುರು ಮುಖದಿ ದಿಟ್ಟಿಸಿ ಕಂಡು ಅರಿತು
ಸಾರ ಸಂಪತ್ತು ತಾವೆಂದು ಧ್ಯಾನಿಪುದು ೨

ಅರಸು ಅವನು ಎಂದು ಕೇಳುತಿರಲಿಕೆ
ಅರಸ ಅಲ್ಲಿಹನೆಂದು ನಡೆವವನೆ ಅರಿತಂತೆ
ಪರಮ ಗುರು ದಯದಿ ಪಾಟಿಸಿ ಕಂಡು ಅರಿದು
ಪರಮ ಗುರು ಚಿದಾನಂದ ತಾವೆಂದು ಭಾವಿಪುದು ೩

## ೯೮

ಅಳತದೆ ಕೂಸು ಅಳತದೆ
ಈ ಭವ ಭಯದೊಳು ಬಿದ್ದು ಬರಲಾರೆನೆಂದು ಪ

ಅಂಬೆಗಾಲೂರುತ್ತ ಕುಂಬಿಣಿ ತಿರುಗುತ
ಡೊಂಬನಂಥ ಹೊಟ್ಟೆ ಎಳೆಯಲಾರೆನೆಂದು ೧

ಕಂದನಾಗಿ ಬಂದು ಹಿಂದು ಮುಂದರಿಯದೆ
ಇಂದುಧರನ ರೂಪ ಕಣ್ಣೊಳಗಿಟ್ಟುಕೊಂಡು ೨

ಜನನ ಮರಣ ಹುಟ್ಟು ಮುರಿದು ಮೂಲ್ಯಾಗಿಟ್ಟು
ಚಿದಾನಂದ ಸ್ವಾಮಿನ್ನ ಕೂಡಿಕೊಂಡೆನೆಂದು ೩

## ೯೯

ಆತ್ಮನ ಕೊಂಬುವರಾರು ಅವರಿಗೆ ಸರಿಯಾರು
ಆತ್ಮನು ಅವನೆ ಗುರುವು ಅವನೆ ಅವನೆ ಈಶ್ವರ ಕೇಳಿ ಪ

ಘಟದ ದೀವಿಗೆಯಂತೆ ಪಟದ ಚಿತ್ರದಂತೆ
ಅಡವಿಯ ಅಗ್ನಿಯಂತೆ ನಿಜವನೆತ್ತಿ ತೋರಿದಂತೆ ೧

ಪಡೆದ ದೇವತೆಯಂತೆ ಮರುಳನರಿವಿನಂತೆ ಉರಗನ
ಹೆಡೆಯು ಗಿರಿಯ ಧೂಮದ ತೆರದಿ ಕಾಣಿಸಿದಂತೆ ೨

ಮರೆಯ ವೇಷದಂತೆ ಭರಣಿಯ ರಸದಂತೆ
ಅರಿವೆಯ ರತುನ ಧರಣಿ ಸ್ವರ್ಗವು ಸ್ಥಿರದಿ ಕಾಣಿಸಿದಂತೆ ೩

ಕೂಳದ ತಾವರೆಯಂತೆ ಘನ ಮರೆಯ ರವಿಯಂತೆ
ಜಲದ ಬಡಬಾನಲಗಿನ ಪ್ರಭೆಯು ಬೆಳಗಿ ತೋರಿಸಿದಂತೆ ೪

ಈ ಪರಿ ಆತ್ಮನ ನಿಜವತಾ ಪರದೈವವೆಂದರಿವ
ಭೂಪ ಚಿದಾನಂದ ರೂಪನೇ ತಾನಾಗಿ ವ್ಯಾಪಿಸಿಕೊಂಡಿಹ ಜಗದ ೫

## ೧೦೦

ಆತ್ಮನೊಬ್ಬನೆ ದೇವಾತ್ಮನೆಂಬುದು ಉಪಾಧಿ ಬೇಡ
ಆತ್ಮನೆಂಬುದೇ ಕಾಂಬುದು ನಿಮ್ಮ ಮಹಾತ್ಮರಾದವರು ಪ

ಕುಂಭಗಳು ಇರುತಲಿರೆ ಅಂಬರದ ಚಂದ್ರನು
ಕುಂಭಗಳೊಳಗೆ ಹಲವಾಗಿ ಬಿಂಬಿಸುವ ತೆರದಿ
ಅಂಬುಜಾಸನ ಮೊದಲು ಜೀವ ಕಂಬದೊಳು
ದೃಷ್ಟಿಯಿಟ್ಟು ಇಂಬಾಗಿ ಇರುವನೊಬ್ಬ ಚೇತನಾತ್ಮಕನು ೧

ಕನ್ನಡಿ ಪಳುಕಿನ ಗೃಹದಿ ಸನ್ನಿಧಿಯಲೊಂದು ದೀಪವಿಡೆ
ಕನ್ನಡಿಯೊಳಗೆ ದೀಪ ಹಲವಾದ ತೆರದಿ
ಉನ್ನತ ಜೀವರಾಶಿಯ ತನ್ನ ಛಾಯೆ ಹೊಳೆ ಹೊಳೆದು
ತನ್ನ ತಾನೇ ಇರುವನೊಬ್ಬ ಚೇತನಾತ್ಮಕನು ೨

ಒಬ್ಬನಾ ಕಾಂತಿಯಿಂ ಹಬ್ಬಿಕೊಂಡಿದೆ ಲೋಕ
ಒಬ್ಬನೆಂದೇ ತಿಳಿದಡೆ ತಾನೊಬ್ಬನೇ ಇಹನೀಹರನು

ಒಬ್ಬನನ್ನೊಯ್ದು ನೀವು ಹಾಗಿಬ್ಬರ ಮಾಡಲಾಗದು
ಒಬ್ಬನೇ ಚಿದಾನಂದನು ಚೇತನಾತ್ಮಕನು ೩

## ೧೦೧

ಆತ್ಮವೇ ಜೀವಾತ್ಮನು
ಆತ್ಮ ಬೇರೆ ಜೀವಾತ್ಮ ಬೇರೆಯಲ್ಲ ಪ

ಅರಸು ಎಂಬವ ಹೋಗಿ ಚಾಕರನಾಗಿರೆ
ಅರಸು ಬೇರೆ ಚಾಕರ ಬೇರೆ ತಿಳಿ ೧

ಬ್ರಹ್ಮಚಾರಿಯು ಹೋಗಿ ಯತಿಯಾಗಿ ಕುಳಿತರೆ
ಬ್ರಹ್ಮಚಾರಿಯು ಬೇರೆ ಯತಿ ಬೇರೆ ತಿಳಿ ೨

ಸಾಧಕನು ಹೋಗಿ ಸಾಧ್ಯನು ಆಗಿರೆ
ಸಾಧಕನು ಬೇರೆ ಸಾಧ್ಯನು ಬೇರೆ ತಿಳಿ ೩

ಆತ್ಮನೆಂಬುವ ಹೋಗಿ ಜೀವನೇ ಆಗಿರೆ
ಆತ್ಮನು ಬೇರೆ ಜೀವನು ಬೇರೆ ತಿಳಿ ೪

ಒಬ್ಬ ಉಪಾಧಿಯಿಂದಲಿ ನಾನು ಎರಡಿರೆ
ಒಬ್ಬ ಚಿದಾನಂದ ತಾನೆ ಸತ್ಯ ಸತ್ಯ ೫

## ೧೦೨

ಆಧ್ಯಾತ್ಮ ಹೆಚ್ಚೇನು ಅವಿದ್ಯೆ ಕಡಿಮೆಯೇನು
ಆಧ್ಯಾತ್ಮ ವಿದ್ಯೆಯದು ಅನುಭವಿಸಲರಿಯದವಗೆ ಪ

ಪುಸ್ತಕಂಗಳ ಪಿಡಿದು ಪುಸ್ತಕದೊಳಿದ್ದುದನು
ವಿಸ್ತರಿಸಿ ಎಲ್ಲರಿಗೆ ಹೇಳುತಿಹನು
ಪುಸ್ತಕದ ಅರ್ಥವನು ಮನಕೆ ತಾರದಲೆ
ಪುಸ್ತಕದ ಅಕ್ಷರವ ಪೇಳುವವಗೆ ೧

ಜ್ಞಾನವನು ಹೇಳುತಿಹ ಜ್ಞಾನವನು ತಾನರಿಯ
ಜ್ಞಾನಿಗಳ ನಡೆಯನು ಮೊದಲೆ ತಿಳಿಯ
ಜ್ಞಾನಿಗಳನೇ ಕಂಡು ಜ್ಞಾನವಿಲ್ಲೆಂದೆಂಬ
ಜ್ಞಾನಿ ತಾನೆಂತೆಂದು ಬರಿ ಬಣ್ಣಿಸುವಗೆ ೨

ದೇವತಾರ್ಚನೆ ಜಪವ ತಪವ ಡಂಭದಿ ತಾಳ್ದು
ಪಾವುಗೆಯ ಮೆಟ್ಟಿ ಸುಳಿ ಸುಳಿದಾಡುತ
ಸಾಧಿಸದೆ ಪುಣ್ಯ ಪುರುಷರ ನೆಲೆಯ ತಿಳಿಯದಲೆ
ದೇವ ತಾನೆಂದು ಬರಿ ಬೋಧಿಸುವವಗೆ ೩

ಯೋಗೀಶ್ವರರ ಕಂಡು ಯೋಗದಿಂದೇನೆಂಬ
ಯೋಗವಳವಟ್ಟ ತೆರನಂತೆ ನುಡಿದ
ಯೋಗಾಮೃತದ ಪೂರ್ಣರಸವ ಸವಿದುಣ್ಣದೆಲೆ
ಯೋಗಿ ತಾನೆಂದು ಬರಿ ತೋರುತಿರುವವಗೆ ೪

ಮಾಡಿದಡೆ ಬಹದಲ್ಲ ಕೇಳಿದಡೆ ಬಹದಲ್ಲ
ಆದರಿಸಿ ಒಬ್ಬರಿಗೆ ಹೇಳಿದಡೆ ತಾ ಬರದು
ಸಾಧಿಸಿಯೆ ಮನನದಭ್ಯಾಸದಿಂ ದೃಢವಾಗಿ
ವಾದಹರ ಚಿದಾನಂದ ತಾನಾದರಲ್ಲದೆ ೫

## ೧೦೩

ಆನಂದವಾಯಿತು ಬ್ರಹ್ಮ ಆನಂದವಾಯಿತು
ಆನಂದದೊಳು ಆನಂದವೇ ಆಗಿ
ಸ್ವಾನಂದ ಸುಖ ಶರೀರ ವ್ಯಾಪಿಸೆ ಪ

ಬಂಧತ್ರಯಾಭ್ಯಾಸದ ಬಂಧವ ಪಿಡಿಯುತ
ನಿಂದು ನಾಸಿಕಗೊನೆ ನಿಟಿಲವ ನೋಡುತ
ಛಂದ ಛಂದದ ಪುಷ್ಪ ಚದುರಲಿ ಕಾಣುತ
ಸುಂದರನಾದ ಕೇಳಿ ಸುಖಿಸುವರ ಕಂಡು ೧

ಎಡಬಲ ಹಾದಿಯ ಎಡಬಲಕಿಕ್ಕುತ
ನಡುವಿನ ಮಾರ್ಗವ ನೇರದಿ ಪೊಕ್ಕು
ನಡೆದು ಸುಷುಮ್ನದ ನಾಳನೆಲೆಯ ನೋಡಿ
ಕುಡಿದಮೃತವ ಸೊಕ್ಕಿ ಕುಳಿತಿಹರ ಕಂಡು ೨

ನಿದ್ರೆಯ ಕುಂಡಲಿ ನಿದ್ರೆಯ ತಿಳಿಪುತ
ಮುದ್ರಿಸಿ ನವಬಾಗಿಲನೆಲ್ಲವ ಮುಚ್ಚುತ
ಭದ್ರ ಮಂಟಪದೊಳು ಭಾಸದಿ ಬೆಳಗಿ ಸ-
ಮುದ್ರ ಗುರು ಚಿದಾನಂದ ಬೆರೆದವರ ಕಂಡು ೩

## ೧೦೪

ಆನೆ ಬಂದಿತಯ್ಯಾ ಯೋಗಿ ಎಂಬ ಆನೆ ಬಂದಿತಯ್ಯಾ
ಆನೆ ಬಂದಿತು ಪ್ರಪಂಚ ಪೇಟೆಯ
ತಾನೆ ಕೀಳುತ ತಳಪಟ ಮಾಡುತ ಪ

ಪಾಪಗಳೆಂದೆಂಬ ಸರಪಳಿ ಹರಿದು
ಈಷಣಗಳು ಎಂಬ ಸಂಕೋಲೆ ಮುರಿದು

ದ್ವೇಷವೆನಿಪ ಗಾಡಿಕಾರರನರೆದು
ಕ್ಲೇಷವೆನಿಪ ಕಾವಲವರ ಜಡಿದು ೧

ದಶವಾಯುಗಳೆಂಬ ದನಗಳನೋಡಿಸಿ
ವ್ಯಸನ ಕುದುರೆಗಳ ಸೀಳಿ ಸೀಳಿಕ್ಕಿ
ಹಸಿವು ತೃಷೆಗಳನು ಕಾಲೊಳಿಕ್ಕಿ
ಕಸೆಕಸೆ ಅಂಗಡಿಗಳನು ತೂರಿಕ್ಕಿ ೨

ಬಹುಮತಗಳು ಎಂಬ ಮನೆಯನೆ ಕೆಡಹಿ
ಇಹಪರ ವಾಸನೆ ಕೊಟ್ಟಿಗೆ ಕೊಡಹಿ
ಮಹಾ ಅಭಿಮಾನದ ನಾಯಿಗಳ ಮುಡುಹಿ
ಬಹು ಕಲ್ಪನೆಯ ಕುರಿ ಕೋಳಿಗಳ ಉಡುಹಿ ೩

ಆನಂದ ಮದಧಾರೆ ಸಾಲುಸಾಲಿಡುತ
ಸ್ವಾನಂದ ಬೋಧ ಲಹರಿಯಲಿ ತೂಗುತ
ಜ್ಞಾನ ಸೊಕ್ಕಿನಲಿ ಕೆಕ್ಕರಿಸಿ ನೋಡುತ
ತಾನೆ ತಾನಾಗಿ ತನ್ನ ಮರೆಯುತ ೪

ಬೆಳಗುವ ಸುಷುಮ್ನ ಬಾಜಾರವಿಡಿದು
ಗೆಲುವಿನಲಿ ಭ್ರೂಮಧ್ಯ ಜಾಡಿನಲಿನೆಡೆದು
ತಿಳಿಗೊಳ ಸಹಸ್ರಾರದ ನೀರ ಕುಡಿದು
ಬಲು ಚಿದಾನಂದವೆಂಬ ಆನೆಯು ನಡೆದು ೫

## ೧೦೫

ಆವಾವಯ್ಯ ಇಹದ ಕುಲಗಳು
ಆವಾವಯ್ಯ ಇಹದ ಕುಲಗಳು
ಅಷ್ಟಮದಗಳನ್ನೇ ಗೆದ್ದು
ಭಾವಶುದ್ಧಿಯಿಂದ ಮುಕ್ತಿಭಾಮಿನಿಯನ್ನು ಸೇರಿದವಗೆ ಪ

ಮೂರನಳಿದು ಏಳ ಕಳೆದು ಮೂರ ಖಂಡಿಸಿ
ಏಳ ಮುರಿದು ಆರ ಮೂರ ಮೀರಿದವಗೆ ೧

ನಾಕ ಕಳೆದು ಎರಡ ಮರೆತು ನಾಲ್ಕು ಮರೆತು ಎರಡ ತಿಳಿದು
ನಾಲ್ಕು ಎಂಟು ಎಂಬ ಜರೆದು ನಾಲ್ಕರಲ್ಲಿ ನಿಂತವನೆ ೨

ಹತ್ತನಟ್ಟಿ ನವವ ಮೆಟ್ಟಿ ಹರಿಯ ಕೋಟಿ ಕಿರಣವೆಂಬ
ತತ್ವ ಚಿದಾನಂದ ತಾನೆ ತಾನೆ ಆದವಗೆ ೩

## ೧೦೬

ಇಲ್ಲವಿಲ್ಲವು ಮಾಯೆಯಿಲ್ಲ ಬ್ರಹ್ಮರ ಹೊಳೆವು
ಬಲ್ಲವನರಿಯಲವ ಬ್ರಹ್ಮವಿನಾ ಜಗವಿಲ್ಲ ಪ

ಕಾಷ್ಟದಲಿ ರೂಪು ನಾಮಗಳೆಷ್ಟು ಆದರೇನು
ಕಾಷ್ಟದಾ ಹೊರತು ಮತ್ತಿನ್ನೊಂದು ಉಂಟೇ
ಶ್ರೇಷ್ಠ ಮೊದಲಾಗಿ ತೃಣವರೆಗೆ ದಿಕ್ಕುಗಳೆಲ್ಲ
ಶಿಷ್ಟಬ್ರಹ್ಮವಲ್ಲದೆ ಬೇರೆ ಜಗವಿಲ್ಲ ೧

ಕನಕದಿಂದಲಿ ಒಡವೆ ನಾನಾ ಬಗೆಯಲಾಗೆ
ಕನಕವೇ ಹೊರತು ಮತ್ತಿನ್ನೊಂದು ಉಂಟೆ
ಏನಿತೆನಿತಸುರ ಸುರರು ಯಮುನೆ ಪರ್ವತವೆಲ್ಲ
ಘನಬ್ರಹ್ಮವಲ್ಲದಲೆ ಬೇರೆ ಜಗವಿಲ್ಲ ೨

ಬ್ರಹ್ಮ ಆಧಾರದಲಿ ತೋರುತಡಗುವುದು ಮಾಯೆ
ಸುಮ್ಮನೆಯೆ ಮೃಗಜಲವು ತೋರಡಗಿದಾತ
ಹೆಮ್ಮೆ ತಾನೆಷ್ಟು ಮಾತಿನ ಮಾತ್ರವಲ್ಲದಲೆ
ನಿರ್ಮಲ ಚಿದಾನಂದ ವಿನಾ ಜಗವಿಲ್ಲ ೩

## ೧೦೭

ಇಲ್ಲವೋ ಮುಕ್ತಿ ಇಲ್ಲವಿಲ್ಲವೋ ಮೆಲ್ಲ ಮೆಲ್ಲನೆ ದೃಷ್ಟಿನಿಲ್ಲಿಸಿ
ಮೇರು ಶಿಖರವ ನೋಡುವತನಕ ಪ

ಚಕ್ರವಾರ ಮೆಟ್ಟಿನಿಂತು ಚಂಚಲಿಸದಂತೆ ದೃಷ್ಟಿಯಿಟ್ಟು
ವಿಕ್ರಮದಲಿ ಬ್ರಹ್ಮರಂಧ್ರ ಪೊಕ್ಕು ತೇಜ ಕಾಣುವತನಕ ೧

ದೃಢಚಿತ್ತದಲಿದ್ದು ಮಾರುತನ ಮೇಲಕೆ ಊದಿ
ಒಡನೆ ಕೂಡಿಸಿ ವಾಯುಮನವನು ಅಸುವನು ಕಾಣುವತನಕ ೨

ಓಂಕಾರ ಧ್ವನಿಯ ಕೇಳಿ ಒತ್ತೊತ್ತು ಬೆಳಗಿನೊಳು
ಶಂಕರನೆನಿಪ ಚಿದಾನಂದ ಬ್ರಹ್ಮವನೆ ಕಾಣುವ ತನಕ ೩

## ೧೦೮

ಇಹಾತನೆ ಯೋಗಿ ಜಗದೊಳಗೆಲ್ಲವೂ ತಾನಾಗಿ
ಇಹಾತನೆ ಯೋಗಿ ಪ

ಉಡುವರ ಕಂಡು ಉಡುವನು ತಾನು
ತೊಡುವರ ಕಂಡು ತೊಡುವನು ತಾನು
ಕೊಡುವರ ಕಂಡು ಕೊಡುವನು ತಾನಾಗಿ ೧

ನಡೆವರ ಕಂಡು ನಡೆವನು ತಾನು
ಹಿಡಿವರ ಕಂಡು ಹಿಡಿವನು ತಾನು
ಬಿಡುವರ ಕಂಡು ಬಿಡುವನು ತಾನು ೨

ಪೇಳ್ವರ ಕಂಡು ಪೇಳ್ವನು ತಾನು
ಕೇಳ್ವರ ಕಂಡು ಕೇಳ್ವನು ತಾನು
ತಿಳಿವರ ಕಂಡು ತಿಳಿವನು ತಾನಾಗಿ ೩

ಆಡುವರ ಕಂಡು ಆಡುವನು ತಾನು
ಕಾಡುವರ ಕಂಡು ಕಾಡುವನು ತಾನು
ಓಡುವರ ಕಂಡು ಓಡುವನು ತಾನಾಗಿ ೪

ಹಿರಿಯರ ಕಂಡು ಹಿರಿಯನೆ ತಾನಾಗಿ
ಕಿರಿಯರ ಕಂಡು ಕಿರಿಯನೆ ತಾನಾಗಿ
ಗುರು ಚಿದಾನಂದನೆ ತಾನಾಗಿ ೫

## ೧೦೯

ಎಂಬೆನು ವಿವೇಕ ಮನುಜಗೆ ಇರೆ ಎಂಬೆನು ಬ್ರಹ್ಮನು ಎಂಬೆ
ಎಂಬೆನು ವಿವೇಕ ಮನುಜಗೆ ಇಲ್ಲದಿರೆ
ಕತ್ತೆಯಮರಿಯದು ಎಂಬೆ ಪ

ವೇದದ ನಿಜ ಅರ್ಥವ ತಿಳಿದಡೆ ಉತ್ತಮೋತ್ತಮನು ಎಂಬೆ
ಕ್ರೋಧದಿ ತರ್ಕದಿ ಕಾದಾಡುವವನು
ಕೋಳಿಯ ಹುಂಜನು ಎಂಬೆ
ನಾನಾರೆನುತಲಿ ನಿಜವನು ತಿಳಿವನ ನಾರಾಯಣನು ಎಂಬೆ
ನಾದದ ತಿಳಿವನು ನಿಂದಿಸುವಾತನ ಸರಸವಾಡೋ ಪಶು ಎಂಬೆ ೧

ಮತಿಯ ವಿಚಾರದಿ ಜಗ ಬ್ರಹ್ಮವೆಂಬನ ವಿಚಾರವಾದಿಯು ಎಂಬೆ
ಯತಿಗಳು ಬರೆ ಕುಳಿತೇಳದ ಮನುಜನ
ಎಮ್ಮೆಯ ಮಗನವನೆಂಬೆ
ಸುತ್ತಮುತ್ತಂಗನೆ ಮೋಹವ ತೊರೆದನ
ಯೋಗಪುರುಷ ತಾನೆಂಬೆ

ಗತಿಮತಿ ತೊರೆದಿಹ ನರನನು ಈಗಲೆ
ಎಂಜಲು ತಿಂಬುವ ನಾಯೆಂಬೆ ೨

ಪರಮಾರ್ಥದಿ ಶಮದಮದಿಂದಿಹನನು ಪಂಡಿತನೀಗಲು ಎಂಬೆ
ಹಿರಿಯರ ಕಾಣಲು ಹಲ್ಲನೆ ಕಿರಿವನ ಹಿರಿಯ
ಮುಸುವನು ತಾನೆಂಬೆ
ಗುರಿಯನು ತಪ್ಪದೆ ದೃಷ್ಟಿಸಿ ನಡೆವನ ಗುಣಕೆ ಅತೀತನು ಎಂಬೆ
ಬರಿಯ ಪ್ರತಿಷ್ಠೆಯ ಸಾಧಿಸುತಿರುವನ
ಬರಡು ಗೊಡ್ಡು ಎಂದೆಂಬೆ ೩

ನಾದದ ಧ್ವನಿಯನು ಕೇಳುತಲಿಹನನು ಜಗಜೀವನನು ಎಂಬೆ
ನಾದದ ಸುಖವನು ಅರಿಯದ ನರನನು
ಜೀನುಗಾರನು ಎಂದೆಂಬೆ
ದಿನಕರ ಕೋಟಿಯ ತೇಜದಿ ಹೊಳೆವನ ದಿವ್ಯ
ಮೂರುತಿ ಎಂದೆಂಬೆ
ವನವನ ಅಲೆಯುವ ಬರಡು ಮುನಿಯನು
ವನಕೆಯ ತುಂಡದು ತಾನೆಂಬೆ ೪

ಆತ್ಮದ ಕಳೆಯನು ಅರಿತವನಿದ್ದರೆ ದೃಢದಲಿ ಬ್ರಹ್ಮನು ಎಂಬೆ
ಸತ್ವಶಾಲಿ ಆ ಮಹಿಮರ ಜರೆವರ ಗುಡ್ಡದ
ಗೂಗೆಯಮರಿ ಎಂಬೆ
ಚಿನುಮಯ ಚಿನ್ಮಾತ್ರನೆ ತಾನಾದವನನು ಚಿದಾನಂದ ಗುರುವೆಂಬೆ
ಕರೆಕರೆ ಎನಿಸುವ ಸಾಧು ವೇಷವನು ದೂರಕೆ ನೀ ನಿಲ್ಲೆಂಬೆ ೫

## ೧೧೦

ಎಂಥಾ ಮರವೆ ಮಾಡಿತೋ ಈ ಪ್ರಣವ ನಾದಾ
ಎಂಥಾ ಮರವೆ ಮಾಡಿತೋ

ಅಂತರಂಗದಲಿ ಘೋರೆಂದು ತುಂಬಿ
ಅಂತು ಅಂತೆನಲು ಕೂಡದು ಪ್ರಣವನಾದ ಪ

ಹೊಟ್ಟೆಗುಣ್ಣುವುದನೆ ಮರೆಸಿತು ಈ ಪ್ರಣವನಾದ
ಮುಟ್ಟು ಚಟ್ಟನೆ ಮರೆಸಿತು
ಕೆಟ್ಟಕೇಡನೇನ ಹೇಳಲಿ
ಉಟ್ಟ ಬಟ್ಟೆಯ ಅರಿವೇ ಇಲ್ಲ ೧

ಆಸೆಯೆಂಬುದ ಮರೆಸಿತು ಈ ಪ್ರಣವನಾದ
ದ್ವೇಷವೆಂಬುದು ತೊರೆಸಿತು
ನಾಶವಾಯಿತು ಜಪತಪವೆಲ್ಲ
ಮೋಸವೆನಗಿಂತು ಮಾಡಿತು ೨

ಧ್ಯಾನವೆಂಬುದು ಮರೆಸಿತು ಈ ಪ್ರಣವನಾದ
ಓಂಕಾರವೆಂಬುದು ಕಲಿಸಿತು
ಜ್ಞಾನಮೂರುತಿ ಚಿದಾನಂದ
ತಾನೆ ತಾನೆ ತಾನೆ ಎಂಬ ೩

## ೧೧೧

ಎತ್ತಲಿಂದ ಬಂದೆ ಎನ್ನ ಒಗೆತನಕೆ ಎಲೆಖೋಡಿ ಸವತಿ
ಎತ್ತಲಿಂದ ಬಂದೆ ಎನ್ನ ಒಗೆತನಕೆ ಪ

ಕತ್ತಲು ಬೆಳುದಿಂಗಳಂತಾಯಿತು
ಮಿತ್ತು ಎತ್ತಲಿಂದ ಬಂದು ಸೇರಿತು
ಬಂದು ಎದುರಿಗೆ ಹಲ್ಲ ತೆರೆದಳು
ಒಂದು ಮಾತನು ಆಡದೆನ್ನೊಳು
ಒಂದನ್ನು ಸೇವೆಗೆ ಬರಗೊಡಳು
ಸಂದಿಯಲಿ ಲೊಟಕೆಯ ಹಾಕುತಲಿಹಳು ೧

ಹಾಲೊಳು ವಿಷವ ಹೊಯ್ದಂತೆ ಮಾಡಿದಳು
ಇಲ್ಲವನೆ ಹೇಳಿ ಕಾಲಕಾಲಲಿ ಎನ್ನ ಒದೆಸಿದಳು
ಬೇಳ ಮೇಳದಿ ತೊಡೆಯ ಮೇಲೆ ಹೊರಳಿ
ಮೇಲೆಯೆ ಮೀಸೆಯ ಹುರಿ ಮಾಡುವಳು ೨

ನೆರಳ ನೀರೊಳು ಬಗ್ಗಿ ನೋಡುವಳು ಎಬ್ಬಿ ತೆಗೆದು
ಮರಳಿ ಮರಳಿ ಒಡವೆಯ ನಿಡುವಳು
ಹೊರಯಿಕೆ ಒಳಯಿಕೆ ಮುರುಕಿಸಿ ನಡೆಯುತ
ಲಿರೆ ಗಂಡಸು ಎಂದು ಅಣಕಿಸುತಿಹಳು ೩

ಮೋರೆಯನೀಗ ಎನಗೆ ತೋರಿಸಳು
ಸೀರೆ ಕುಪ್ಪುಸವ ಆರು ಕಾಣದಂತೆ ಉಡುವಳು
ದಾರಿಯ ಹಿಡಿ ನೀನಿರಬೇಡೆಂಬಳು
ನೂರು ಬಾರಿಯು ಸಾರಿದೆನೆಂಬಳು ೪

ಮಾತವಳ ಕೂಡ ಆಡಿ ಎಂಬಳು ಎನ್ನ ಕೈಯಲಿ ಖಡ್ಡಿ
ಯಾತಕೆ ಎನ್ನ ಕರದೆ ಎಂಬಳು
ದಾತ ಚಿದಾನಂದನ ಚಿಂತನೆ ಮರೆಸಿ
ಘಾತಕಿ ಎನ್ನ ಒಗೆತನ ಕೊಂಡಳು ೫

ಜನನ ಮರಣಗಳಳಿದು ಜಠರ ಬಾಧೆಗಳಳಿದು
ಘನ ಪುರುಷನಾಗಿ ಘನತಾನಾಗಿ ಇರುವನವನ ೬

ಸಕಲ ವಾಸನೆಯಳಿದು ಸಪ್ತ ವ್ಯಸನಗಳಳಿದು
ಅಖಿಲೇಂದ್ರಿಯಗಳ ವ್ಯಾಪಾರವಳಿದು
ಸುಖ ದುಃಖವೆರಡಳಿದು ಸೂಕ್ಷ್ಮ ದೇಹವನಳಿದು
ಮುಕುತಿ ಪತಿ ಚಿದಾನಂದ ಮೂರುತಿ ತಾನಾದವನು ೭

## ೧೧೨

ಎದ್ದ ನೋಡಿ ಯೋಗಿ ದಿವಾಳಿ ತನ್ನ
ಉದ್ಯೋಗವುಡುಗಿ ಕೈಗಂಟು ಮುಳುಗಲು ಪ

ಕ್ಲೇಶ ಪಂಚಕವೆಂಬ ಕಡು ತವಕವದು ಹರಿಯಿತು
ಈಷಣತ್ರಯವೆಂಬ ಇಟ್ಟ ಉದ್ರಿನಿಂತಿತು ೧

ತಪ್ತನಾಲಕು ಒಡವೆ ತಾರದಲ ಹೋಯಿತು
ಲಿಪ್ತಿ ಇಂದ್ರಿಯ ಲಾಭ ಲಿಂಗಾರ್ಪಿತವಾಯಿತು
ಗುಪ್ತ ಜೀವವು ತಾನು ಗುರುತಿಲ್ಲದೆ ಮುಳುಗಿತು ೨

ದೇಣಿಗಾರನು ಚಿದಾನಂದನು ಒಂದೇ ಕುಳಿತು
ದೇಣಿಯ ಸಲಿಸೆಂದು ಗಾಣಗತಿಯನೆ ಮಾಡಿ
ದೇಣಿಯಕೆ ಸರ್ವವೆಲ್ಲ ಧಾರೆಯನೆರೆದೆ
ಮಾಣದಲೆ ತನ್ನಾಳು ಮಗನ ಮಾಡಿಕೊಂಡ ೩

## ೧೧೩

ಎಲ್ಲಿದ್ದರೇನು ಯೋಗಿ ಮತ್ತೆಲ್ಲಿದ್ದರೇನು
ಫುಲ್ಲ ಲೋಚನನರಿತು ಪುರುಷೋತ್ತಮನಾದ ಬಳಿಕ ಪ

ಈಷಣ ತ್ರಯವಳಿದು ಇಷ್ಟ ಕಾಮ್ಯಗಳಳಿದು
ದೋಷವೆಂಬುದ ನಳಿದು ದ್ವೇಷವಳಿದು
ಆಸೆಯೆಂಬುದು ಅಳಿದು ಅಷ್ಟಪಾಶಗಳಳಿದು
ಈಶ ಸರ್ವೇಶವಿಭು ತಾನಾಗಿರುವವನು ೧

ಮನದ ವರ್ತನೆಯಳಿದು ದುಷ್ಟಮದಗಳ ಕಳೆದು
ಕನಸು ಜಾಗೃತಿ ಸುಷುಪ್ತಿ ಕರ್ಮವಳಿದು

ಜನನ ಮರಣಗಳಳಿದು ಜಠರ ಬಾಧೆಗಳಳಿದು
ಘನ ಪುರುಷನಾಗಿ ಘನ ತಾನಾಗಿ ಇರುವನವನು ೨

ಸಕಲ ವಾಸನೆಯಳಿದು ಸಪ್ತವ್ಯಸನಗಳಳಿದು
ಅಖಿಲೇಂದ್ರಿಯಗಳ ವ್ಯಾಪಾರವಳಿದು
ಸುಖದುಃಖವೆರಡಳಿದು ಸೂಕ್ಷ್ಮ ದೇಹವನಳಿದು
ಮುಕುತಿ ಪತಿ ಚಿದಾನಂದ ಮೂರುತಿ ತಾನಾದವನು ೩

## ೧೧೪

ಏನು ಭಯ ನನಗೆ ಏನು ಭಯ
ತಾನೆಯಾದ ಪರಬ್ರಹ್ಮ ತಾನೆಯಾಗಿ ತಾನಿಹಗೆ ಪ

ಕಾಮಿಸಿ ಸುತರು ಸೊಸೆಯು ಕೊನೆಯಿಲ್ಲದ ಬಯಕೆಯಾಗೆ
ಕಾಮನನ್ನು ಕಾಲಲೊದ್ದು ಕಸಕೆ ಮಾಡಿದವಗೆ ೧

ಇಹಪರ ವಾಸನೆಯನೆಲ್ಲ ಲೋಕ ವಾಸನೆಯ
ದಹಿಸಿ ಬೂದಿಯನ್ನೆ ಮಾಡಿ ಧೂಳಿಪಟ ಮಾಡಿದವಗೆ ೨

ಬಣ್ಣ ಬಣ್ಣದ ಕ್ರೋಧಮದಗಳ ಬಳಿದು ಶೋಕ ಮೋಹವ
ನುಣ್ಣಗೆ ಮಾಡಿ ಎಲ್ಲವ ನುಂಗಿ ನೀರು ಕುಡಿದವಗೆ ೩

ದಿಟ್ಟ ತಾಪತ್ರಯ ಕ್ಲೇಶ ದುಷ್ಟಗುಣ ವೆಂಬುದೆಲ್ಲವ
ಹೊಟ್ಟು ಮಾಡಿ ಹಾರಲೊದ್ದಿಹ ದಿಟ್ಟ ಮಾನವಗೆ ೪

ಕ್ರಿಯಾ ಭ್ರಾಂತಿ ಸಂಶಯ ಕಪಟ ಮೋಹ ಮೊಳೆಯ ಕಿತ್ತು
ಬಯಲು ಚಿದಾನಂದ ಸದ್ಗುರು ಬ್ರಹ್ಮವಾಗಿ ತೂಗುವಗೆ ೫

## ೧೧೫

ಏಸು ಜನ್ಮದ ಸುಕೃತವದು ಬಂದು ಒದಗಿತೋ
ದೇಶಿಕೋತ್ತಮನ ದಯದಿ
ಆಸೆಗಳು ಮರೆಯಾಗಿ ಅಷ್ಟ ಪಾಶಗಳಳಿದು
ಈಶ ಸರ್ವೇಶನಾಗಿ ಹೋದೆ ಪ

ಕಂಗಳ ಮುಚ್ಚಿ ದೇಹದೊಳು ದಿಟ್ಟಿಸಿ ನೋಡೆ
ಮಂಗಳವೆ ತೋರುತಿಹುದು ಅಹುದು
ತಿಂಗಳಿನ ಕಳೆಯಂತೆ ಬೆಳಕಬೀರುತ ಬೆಳು-
ದಿಂಗಳನೆ ಹರಡಿದಂತೆ ಅಂತು
ಕಂಗೊಳಿಸುತಿಹುದು ಬಗೆಬಗೆಯ ವರ್ಣಛಾಯೆ
ಅಂಗ ವರ್ಣಿಸುವರಾರೋ ಆರೋ
ಬಂಗಾರ ಪುಟದಂತೆ ನಡುಮಧ್ಯೆ ಹೊಳೆಹೊಳೆದು
ಹಿಂಗದನುದಿನ ತೋರುವ ಗುರುವಾ ೧

ನಾದವದು ಸುನಾದ ಸುಸ್ವರವರಳೆ
ಭೇದವೆಂಬುದು ಮರೆಯಿತು ಕುರಿತು
ಮದವು ಇಂದ್ರಿಯ ಸ್ವರ ವ್ಯಾಪಾರ ಉಡುಗಿ
ಹೋದವು ಸುಖದಿ ಮುಳುಗಿ
ಕ್ರೋಧ ಕಾಮವು ಲೋಭ ಎಂಬುವರ ಕೈಕಾಲು
ಸೇದಿದುವು ಬೋಧದೊಳಗೆ ಕೆಳಗೆ
ಛೇದವಾದುವು ತಾಪತ್ರಯವು ಈಷಣ ವ್ಯಸನ
ಮೋದಿದರು ಅಮೃತ ಕಳದಿ ಝಳದಿ ೨

ನಿತ್ಯವಹ ಪರಮಾತ್ಮ ನಿಶ್ಚಲದಿ ತೋರುತಿದೆ
ಚಿತ್ತವೆಂಬುದು ಸಾಯೇ ಬೇಯೆ
ಮತ್ತೆ ಮನ ದೃಗ್ ದೃಶ್ಯ ಧಾರಣರವರು
ಎತ್ತ ಹೋದರೋ ಎಲ್ಲರೂ

ಸತ್ಯವಾಗಿಹ ಪರಮ ಬಾಹ್ಯಾಂತರೀಯ ಹೆಸರು
ಎತ್ತುವರು ಇಲ್ಲದಾಯ್ತು ಹೋಯ್ತು
ಪ್ರತ್ಯಗಾತ್ಮನು ಚಿದಾನಂದ ಗುರು ತಾನಾದ
ಅತ್ಯುಕ್ತಿ ಹೇಳ್ವುದೇನು ಏನು ೩

## ೧೧೬

ಒಂದೇ ಬ್ರಹ್ಮವು ಮತ್ತೊಂದಿಲ್ಲವು
ಇದ್ದುದು ಬ್ರಹ್ಮವು ಒಂದೇ
ಒಂದನು ಎರಡಾಗಿ ಮಾಡುವುದೆಂತೈ
ಮಾಡಲು ಕೆಡುವನು ಮುಂದೆ ೧

ಕನಕದಿಂದ ಒಡವೆ ಬಹಳಾಗಲು ಒಡವೆಗೆಲ್ಲ
ಕನಕವೊಂದೇ ಘನ ಬ್ರಹ್ಮದಿಂದ ನಾನಾ ಜೀವವಾಗೆ
ನಾನಾ ಜೀವಕೆ ಬ್ರಹ್ಮವೊಂದೇ ೨

ಲೋಹಗಳಿಂದಲಿ ಅನೇಕ ವಿಧವಿರೆ
ಅನೇಕ ವಿಧಕೆ ಲೋಹವೊಂದೇ
ಮಹಾಬ್ರಹ್ಮಾದಿ ಮಹತ್ತು ಅಣುವಿರೆ
ಮಹತ್ತು ಅಣುವಿಗೆ ಬ್ರಹ್ಮವೊಂದೇ ೩

ಬೀಜದಿಂದ ಬೀಜವನೇಕವಾಗಲು
ಅನೇಕ ಬೀಜಕೆ ಬೀಜವೊಂದೇ
ತೇಜ ಚಿದಾನಂದ ಬ್ರಹ್ಮವು ಸರ್ವವು
ಆ ಸರ್ವಕೆ ಬ್ರಹ್ಮವು ತಾನೊಂದೆ ೪

## ೧೧೭

ಕಂಡಿರೇ ಬ್ರಹ್ಮದಾಟವ ಕಂಡಿರೆ ಬ್ರಹ್ಮದಾಟ ಅ-
ಖಂಡರಾದ ಮಹಾತ್ಮರಿರಾ ಪ

ಬುದ್ಧಿಯನ್ನು ಹೇಳುತಿದೆ ಬುದ್ಧಿಯನ್ನು ಕೇಳುತಿದೆ
ಬುದ್ಧಿಹೀನನೆಂದು ತಾನೆ ಬದ್ಧನಾಗಿ ಕುದಿಯುತಿದೆ ೧

ಒಮ್ಮೆ ಸುಖಪಡುತಲಿದೆ ಒಮ್ಮೆ ದುಃಖ ಮಾಡುತಿದೆ
ಒಮ್ಮೆ ಹಾಡಿಪಾಡಿ ನಕ್ಕು ಒಮ್ಮೆ ಕೆಲೆದು ಕೆನೆಯುತಿದೆ ೨

ದುಡುಕು ತಾನು ಮಾಡುತಿದೆ ದುಡುಕು ಅವನದೆನ್ನುತಿದೆ
ದುಡುಕು ದುಡುಕು ಎಂದು ತಾನೆ ಬಿಡಿಸಿ ನ್ಯಾಯ ಹೇಳುತಿದೆ ೩

ಗಂಡ ಹೆಂಡಿರಾಗಿ ಇದೆ ಗಂಡು ಮಗನ ಬೇಡುತಿದೆ
ಗಂಡು ಗಂಡು ಎಂದು ತಾನು ಗಂಡ ದೀಪ ಹೊರುತಲಿದೆ ೪

ಬಹಳ ವೇಷ ಹಾಕಿ ಇದೆ ಬಹಳ ಹೆಸರ ಕರೆಸುತಿದೆ
ಬಹಳ ಚೇಷ್ಟೆಯಿಂದ ತಾನು ಬಹಳ ಭೇದವಾಗಿ ಇದೆ ೫

ಇಂತು ಬಹಳ ರೂಪವಿದೆ ಇಂತು ತಿಳಿಯಲೊಂದೆ ಇದೆ
ಇಂತು ಚಿದಾನಂದ ಬ್ರಹ್ಮ ಇಂತು ಹೊತ್ತು ಕಳೆಯುತಿದೆ ೬

## ೧೧೮

ಕಂಡ್ಯಾ ಕೆಳದಿ ಮಾಡಿದ ಮಾಟ ಕಂಡ್ಯಾ ಕೆಳದಿ
ಗಂಡನು ತಾನೆಂಬ ಖಂಡನಂಬುಗೆ ಗೊಟ್ಟು
ಹಿಂಡನಗಲಿಸಿದನು ಉದ್ದಂಡ ಚಿದಾನಂದ ಪ

ಅವರಿಗೆ ನಾ ಮರುಳಾಗಿ ತನಯ
ರೈವರ ಬಿಟ್ಟೆ ನಾಲ್ವರು ಭಾವಂದಿರನು ಬಿಟ್ಟೆ ಸನುಮ–
ತವಾಗಿದ್ದ ಸರಿವರ್ಗತನವ ಬಿಟ್ಟೆ
ನಿನಗೆ ಮಾಡಿದ ಲೇಸ ಎನ್ನಲೇಸನು ನೀನು ೧

ಅರಸನೊಳ್ಳಿದನೆಂದು ಆರಣ್ಣರ ಬಿಟ್ಟೆ
ಹಿರಿಯ ಮಮತೆಯಲ್ಲಿದ್ದ ಅಕ್ಕಂದಿರನು ಬಿಟ್ಟೆ
ಸರಿಹೋಗಿ ಎನಗಿಷ್ಟದ ಸವತಿ ಮೂವರ ಬಿಟ್ಟೆ
ಕರುಣಾಕರನು ಕೈ ವಿಡಿಯ ಲಂತಾದುದಾ ೨

ಅತಿಮೋಹ ಮಾಡುವ ಅಷ್ಟಾಪ್ತರನು ಬಿಟ್ಟೆ
ಪಿತರೀರ್ವರನು ನಾನು ಹೇವರಿಸಿ ಬಿಟ್ಟೆ
ಸತತ ಚಿಂತಿಪ ಹತ್ತು ಸಖಿಯರನು ನಾ ಬಿಟ್ಟೆ
ಮತಿ ಎನಗಿನ್ನೇನೆ ಮಂದಗಮನೆ ಹೇಳೆ ೩

ನಿತ್ಯ ಕಾಲದಿ ಅವನ ನಿಜಸೇವೆ ಮಾಡುತಿಹೆ
ಸತ್ಯ ಸತ್ಯವೆ ಎಂಬ ತೆರದಿಂದಲಿ
ಪ್ರತ್ಯಗಾತ್ಮನು ತನ್ನ ಕೀರ್ತಿವಾರ್ತೆಯ ನೆಲ್ಲ
ಕೂರ್ತು ಮರೆಯಾದಂತೆ ಎನಗೆ ಮಾಡಿದುದ ನೀನು ೪

ಎನ್ನ ಸುಖದುಃಖ ಫಲ ಎನ್ನ ಕೈ ಮೇಲುಂಟೆನೆ
ಚೆನ್ನ ಚಿದಾನಂದ ಗುರುವಿನಿಂದ
ಉನ್ನತ ನಂಬುಗೆ ಎಂಬುದಿಂತಾಯಿತೇ
ಬಣ್ಣಿಸಲೇನವ್ವ ಬಯಲ ಕೂಡಿಸಿ ಬಿಟ್ಟ ೫

## ೧೧೯

ಕವಿ ಮಾತುಗಳ ಕೇಳಿ ಕೆಟ್ಟೋಗಬೇಡಿರಿ
ಕವಿ ನಾಶ ತನವೆಂದು ಹೇಳಲಿಲ್ಲ

ಶಿವನ ತಿಳಿದು ನಿಮ್ಮ
ಶಿವನೆಂದು ಕಂಡರೆ ಸಾಕ್ಷಾತ್ ಬ್ರಹ್ಮನೆ ನೀವೆಯೆಲ್ಲಾ ಪ

ಸೋಗೆಗಣ್ಣುಗಳೆಂದು ಹೇಳಿದನಲ್ಲವೇ
ಸೋಗೆಗಣ್ಣಿನ ಸೀಳ ಹೇಳಲಿಲ್ಲ
ಮೂಗನು ಸಂಪಿಗೆ ನನೆಯೆಂದನಲ್ಲವೆ
ಮೂಗಿನ ಸಿಂಬಳ ಹೇಳಲಿಲ್ಲ ೧

ಬಾಯಿ ಕರ್ಪೂರದ ಕರಡಿಗೆ ಎಂದನಲ್ಲವೆ
ಬಾಯೊಳಗಣ ಲೊಟ್ಟೆ ಹೇಳಲಿಲ್ಲ
ಕಾಯವು ಕನಕದ ಬಾಳ ಎಂದನಲ್ಲವೆ
ಕಾಯ ದುರ್ಗಂಧವ ಹೇಳಲಿಲ್ಲ ೨

ಮಂದಗಮನೆ ಎಂದು ನಡೆಗಂದನಲ್ಲವೆ
ಹಂದಿದುಟಿಯನದ ಹೇಳಲಿಲ್ಲ
ಸುಂದರ ಸರ್ಪವೇಣಿ ಎಂದನಲ್ಲವೆ
ಸಂದಿ ಸಂದಿಯ ಹೇನ ಹೇಳಲಿಲ್ಲ ೩

ನರದೇಹವನು ಕೊಂಡಾಡಿದನಲ್ಲವೆ
ನರದೇಹ ನರಕವೆಂದ್ಹೇಳಲಿಲ್ಲ
ಗುರು ಚಿದಾನಂದ ಸದ್ಗುರುನಾಥನ ನಂಬಿ
ಶರೀರವ ಕಳೆ ಎಂದು ಹೇಳಲಿಲ್ಲ ೪

## ೧೨೦

ಕಾಲ ಮೃತ್ಯುವು ಸ್ತ್ರೀಯಲ್ಲದಲೆ ಕಾಯುವವಳು
ತಾನಲ್ಲಣ್ಣ ಕಾಳಕವೀಶ್ವರ ಬಲ್ಲನು ತಾನೇನ ಕಾಳ ಕಿಚ್ಚಿನ ಕುಂಡವಣ್ಣ ಪ

ಮಲ ಮೂತ್ರವು ಮಜ್ಜೆಯು ಮೇದಸ್ಸು ಮೇಲೆ ಚರ್ಮ ಹೊದ್ದಿಹೆವಣ್ಣ
ಎಲುಬುಗಳಡಕಲಿ ನರಗಳ ಬಿಗಿವು ಎಡದೆರ ಅಪಿಲ್ಲದೆ ಇಹುದಣ್ಣ ಬಲು
ಹೊಲಸಿನ ಮಡುವದು ಮತ್ತೆ ಬಗೆಬಗೆಯ ಕ್ರಿಮಿಗಳು ಮನೆಯೊಳಣ್ಣ
ಹೊಲೆಮಯವಿರುವ ಸ್ತ್ರೀಯ ವರ್ಣಿಪೆನು ಹೇವ ಮಾರಿಯು ಕಾಣಣ್ಣ ೧

ಕಳಸ ಕುಚವು ಎದೆಎಂಬನ ಬಾಯಲಿ ಕರಿಯ ಮಣ್ಣನೆ ಹಾಕಣ್ಣ
ಹೊಳೆವ ಕಂಗಳು ಎಂಬನ ಮೋರೆಗೆ ಹುಡಿಯನೀಗಲೆ ಚೆಲ್ಲಣ್ಣ
ಬಳಕು ನಡೆಯಂತೆಂದು ಬೊಗಳುವನ ನಿಲಿಸದೆ ಅಲ್ಲಿಂದಟ್ಟಣ್ಣ
ಚೆಲುವಿನ ಸುಂದರ ಚೇಷ್ಟೆಗೆ ನಲಿವನ ಚಪ್ಪಲಿಯಿಂದಲಿ ಕುಟ್ಟಣ್ಣ ೨

ಬ್ರಹ್ಮಧ್ಯಾನವ ಮಾಡುವುದಕ್ಕೆ ಬ್ರಹ್ಮರಾಕ್ಷಸವು ಇದು ಅಣ್ಣ
ಹಮ್ಮಳಿದು ಯೋಗಾಭ್ಯಾಸದಲಿರೆ ಹೃದಯದಲಿ ಹರಿದಾಡುವುದಣ್ಣ
ಬ್ರಹ್ಮೇತಿಯು ತಾನಿವನ ಸಂಗದಿ ಭವಭವತಿರುಗುವುದ ಬಿಡದಣ್ಣ
ಸಮ್ಮತದಲಿ ಚಿದಾನಂದ ಹೊಂದಿಯೆ ಸೀಮಂತಿನಿಯ ಬಿಡಬೇಕಣ್ಣ ೩

## ೧೨೧

ಕುಲವೇನೆಂತು ಹೇಳಲಿ ಯೋಗೀಶನ
ಕುಲವೇನೆಂತು ಹೇಳಲಿ
ಕುಲವ ಕೇಳುತಿಹ ಕತ್ತೆಯ ಮಗನಿಗೆ ಪ

ಬಲಿದು ಆಧಾರವನು ಕುಂಬಕದೊಳು ನಿಲಿಸಿ ವಾಯುವನು
ನೆಲೆಯನು ಹತ್ತಿಸಿ ನೆಲೆಯಾಗಿ ನೆಲೆಸಿ
ನೆಲೆಯೊಳು ಕುಳಿತಿಹ ಮಣ್ಯ ಪುರುಷನಿಗೆ ೧

ಜಾಗ್ರತದಿ ಸ್ವಪ್ನವನು ಸುಷುಪ್ತಿಯು ಸಹ
ನಿಗ್ರಹಿಸೆಲ್ಲವನು ಸ್ವರ್ಗದ ಮೇಲೆ ಮಹಾ ಸ್ವರ್ಗವಿರಲು
ಸುಸ್ವರ್ಗದಿ ನೆಲೆಸಿಹ ಭರ್ಗನಾದವಗೆ ೨

ಎಣಿಕೆಯ ಜನ್ಮವನು ಕಳೆದು ಮುಂದೆ
ಕ್ಷೀಣಿಸಿ ಪ್ರಾರಬ್ಧವನು ತ್ರಿಣಯನನಾಗಿ ದಿನ
ಮಣಿಯಾಗಿ ಕಣಿಯಾಗಿ
ಗುಣಕಗೋಚರ ಚಿದಾನಂದನಾದವನಿಗೆ ೩

## ೧೨೨

ಕೊಡವನು ಹೊರಲಾರೆನೆ ಅಕ್ಕ
ಕೊಡವನು ಹೊರಲಾರೆನೆ
ಕೊಡವನು ಹೊರಲಾರೆ ಕಷ್ಟಪಡಲಾರೆ
ಕೊಡವನು ಒಡೆದರೆ ಕಡೆಹಾಯುವೆನೆ ಪ

ತಿಳಿಯಲು ಒಂಭತ್ತು ಮೂರ್ತಿ ಕೊಡನೆ
ತೊಳೆಯುವ ನಿತ್ಯವು ತುಂಬಿಹ ಕೊಡನೆ
ಹೊಲಸಿನ ಹೊದಿಕೆಯ ಹೊದ್ದಿಹ ಕೊಡನೆ
ತೊಳೆದರು ನಿತ್ಯ ಶುಚಿಯಾಗದ ಕೊಡನೆ ೧

ರೂಪು ದಿನದಲಿ ಮಾಸಿಹ ಕೊಡನೆ
ಆಪತ್ತಿನಿಂದ ನರಳುವ ಕೊಡನೆ
ಪಾಪದ ಪುಂಜದ ಪಡಿಶಂಟು ಕೊಡನೆ
ಜೋಪಾನ ಮಾಡಲು ಜರಿವಾ ಕೊಡನೆ ೨

ಎಲ್ಲಿಂದ ಬಂದಿತೋ ಎನಗೀ ಕೊಡವು
ಎಲ್ಲಿಯ ಪಾಪಿಯು ಮಾಡಿದ ಕೊಡವು
ಬಲ್ಲ ಚಿದಾನಂದನ ಮರೆಸುವ ಕೊಡವು
ಬಾಳನು ಕೊಡಿಸುವ ಸತಿಯೆಂಬ ಕೊಡವು ೩

## ೧೨೩

ಕೋಲನ್ನ ಕೋಲೇ ಕೋಲೇ ಕೋಲನ್ನ ಕೋಲೇ
ಸದ್ಗುರುವ ಬಲಗೊಂಬೆ ಕೋಲನ್ನ ಕೋಲೆ ಪ

ನಾಯಿಗೋಣನೆ ಮುರಿದು ನಾಗಾರ ಇಲಿ ತಿಂದು
ಹೋಯಿತೇ ಕಣ್ಣು ಕಾಗೆಯದು ಕೋಲನ್ನ ಕೋಲೆ ೧

ಕಷ್ಟದ ಹದ್ದನೆ ಬಡಿದು ಇಷ್ಟವಿಲ್ಲದೆ ಗುಡ್ಡವನೇರಿದವನ ನರಿ
ಸೂಚಿಸಿತೇ ಕೋಲನ್ನ ಕೋಲೆ ೨

ಆನೆಯ ಅಣುನುಂಗಿ ಅಡರಿತೇ ಮೇಲಕೆ
ಕೋಣನ ಕೋಗಿಲೆ ನುಂಗಿತೇ ಕೋಲನ್ನ ಕೋಲೆ ೩

ಊದಿತ್ತು ಓಲೆಯು ಒಂಭತ್ತು ಮಡಕೆಗೆ
ಹಾದಿಯಾಯಿತೇ ನಡುವಣ ಮಾರ್ಗ ಕೋಲನ್ನ ಕೋಲೇ ೪

ಕದವನೆ ತೆರೆದು ಕಳ್ಳರ ಬಲಿಕೊಟ್ಟು
ಮೊದಲಗಿತ್ತಿಗೆ ಮೂಗುತಿಯಿಟ್ಟೆ ಕೊಲನ್ನ ಕೋಲೇ ೫

ಬೆಳುದಿಂಗಳು ತುಂಬಿ ಬೆಳ್ಳಿಯ ತೆರೆಯೆದ್ದು
ಕೊಳವುಕ್ಕಿ ಕಮಲ ಕಳೆಯೇರೆ ಕೋಲನ್ನ ಕೋಲೇ ೬

ಓಡಿಲಗಲ ಮಾಡಿ ಉಣ್ಣದೂಟವುಂಡು
ಓಡುವ ಹಾರುವನ ಕಟ್ಟಿಹಾಕಿ ಕೋಲನ್ನ ಕೋಲೆ ೭

ಕೋತಿಯು ಸತ್ತಿತೇ ಕೊಡವೀಗ ಒಡೆಯಿತೇ
ಜೋತಿಯು ಒಳಗ್ಹೊರಗೆ ಬೆಳಗಿತೇ ಕೋಲನ್ನ ಕೋಲೆ ೮

ಮುದುಕಿಯನೆ ಕೊಂದು ಮರವನೆ ಮುರಿದೊರಗಿ
ಚಿದಾನಂದ ಬ್ರಹ್ಮ ತಾನಾಯಿತೇ ಕೋಲನ್ನ ಕೋಲೆ ೯

## ೧೨೪

ಕೋಲು ಕೋಲು ಕೋಲು ಕೋಲೇ
ಕೋಲೇ ಕೋಲನ್ನ ಪ

ಆಧಾರವನೆ ಮೆಟ್ಟಿ ಚಕ್ರಾರ ಭೇದಿಸಿ
ನಾದದ ನಾದ ಸುನಾದವ ಕೇಳಿ
ಶೋಧಿಸಿ ಸುಷುಮ್ನ ಮಾರ್ಗ ಮನೆಯ ಪೊಕ್ಕು
ಮೋದಿ ಬೆಳಗಿನೊಳ ಬೆಳಕು ತಾನಹುದೆ ಹಟ ೧

ಪ್ರಾಣಾಪಾನವು ಕೂಡಿ ಸರ್ಪವನೆಬ್ಬಿಸಿ
ಜಾಣತನದ ನಾಗ ಸ್ವರವನೂದಿ
ಮಾಣದೆ ಮುತ್ತುಗಳುದುರುವ ಬಯಲಲಿ
ಕೇಣವಿಲ್ಲದೆ ಆಡಿಪುದೆ ಕುಂಡಲಿಯೋಗ ೨

ಪೀಕುತ ನಾಲಗೆ ಕ್ಷೀರಾಹಾರದೊಳಿದ್ದು
ನೂಕುತಂಗಲದೊಳು ರಸನವನು
ತೇಕ ನಿಲ್ಲಿಸಿ ನಾಲಗೆಯಲಮೃತವನ್ನುಂಡು
ಮೂಕ ಸಕ್ಕರೆ ತಿಂದ ತೆರದಲಂಬಿಕ ಯೋಗ ೩

ಷಣ್ಮುದ್ರೆ ಹಿಡಿದು ಷಡಂಗುಲದಲಿ ಒತ್ತಿ
ಕಣ್ಣ ಅಂತರ್ಯದಿ ದೃಷ್ಟಿಯಿಟ್ಟು
ಹುಣ್ಣಿಮೆ ಚಂದ್ರನ ಕಳೆಯ ಬೆಳಗಿನೊಳು
ಥಣ್ಣಗೆ ಥಳ ಥಳಿಸುವುದದು ಹಟ ರಾಜ ೪

ವಾಯುವ ಸಮನಿಸಿ ರೇಚಕ ಪೂರಕದಿಂದ
ಸಾಯಾಸದಲಿ ಕುಂಭಕವ ನಿಲ್ಲಿಸಿ
ಬಾಯಿ ಮಾಡುವ ಸುನಾದವ ಲಕ್ಷಿಸಿ
ಹಾಯಿ ಎಂದೆನಿಪ ಸುಖಹೊಂದೆ ಲಯಯೋಗ ೫

ದೃಷ್ಟಿಯರ್ಧವನೀಗ ಮುಚ್ಚಿ ಸದ್ಗುರುವಾಗಿ
ದೃಷ್ಟಿಸಿ ತನ್ನನೆ ನೋಡುತಿರೆ
ಸುಟ್ಟು ಜೀವತ್ವವ ದೇಹಭಾವವ ಮರೆತು
ಮುಟ್ಟಿ ಬ್ರಹ್ಮದುದೆ ಅದುವೆ ಸದ್ಗುರು ಮಾರ್ಗ ೬

ಹೊರಗೊಂದು ಆಗದೆ ಒಳಗೊಂದು ಆಗದೆ
ಹೊರಗೆ ಒಳಗೆ ತಾನೆ ತಾನೆಯಾಗಿ
ಗುರು ಚಿದಾನಂದನು ಸಹಜ ತೋರುತ ಸರ್ವ
ಪರಮ ಮಂಗಳ ಸಾಕ್ಷಿಯದು ರಾಜಯೋಗ ೭

## ೧೨೫

ಗುಡುಗುಡಿ ಭಾರಿ ಗುಡುಗುಡಿ
ಗುಡುಗುಡಿ ಪಡೆಯಿರಿ ಗುರುಪುತ್ರರಾದವರು ಪ

ಆಸನ ನಳಿನವೆಂಬ ಸಿಂಬೆಯ ಮಾಡಿ
ಭೂಷಣ ಶರೀರವ ಕಾಯ ಮಾಡಿ
ಭಾಸುರ ಭಕ್ತಿ ಎಂದೆಂಬ ನೀರನೆ ಹೊಯ್ದು
ಸುಷುಮ್ನವೆಂಬ ಸೂಲಂಗಿಯನೆ ಹಾಕಿ ೧

ತ್ರಿಕೂಟವೆಂದೆಂಬ ತ್ರಿವಿಧ ಮೂಲೆಯ ಚೊಂಗೆ
ಭೂತಲದ ಹಮ್ಮೆಂಬ ತೊಪ್ಪಲು
ಸಾಕಾರ ಗುರುವೆಂಬ ಬೆಂಕಿಯನೆ ಹಾಕಿ
ಏಕಚಿತ್ತವೆಂಬ ಮುಚ್ಚಳವನೆ ಮುಚ್ಚಿ ೨

ಸೋಹಂ ಎಂದೆಂಬ ಕೊಳವೆಯನೆ ಹಚ್ಚಿ
ಬಹ ಪೂರಕ ಸೂರಿಯನೆ ಸೇದುತ
ಆಹ ರೇಚಕವೆಂಬ ಹೊಗೆಯನೆ ಬಿಡುತ
ಮಹಾ ಕುಂಭಕವೆಂಬ ಉಸುರನೆ ಹಿಡಿಯುತ ३

ಘುಡು ಘುಡು ಎಂದೆಂಬ ಮೇಘದ ನಾದವನು ನುಡಿಸೆ
ಸುಡು ಮಾಯೆಯೆಂದು ಥೂ ಎಂದು ಉಗುಳುತ
ಬಿಡಬಾರದು ಇದು ನಿತ್ಯವೆಂದೆನುತ
ಅಡಿಗಡಿಗೆ ಊದುತ್ತ ಉರಿಯ ಎಬ್ಬಿಸುತ ೪

ಹಾರಿತು ಬ್ರಹ್ಮಾನಂದವೆಂದೆಂಬ ಹರಳು
ಏರಿತು ಪೂರ್ಣಾನಂದದ ಲಹರಿ
ಜಾರಿತು ತನುಮನವೆಲ್ಲ ಮರೆತು ಚಿತ್ತ
ಸೇರಿತು ಚಿದಾನಂದನೊಳಗೆ ಲಯಿಸಿ ಕೂಡಿ ೫

## ೧೨೬

ಗುಮ್ಮವ ನೋಡಿರೋ ಮೂಲಮಾಯೆ ಗುಮ್ಮವ ನೋಡಿರೋ
ಗುಮ್ಮವು ಹೀಗೆಂದು ಶತಕೋಟಿ ಬ್ರಹ್ಮರು ಆಗಿವೆ
ಗುಮ್ಮವ ಹೀಗೆಂದು ಗುರುತರಿವರಿಲ್ಲಯ್ಯ ಪ

ಇಲ್ಲದೆ ತಾನೀಗ ತೋರುವ ಗುಮ್ಮ
ಎಲ್ಲ ಲೋಕತಾನೆ ಆಗಿಹ ಗುಮ್ಮ
ಗೆಲ್ಲುವೆನಗೆ ಗೆಲುವಾಗದ ಗುಮ್ಮ
ಒಳ್ಳೆ ಒಳ್ಳೆಯವರನು ಅಂಜಿಪ ಗುಮ್ಮ ೧

ಏನು ಜ್ಞಾನವ ನೋಡೆ ಹೋಗುದು ಗುಮ್ಮ
ಏನುಸಾಧನೆಮಾಡೆ ಎತ್ತದ ಗುಮ್ಮ

ಮಾನಿನಿ ಸುತ ಸಂಪತ್ತಾದ ಗುಮ್ಮ
ನಾನಾ ಭವವು ಆಗಿ ತೊಳಲಿದ ಗುಮ್ಮ ೨

ತಿಳಿವೆ ನೆಂದರೆ ತಿಳಿಗೊಡದು ಗುಮ್ಮ
ತಿಳಿದರೆ ತನ್ನೊಳಗಡವುದು ಗುಮ್ಮ
ಬಲು ಚಿದಾನಂದ ಗುರುವಿನಲಿ ಗುಮ್ಮ
ಹೊಳೆ ಹೊಳೆದು ತೋರಿಪುದು ಗುಮ್ಮ ೩

## ೧೨೭

ಗುರು ಎಂಥಾ ಗಾರುಡಿಗ
ಗುರುವಿನ ನಂಬಿ ಗುಣವೆಲ್ಲ ಕಳಕೊಂಡೆ ಪ

ಶರಣು ಮಾಡೆಂದರೆ ಶರಣು ಮಾಡುತ್ತಲಿರ್ದೆ
ಕರದಲ್ಲಿ ಏನಿತ್ತೋ ಜವೆಯ ಬೂದಿ
ಶಿರದ ಮೇಲೆನ್ನ ಮೈಮೇಲೆ ಎಳೆಯಲು ಶರೀರವ
ಮರೆತೆನೆ ಇದಕೆ ಸಾಕ್ಷಿಯಾದನೆ ಗುರು ೧

ಆರು ಇಲ್ಲದುದ ನೋಡಿ ಬೇರೆನ್ನ ಕರೆದೊಯ್ದು
ಮೋರೆಯನು ಕಿವಿಯೊಳಗಿಟ್ಟು ಮಂತ್ರಿಸಿದ
ನಾರಿ ಬದುಕು ಮನಮಕ್ಕಳನೆಲ್ಲವ
ಸೇರಿ ಸೇರದಂತೆ ಮಾಡಿದನೆ ಗುರು ೨

ಭವಗೇಡಿ ಕುಲಗೇಡಿ ಸಂಗಗೇಡಿಯಾದೆ
ಇವನ ವಿಶ್ವಾಸದ ಫಲದಲಿಂದ
ಇವನ ಮೇಲೆ ಎನ್ನ ವ್ಯಾಕುಲ ಹತ್ತಿದೆ
ವ್ಯವಹಾರವೆಂಬುದು ಎಡವಟ್ಟಾಯಿತು ೩

ಮಂತ್ರಿಸಿದ ಕ್ರಿಯೆ ಮರಳಲೀಯದೆ ಎನ್ನ
ಮಂತ್ರ ತಂತ್ರಕ್ಕದು ಬಗ್ಗಲಿಲ್ಲ
ಮಂತ್ರದ ಮಹಿಮೆಯು ಮಹಾಮಹಿಮೆಯು
ಮಾಂತ್ರಿಕರೊಳಗೆ ದೊಡ್ಡವನಹುದೋ ಗುರು ೪

ಇವನ ನಂಬಿದ ಮೇಲೆ ಇವನಂತಲ್ಲದೆ
ಭುವನಕ್ಕೆ ತಿರುಗಿ ತಾ ತಾರೆನೆ
ವಿವರಿಸೆ ಹುರುಳಿಲ್ಲ ಹೇಳಿ ಕೇಳೋದೇನು
ಭುವನ ರಕ್ಷಕ ಚಿದಾನಂದನೆ ಗುರು ೫

## ೧೨೮

ಗುರುನಾಥ ಗುರುನಾಥ ಹೇಳಿದ
ಮಾತು ಮಾತೆನ್ನ ಬಹುದು ಮಾತುವೊಂದೇ ಪ

ವೇದಕ್ಕೆ ನಿಲ್ಲದು ವಿವರಕ್ಕೆ ತೋರದು
ಆದಿ ಪುರಾಣದ ಅರ್ಥ ಅರ್ಥ ಅದು
ವಾದಕ್ಕೆ ದೂರದು ಕರವಶವಾಗದು
ಸಾಧಿಸಿ ತನಗೆ ತಿಳಿದು ಹೇಳಿದ ಮಾತು ಮಾತು ವೊಂದೇ ೧

ಮೂರರ ನಡುವದು ಮೂಲವೆ ತಾನದು
ಧೀರ ಧೀರರೆಲ್ಲ ದಿಟ್ಟಿಪುದು
ಬೇರೆ ಮತ್ತಿಲ್ಲದು ಬೆಗಡಾಗಿ ಇಹುದು ೨

ಸಾರಾಯದಿಂದೆನಗೊಲಿದು ಹೇಳಿದ ಮಾತು ಮಾತುವೊಂದೇ
ಮಾತಿನ ಮಹಿಮೆಯ ಮತ್ತೇನ ಹೇಳಲಿ
ಪ್ರೀತಿ ಎಂಬವೆಲ್ಲ ಪೀಡೆಯಾದವು
ಭೂತನಾಥ ಚಿದಾನಂದ ಭೂಪತಿಯಾದ
ಈ ತೆರದಲಿ ತಾನಿಂತು ಹೇಳಿದ ಮಾತು ಮಾತುವೊಂದೇ ೩

## ೧೨೯

ಘಂಟಾನಾದವ ಕೇಳೋ ಮುಕ್ತ
ಘಂಟಾನಾದವ ಕೇಳೋ
ಘಂಟಾನಾದವು ಘಣ ಘಣವೆನಲು
ಅಂಟಿ ಕೊಳ್ಳದೆ ಲೌಕಿಕ ಸುಖಕೆ ೧

ಈಷಣ ತ್ರಯಗಳು ಎಲ್ಲವು ಕೆಟ್ಟು
ಪಾಶವೆಂಟನು ಎಲ್ಲವ ಸುಟ್ಟು
ವಾಸನೆ ಹದಿನೆಂಟನು ಕಳಚಿಟ್ಟು
ಕ್ಲೇಷ ಪಂಚಕಗಳು ಹುಡಿಯಿಟ್ಟು ೧

ಅರಿಗಳು ಅರುವರ ತಲೆಯನೆ ಹೊಯ್ದು
ಕರಣ ನಾಲ್ವರ ಕಾಲನೆ ಕೊಯ್ದು
ಹರಿವಾ ಹತ್ತರ ನೆತ್ತಿಗೆ ಹೊಯ್ದು
ಮೆರೆವಾವರಣ ಏಳನೆ ಮೇದು ೨

ಘಂಟಾನಾದದ ಇಂಪನಾಲಿಸು
ಎಂಟು ಮೂರ್ತಿಗಳೊಡೆಯನಹೆ
ಕಂಟಕಹರ ಚಿದಾನಂದ ಬ್ರಹ್ಮವು
ತಾನಾಗಿಯೇ ನೀ ನಿಜ ಏರುವೆ ೩

## ೧೩೦

ಚರಣವನೀಗ ಹೊಂದಬೇಡ ಕೇಡಿಗ
ಗುರುವಿನ ಚರಣವನೀಗ ಹೊಂದಬೇಡ ಪ

ಜಾರಣ ಮಾರಣ ಬೋಧಿಸಿ ಗುರುವ
ಜೀವನ ನೀಗಲೆ ತಿನ್ನುವ ಗುರುವ

ಕಾರಣಿಕವನೆ ನುಡಿಯುವ ಗುರುವ
ಕಾಮಿತವನೆ ಹೇಳುವ ಗುರುವ ಕೇಡಿಗ ಗುರುವ ೧

ಮಹಿಮೆ ಗಿಹಿಮೆ ತೋರುವ ಗುರುವ
ಮರಳಿ ಜನ್ಮಕೆ ತರುವ ಗುರುವ
ದಹಿಸಿ ಮನೆಯ ಹೋಹ ಗುರುವ
ದಂಡಣೆಯ ಗುರುವ ಕೇಡಿಗ ಗುರುವ ೨

ಹರಿದು ತಿನ್ನುವ ಮೋಸದ ಗುರುವ
ಬರಕತವಿಲ್ಲದ ಗುರುವ
ಕರಕೊಳ್ಳುತಲಿರುವ ಕರ್ಮಿತಾ
ಗುರುವ ಕೇಡಿಗ ಗುರುವ ೩

ಶಾಂತಿ ಶಮೆ ದಮೆಗಳು ದೊರಕದ ಗುರುವ
ಸ್ಮೈರಣೆ ಎಂದಿಗು ನಿಲುಕದ ಗುರುವ
ಕರುಣೆಯ ತಾತೋರದ ಗುರುವ ದಯವಿಲ್ಲದ
ಗುರುವ ಕೇಡಿಗ ಗುರುವ ೪

ಆಸೆಯನು ಬಿಡದಿಹ ಗುರುವ
ಅಂಗದ ಹಸಿವನು ತಿಳಿಯದ ಗುರುವ
ಬಾಸ ಚಿದಾನಂದನ ನರಿಯದ ಗುರುವ
ಬ್ರಹ್ಮನಾಗದ ಕೇಡಿಗ ಗುರುವ ೫

## ೧೩೧

ಜಯತು ಜಯತು ಜಯತು ಸತ್ಯ ಸನಾಥ
ಜಯತು ನಿಜ ನಿರ್ಭೀತ
ಜಯತು ಸದ್ಗುರುನಾಥ ಜಯತು ಅವಧೂತ
ಜಯತು ಜಯತು ಪ

ಭುಗು ಭುಗಿಸೆ ಪ್ರಭೆ ಛಾಯೆ ಝುಗಝುಗಿಸೆ ಖಳೆ ಮಾಯೆ
ನಿಗಿನಿಗಿಸೆ ಶತಸೂರ್ಯ ಹೊಳೆವ ಮಧ್ಯ
ಧಗಧಗಧಗಿಪ ಶಶಿ ಪ್ರಭೆಯು ಸವಿದುಂಬಮೃತಸುಧೆಯನ್ನು
ತಗತಗತಗಿಪ ನಿತ್ಯ ನಿರ್ವಿಕಾರ ೧

ಪಾಲಿಸಗಣಿತ ಮಹಿಮ ಪಾಲಿಸಕ್ಷಯ ರೂಪ
ಪಾಲಿಸೈ ನಿಷ್ಕಾಮ ನಿರ್ವಿಕಲ್ಪ
ಪಾಲಿಸನಂತ ಪರಮಾತ್ಮ ಹರ ನಿರ್ಲೇಪ
ಪಾಲಿಸೈ ಚಿದ್ರೂಪ ಸತ್ಯ ಸಂಕಲ್ಪ ೨

ಶರಣು ನಿತ್ಯಾನಂದ ಶರಣು ನಿರ್ಗುಣ ಸಾಂದ್ರ
ಶರಣು ಪ್ರಭೆಯ ಖಂಡ ಸಹಜ ಆನಂದ
ಶರಣು ಭವಭವ ದುರಿತ ದಾವಾಗ್ನಿ ನಿಜ ಬಾಧ
ಶರಣು ಭಕುತರ ವಂದ್ಯ ರಾಜಯೋಗೀಂದ್ರ ೩

ವಂದಿಪೆ ಚಿದಂಬರ ನಿರಾಮಯ ನಿರಪೇಕ್ಷಾ
ವಂದಿಸುವೆ ಆರೂಢ ಪರಮ ಆಧ್ಯಕ್ಷ
ವಂದಿಸುವೆ ನಿಶ್ಚಲ ಪರಬ್ರಹ್ಮ ಘನರಕ್ಷಾ
ವಂದಿಸುವೆ ಗುಣಾತೀತ ದಕ್ಷ ನಿಜ ಮೋಕ್ಷ ೪

ನಿರುಪಮ ನಿಜಾನಂದ ನಿಸ್ಪೃಹನೆ ನಿಶ್ಚಿಂತ
ಪರಮ ಪರತರವಸ್ತು ನಿರ್ಭಯಾನಂದ
ಗುರುತರ ನಿರಂಜನ ನಿರಾಧಾರ ನಿರ್ಲಿಪ್ತ
ಗುರು ಚಿದಾನಂದ ಅವಧೂತ ಪ್ರಖ್ಯಾತ ೫

## ೧೩೨

ಜೀವನ ಶಟವಿ ಹೇಳುವೆ ಕೇಳು
ಜೀವನವೆಂಬುವ ಮಾತೇ ಶಟವಿ
ದೇವ ಚಿದಾನಂದ ನೀನಿಹೆಶಟವಿ ಎಲೆ ಜೀವನ ಶಟವಿ ಪ

ನಾರಿಗೆ ಒಗೆತನವೊಂದೇ ಶಟವಿ
ಮೋರೆಯ ನಾದರೆ ಮುರುಕಿಪ ಶಟವಿ
ಮೂರುದಿನದ ಒಗೆತನ ಶಟವಿ ಎಲೆ ಜೀವನ ಶಟವಿ ೧

ಆರ ಸಂಗಡ ಜಗಳವು ಶಟವಿ
ಆರನಾದರು ಅಣಕಿಪೆ ಶಟವಿ
ಊರು ನನ್ನದೆಂಬ ಶಟವಿ ಎಲೆ ಜೀವನ ಶಟವಿ ೨

ನನ್ನದು ನನ್ನದು ಎಂಬೆ ಶಟವಿ
ನಿನ್ನ ತಂದೆಯು ಹೋದನೆ ಶಟವಿ
ನನ್ನದೆನೆ ನಾಚಿಕೆ ಬಾರದು ಶಟವಿ ಜೀವನ ಶಟವಿ ೩

ಗುರು ಹಿರಿಯರ ನೀ ನಿಂದಿಪೆ ಶಟವಿ
ಗುಣ ನಿನಗೇನೇನಿಲ್ಲವೊ ಶಟವಿ
ಬರಿದೇ ಬಯಲಿಗೆ ಹಂಬಲಿಪೆ ಶಟವಿ ಎಲೆ ಜೀವನ ಶಟವಿ ೪

ಶರೀರವು ಸ್ಥಿರವಲ್ಲವು ಶಟವಿ
ತೆರಳುವೆ ನೀನು ಬೆಳಗಿಗೆ ಶಟವಿ
ತರಳನ ಆರ ಕೈಯಲಿಟ್ಟೆ ಶಟವಿ ಎಲೆ ಜೀವನ ಶಟವಿ ೫

ನಿನ್ನ ಸಂಸಾರ ಸುಳ್ಳಿದು ಶಟವಿ
ನೀರಲಿ ಅಕ್ಷರ ಬರದಂತೆ ಶಟವಿ
ನಿನ್ನನು ಏನಂತ ಕಂಡಿಹೆ ಶಟವಿ ಎಲೆ ಜೀವನ ಶಟವಿ ೬

ನಿನಗೆ ಅನಂತ ಜನ್ಮವು ಶಟವಿ
ನೀನು ಹೆಣ್ಣು ಗಂಡಲ್ಲ ಶಟವಿ
ನಿನಗೆ ಹೇಳಲು ಹೆಸರಿಲ್ಲ ಶಟವಿ ಎಲೆ ಜೀವನ ಶಟವಿ ೭

ಪಾಪದ ವಿದ್ಯದ ಮೂಲದಿ ಶಟವಿ
ರೂಪಿಗೆ ಬಂದಿಹೆ ನೀನೀಗ ಶಟವಿ
ಆ ಪರಿಚಂದ್ರನು ಹೊಳೆದಂತೆ ಶಟವಿ ಎಲೆ ಜೀವನ ಶಟವಿ ೮

ಭೂಪ ಚಿದಾನಂದನ ಹೊಂದೆಲೋ ಶಟವಿ
ರೂಪು ವಿರೂಪು ಆಗುವಿ ಶಟವಿ
ದೀಪದೊಳು ನಿಜದೀಪ ನೀ ಶಟವಿ ಎಲೆ ಜೀವನ ಶಟವಿ ೯

## ೧೩೩

ಜೀವನು ಹೋಗಿ ನಿರಂಜನ
ಪಂಕ್ತಿಗೆ ಕೂರಲು ಅನಬೇಕೇನ
ಜೀವನೆ ಬ್ರಹ್ಮವು ಸತ್ಯವೆಂದರಿ
ಇದಕೇನಿಲ್ಲನುಮಾನ ಪ

ಗುಲಾಮ ಹೋಗಿ ಸದರಿಗೆ ಕೂರಲು
ಗುಲಾಮನನ ಬೇಕೇನ
ಗುಲಾಮನಹುದೇ ಸದರಿಗೆ ಕುಳಿತವ
ಗುರು ಅವ ಸಂಶಯವೇನ ೧

ಗೌಡಿಯು ಅರಸಗೆ ಪಟ್ಟದರಸಿಯಾಗೆ
ಗೌಡಿಗೆ ಅನಬೇಕೇನ
ಗೌಡಿಯೆ ಪಟ್ಟದರಸಿಯಾಗಲಿಕೆ
ಗೌಡಿಯೆ ಅರಸು ಅನಮಾನೇನು ೨

ನರ ಚಿದಾನಂದ ಸದ್ಗುರುವನು ಹೊಂದಲು
ನರನನು ಅನುಬೇಕೇನ
ನರಚಿದಾನಂದ ಸದ್ಗುರು
ತಾನಲ್ಲದೆ ಯೋಚನೆ ಮಾಡಲಿಕೇನು ೩

## ೧೩೪

ಜೀವನ್ಮುಕ್ತನೆ ಇದ ಮಾಡು ನಿನಗುಂಟೆ ಜೋಡು
ದಿವಸದಿಂದಲಿ ದೃಢನಾಗಿ ಸಾಧಿಸು
ಕೇವಲ ಶಿವನೀನಾಗುವಿ ಆಗುವಿ ಪ

ಏರಿಸು ವಾಯುವನು ಏರಿಸಿದ ಬಳಿಕ
ಪೂರಿಸು ಕುಂಭವನು ಘಳಿಗಿಂತಿರಲಲ್ಲಿ
ಭೇರಿಯ ಕಹಳಾರವ ಮೃದಂಗವ
ಸಾರಿಯೆ ಕೇಳುತ ಶ್ರಮವನು ಹರಿಸುತ ೧

ಆರು ನೆಲೆಗೆ ಮುಟ್ಟಿನಿಲ್ಲು ನಿಂತ ಬಳಿಕ
ಕಾರಣ ಮೃಡನಾಳಪೊಕ್ಕು ಮರವೆಂದು ಕಳೆದಿಕ್ಕು
ವಾರಿಯಮೃತಧಾರೆ ತ್ರಿವೇಣಿಯ
ಸಾರಸನದಿಯಲಿ ಮುಳುಗುತ ಮುಳುಗುತ ೨

ಚಂದ್ರಮಂಡಲ ಎದುರಲಿ ಇರಲು ನೋಡುತಲಿ
ಮುಂದೆ ಜೋತಿರ್ಮಯವಿರಲು ಬ್ರಹ್ಮವೆ ತಾನಿರಲು
ಇಂದ್ರಾದಿಗಳಿಗಳವಡದಿಹ ಸ್ಥಾನವಾ
ನಂದದೆ ಎಠೈ ಗುರು ಕೃಪೆಯಿಂದಲಿ ೩

ಕಾಮ ಕ್ರೋಧಗಳವು ನಾಶ ಜನ್ಮ ನಿರ್ನಾಶ
ಧೂಮವಾಗುವವು ಆಶಾ ಎಲ್ಲ ನಿರ್ದೋಷ
ಕಾಮಿತ ಕರ್ಮ ಅವಿದ್ಯೆಯನುಳಿದು
ತಾಮರ ಸಾಧಿಪ ನಂದದಿ ಬೆಳಗುತ ೪

ಯೋಗವ ಸಾಧಿಸು ಇದು ನಿತ್ಯ ಆಗುವುದು ತಥ್ಯಾ
ಯೋಗಿ ಜನಕೆ ಇದು ಪಥ್ಯಾ ಸತ್ಯವಿದು ಸತ್ಯ
ಭೋಗೈಶ್ವರ್ಯದ ಮುಕ್ತಿಗಧಿಪತಿ
ಯಾಗು ಚಿದಾನಂದ ಗುರು ನೀನಾಗಿಯೆ ೫

## ೧೩೫

ತನ್ನ ತಿಳಿದು ತಾ ನಿರ್ಲಿಪ್ತನಾದವಗೆ ಇನ್ನೇನಿನ್ನೇನು
ತನ್ನ ತನ್ನೊಳು ಕಂಡು ತಾನಾದ ಮಹಾತ್ಮಗೆ ಇನ್ನೇನಿನ್ನೇನು ಪ

ನಾನು ನೀನೆಂಬ ಹಮ್ಮುಳಿದುಳಿದಾತಗೆ ಇನ್ನೇನಿನ್ನೇನು
ನಾನು ನೀನೇ ನಿಶ್ಚಯವೆಂದು ನಿಶ್ಚಲನಾದವಗೆ ಇನ್ನೇನಿನ್ನೇನು ।೧।

ಸರ್ವವನರಿತು ಸರ್ವವೆ ತಾನಾದವಗೆ ಇನ್ನೇನಿನ್ನೇನು
ಸರ್ವ ಸರ್ವವು ಆದ ಸರ್ವಾತ್ಮಗೆ ಇನ್ನೇನಿನ್ನೇನು ೨

ಮನದ ಮಾಟಗಳಿಗೆ ಮರುಳಾದವಗೆ ಇನ್ನೇನಿನ್ನೇನು
ಮನವು ತಾನಾದವಗೆ ಮನಕೆ ನಿಲುಕದವಗೆ ಇನ್ನೇನಿನ್ನೇನು ೩

ಸುಖ ದುಃಖಗಳಿಗೆ ತಾ ಸಾಕ್ಷಿಯಾದವಗೆ ಇನ್ನೇನಿನ್ನೇನು
ಸುಖ ದುಃಖ ತೋರದೆ ಸಮಮನನಾದವಗೆ ಇನ್ನೇನಿನ್ನೇನು ೪

ಆರು ಸ್ಥಾನವ ಬಿಟ್ಟು ಮೂರನಾಶ್ರಯಿಸಿದವಗೆ ಇನ್ನೇನಿನ್ನೇನು
ಆರು ಆರನೆ ಸುಟ್ಟು ಅಗಣಿತ ಮಹಿಮಗೆ ಇನ್ನೇನಿನ್ನೇನು ೫

ಎರಡನುಳಿದು ಮತ್ತೆರಡನು ಮರೆತವಗೆ ಇನ್ನೇನಿನ್ನೇನು
ಎರಡರೊಳು ತಾನೆಡಬಿಡದಿಪ್ಪಗೆ ಇನ್ನೇನಿನ್ನೇನು ೬

ಮುಟ್ಟು ಚಟ್ಟುಗಳ ಮುಗಿಸಿದಾತಗೆ ಇನ್ನೇನಿನ್ನೇನು
ಮುಟ್ಟು ಚಟ್ಟಲಿ ಅಡಗಿರುವಾತಗೆ ಇನ್ನೇನಿನ್ನೇನು ೭

ಸಕಲ ವಿಧವ ನೋಡಿ ಸಂತುಷ್ಟನಾದವಗೆ ಇನ್ನೇನಿನ್ನೇನು
ಸಕಲದಿ ಬೆರೆತು ಸಂಶಯವಳಿದಿಪ್ಪವಗೆ ಇನ್ನೇನಿನ್ನೇನು ೮

ಚಿದಾನಂದ ಗುರುವಿನ ಚಿತ್ತದಿ ಪಿಡಿದಾತಗೆ ಇನ್ನೇನಿನ್ನೇನು
ಚಿದಾನಂದ ಗುರುವಿನ ಚಿತ್ಸುಖಭರಿತಗೆ ಇನ್ನೇನಿನ್ನೇನು ೬

## ೧೩೬

ತಾನೆ ಬ್ರಹ್ಮಪುಟ್ಟಿರೆ ಮಾನವರೆದೆಂಬರಯ್ಯ
ತಾನೆ ತನ್ನ ತಿಳಿದು ನೋಡೆ ತಾನೆ ಚಿದಾನಂದ
ವಸ್ತು ತಾನೆ ಬ್ರಹ್ಮ ಪುಟ್ಟಿರೆ ಪ

ತಂದೆ ತಾಯಿಯೆಂಬುವರು ಒಂದನ್ನೂ ಮಾಡಲಿಲ್ಲ
ಇಂದು ಕಿವಿ ಮೂಗು ತಾಳಿ ಬಂದಿದೆ ಸಾಕ್ಷಾತ್ ವಸ್ತು
ತಾನೆ ಬ್ರಹ್ಮಯಿರುತಲಿದೆ ೧

ಭಾವ ಕಲ್ಪಿತವಲ್ಲದ ದೇವನೆ ತಾನಾಗಿರೆ
ದೇವತೆಯೆಂಬುದ ಮರೆತು ಕಲ್ಲದೇವರ ಪೂಜಿಪರಯ್ಯಾ
ತಾನೆ ಬ್ರಹ್ಮ ಇರುತಲಿರೆ ೨

ಕಾರಣಪುರುಷನಾಗಿ ದೇಹವನ್ನೇ ಧರಿಸಿರೆ
ಕಾರಣಪುರುಷನ ಬಿಟ್ಟು ಬೇರೆ ಧ್ಯಾನಿಸುವರಯ್ಯಾ
ತಾನೆ ಬ್ರಹ್ಮ ಪುಟ್ಟಿರೆ ೩

ವೇದಶಾಸ್ತ್ರಪುರಾಣದ ಓದೆಲ್ಲ ತಾನೆ ಇರೆ
ಓದನ್ನು ತಿಳಿಯದ ತಾವು ಓದಿ
ಓದಿ ಸಾವರಯ್ಯೋ ತಾನೇ ಬ್ರಹ್ಮ ಪುಟ್ಟಿರೆ ೪

ಇಂದು ಹರವಾಸರೆಂದು ಬಂಧ ಹೆಸರ ಮಾಡುತ
ಬಂಧ ಹರ ಚಿದಾನಂದಗೆ ಒಂದು ಕುತ್ತ ಎಣಿಸ
ರಯ್ಯೋ ತಾನೆ ಬ್ರಹ್ಮ ಪುಟ್ಟಿರೆ ೫

## ೧೩೭

ತಾರಕ ತಾರಕ ತಾರಕ ತಾರಕವೆಂಬ
ತವನಿಧಿಯನು ತಪಿಸುತಲಿದೆ ನೋಡಾ ಪ

ಮುಗಿಲಾಕಾರದಿ ಮೋಹರಿಸುತಲಿಹ ಮಿಂಚುಗಳನೆ
ಭುಗಿಲು ಭುಗಿಲು ಎನಿಸುವ ಕಳೆಗಳ
ಬುದು ಬದಗಳ ನೋಡ ೧

ಥಳಕು ಥಳಕು ಥಳಥಳನೆಂದೆಂಬ ಥರಗಳನದ ನೋಡ
ಬೆಳಕುಗಳಹ ಬಲು ಬೆಳಗನೆ ಬೆಳಗುವ ಭೇದಗಳನೆ ನೊಡ ೨

ತೋರುತಡುಗುವ ತೋರು ಕಿಡಿಗಳ ಕೋಟಿಗಳನೆ ನೋಡ
ಮೀರಿಯೆ ಮಿಣಿ ಮಿಣಿ ಮಿಣಿಕಿಪ ವಿಸರದ ಮಿಶ್ರಿಗಳನೆ ನೋಡ ೩

ಝಣಝಣರೆಂಬ ಝಾಗಟೆ ಮೊಳಗಿನ ಝೇಂಕಾರವ ನೋಡ
ಎಣಿಸಲು ಬಾರದ ಎಡೆದೆರಪಿಲ್ಲದ ಏಕಾರವ ನೋಡ ೪

ಸಾಗರ ಸುಖವನು ಸವಿಸವಿದುಣ್ಣುವ ಸಾಕಾರವೇ ನೋಡ
ಯೋಗಿ ಎನಿಪ ಚಿದಾನಂದನೊಲಿದ ಯೋಗಿಗೆ ಇದು ನೋಡ ೫

## ೧೩೮

ತುಂಬಿ ತುಂಬಿ ತುಂಬಿದೆ ಮುಕ್ತಿಯು
ತುಂಬಿದೆ ಮುಕ್ತಿಯು ತುಂಬಿದೆ ಮುಕ್ತಿಯು ತುಂಬಿ ಪ

ಧಡಧಡ ಧಡಿಸುತ ದಟ್ಟಣೆಯಿಂದಲಿ ದಯೆಗೈಯುತಲಿದೆ ತುಂಬಿ
ಎಡದೆರಹಿಲ್ಲದೆ ಏಕವೆ ಎನಿಸುತ ಎಲ್ಲೆಡೆ ತುಂಬಿದೆ ತುಂಬಿ ೧

ಅಂಬರದೊಳು ಚಿದಂಬರವೆನಿಸುವ ಅಂಬರತಾನಿದೆ ತುಂಬಿ
ಬಿಂಬದಿ ತೋರುವ ಬಿಂಬಂತೆಲ್ಲವನಿಂಬಿಡುತಿದೆ ತಾ ತುಂಬಿ ೨

ಜ್ಞಾನಾಮೃತ ರಸರಸವನೆ ಬೀರುತ ಜ್ಞಾನಕೆ ದೂರಿದೆ ತುಂಬಿ
ತಾನೆ ತಾನೆ ತಾನಾದ ಪುರುಷಗೆ ತಾನೆಯಾಗಿದೆ ತುಂಬಿ ೩

ನಾದದ ಮನೆಯಲಿ ನಾದದಿ ಮರೆಸುವ ನಾದದಿಬೆರೆತಿದೆ ತುಂಬಿ
ಭೇದಾಭೇದಗಳಹ ದೃಗ್‌ದೃಶ್ಯದ ಭೇದವ ಸಾಕ್ಷಿಪ ತುಂಬಿ ೪

ಇಂದು ಅಮೃತಕರ ಸೂಸುವ ತೆರದಲಿ
ಹೊಂದಿರುವವರನು ತಾತುಂಬಿ
ಮಂದಹಾಸ ಮಹಾಲೀಲಾತ್ಮಕ ಸಿಂಧು ಚಿದಾನಂದ ತುಂಬಿ ೫

## ೧೩೯

ತುಂಬಿಕೊಂಡಿರುತಿಹನೊಬ್ಬ ಜಗ
ವಿಂಬಿಲ್ಲದೆಲ್ಲವ ಸಕಲವೆಲ್ಲವ ತುಂಬಿ ಪ

ಆರರೊಳಗೆ ತುಂಬಿ ಅತ್ತತ್ತಲು ತುಂಬಿ
ಮೂರು ಠಾವಲಿ ತುಂಬಿ ಮೂರು ಮನೆ ತುಂಬಿ
ಬೇರೆ ಮೇಲಕೆ ತುಂಬಿ ಬೆಳಗಿನೊಳಗೆ ತುಂಬಿ
ಸಾರಾಮೃತದಿ ತುಂಬಿ ಸಾಕ್ಷಾತ್ಕಾರದಲಿ ತುಂಬಿ ೧

ಮನಸಿನೊಳಗೆ ತುಂಬಿ ಮನವರ್ತನದಿ ತುಂಬಿ
ತನುವಿನಲ್ಲಿಯೆ ತುಂಬಿ ಸರ್ವಾಯವ ತುಂಬಿ
ತನುತ್ರಯದಲಿ ತುಂಬಿ ತನುವಿನಲ್ಲಿಯೆ ತುಂಬಿ
ಘನ ಸುಖದಿ ತುಂಬಿ ೨

ಇಳೆಯ ಒಳಗೆ ತುಂಬಿ ಇಹಜಂಗಮದಿ ತುಂಬಿ
ಬಲು ಸ್ಥಾವರದಿ ತುಂಬಿ ಬಯಲಿನಲ್ಲಿಯೆ ತುಂಬಿ
ಕೆಳಗೆ ನಡುವೆ ತುಂಬಿ ಕೇವಲ ಕೊನೆಯ ತುಂಬಿ
ಚಲಿಸದಂದದಿ ತುಂಬಿ ಚಿದಾನಂದನೇ ತುಂಬಿ ೩

## ೧೪೦

ತೇರನು ನೀವು ನೋಡಿಲ್ಲ ತಿಳಿಪುವೆ ಸಡಗರವೆಲ್ಲ
ಚಾರು ಯೋಗಿಯು ನೋಡಿಲಿದು ಚಲನೆ ಮನುಜರಿಗೆ ಸಲ್ಲದು ಪ

ಆರು ಚಕ್ರದ ಆರುನೆಲೆ ಮೂರು ಅವಸ್ಥೆಗಳ ಮೂರುಗಾಲಿ
ಕುಂಡಲಿ ಎಂಬುದು ಕೀಲು ಚದುರಿನ ದಳಪಟ್ಟಿ ಮೇಲು ೧

ಸಹಸ್ರಾರವೇ ಕೊನೆಯ ಸ್ಥಾನ ಸ್ವಾಮಿಯ ಸಿಂಹಾಸನ
ಸೋಹಂ ಎಂದೆನಿಸುವ ಶಿಖರ ಸೊಗಸಿಂದಲಿಹುದು ಸುಪ್ರಕಾರ ೨

ಸ್ಥಾನ ಸ್ಥಾನಕೆ ಒಂದು ಬೊಂಬೆ ಸಡಗರ ಏನೆಂಬೆ
ಅನುರಾಗವೇ ಎಂಬ ಫಲವು ಆಶ್ಚರ್ಯ ತೇರಿನ ನಿಲುವು ೩

ಹೇಷೆ ಎಂಬುವೆ ಕೋಟಿ ಚಂದ್ರ ಹೊಡೆವ ನಾದವೆ ವಾದ್ಯ ಸಾಂದ್ರ
ಬಲುಹು ಆನಂದ ಸಲ್ಲಲಿ ಭಾಪು ಎನಲಿ ಸುಖದಲಿ ೪

ಇಡಾಪಿಂಗಳ ಮಿಣಿಗಳಿಂದ ಎಳೆವುದು ಗುರುದಯದಿಂದ
ಮೂಡಲಿಂದ ಪಶ್ಚಿಮಕ್ಕೆ ಗುರು ಚಿದಾನಂದನ ಸ್ಥಾನಕ್ಕೆ ೫

## ೧೪೧

ತೋರು ಶರೀರದೊಳಗಾತ್ಮನಾ ತೋರು ಶರೀರದೊಳಗೆ
ಸಾರ ನಿರ್ಗುಣ ನಿತ್ಯ ಶುದ್ಧನಾ ಪ

ಲೋಕಂಗಳ ಮಾಡಿರುವ ಲೋಕಕೆ ತಾನೆ ಗುರುವ
ಲೋಕವೇ ತಾನಾಗಿರುವ ಬಹು
ಲೋಕ ಲೋಕದ ಹೊರಗಿರುವ ದೇವನೇ ೧

ದೃಶ್ಯವೇ ತಾನೆನಿಪ್ಪ ದೃಶ್ಯವ ನೋಡುತಲಿಪ್ಪ
ದೃಶ್ಯಕೆ ಆನಂದಿಪ ಎಲ್ಲ ದೃಶ್ಯಕೆ ಆಧಾರವಿಪ್ಪನೇ ೨

ಬೋಧನೆ ತಾನಾಗಿರ್ದ ಬೋಧಾಬೋಧದ ಸಿದ್ಧ
ಬೋಧದಿ ತಾ ಬೆರೆದಿರ್ದಾ ಬರೆ–
ಬೋಧಾ ಬೋಧಂಗಳ ಹೊದ್ದದ ದೇವನೇ ೩

ನಾದದ ಮನೆಯಾಗಿಪ್ಪ ನಾದವ ಕೇಳುತಲಿಪ್ಪ
ನಾದದಿಂ ನಲಿದಿಪ್ಪ ಮಹಾನಾದನಾದಕೆ ಬೆರೆದಿಪ್ಪ ದೇವನೇ ೪

ನಿರುಪಮ ನಿರಾಲಂಬ ನಿರವಯ ನಿಶ್ಚಲಬಿಂಬ
ಶರಣರೊಳು ಬಲಗೊಂಬ ವರ
ಪರಮ ಗುರು ಚಿದಾನಂದ ದೇವನೇ ೫

## ೧೪೨

ದಣಿದು ಮಲಗಿದೆನು ನಾನು–
ದಣಿದು ಮಲಗಿದೆನು
ಮಣಿದೆ ಗುರುವಿಗೆ ಹಣಿದೆ ಶತ್ರುಗಳ
ತಣಿದೆ ರಕ್ತವ ಕುಣಿದೆ ತಲೆಗಳ

ಘಣ ಘಣ ಘಣ ಘಣ ನಾದವ ಕೇಳುತ
ಮಣಿಮಯ ಮಂಟಪ ಉನ್ಮನಿ ಬಯಲಲಿ ಪ

ತರಿಸಿ ತಾಪವನು ಕಾಲಲಿ ಒರೆಸಿ ಮಮತೆಯನು
ಹರಿಸಿ ಸಂಶಯ ಹುರಿಸಿ ದುರ್ಗುಣ
ಕೊರೆಸಿ ವ್ಯಸನವ ಜರಿಸಿ ಮದಗಳ
ಸುರಿ ಸುರಿ ಸುರಿವ ಸುಧಾ ಕಾರಂಜಿಯ
ಮೆರೆವ ಸಹಸ್ರಾರ ಚಪ್ಪರ ಮಂಚದಿ ೧

ಹೊಡೆದು ವಾಯುಗಳ ತುಂಡರಿಸಿ ಕ್ಲೇಶಗಳ
ಮಡಿಯೆ ಈಷಣವು ಕಡಿಯೆ ಕಲ್ಪನೆ
ಕೆಡೆಯೆ ಭ್ರಾಂತಿಯು ಒಡೆಯೆ ಶತ್ರುಗಳು
ಕಿಡಿ ಕಿಡಿಯುಗುಳುತ ವಿಷ ಮೂರ್ಧ್ನಿಯ
ಬಿಡಿ ಮುತ್ತುದುರುವ ಹಂಸತೂಲದಿ ೨

ಬಳಿದು ವ್ರತಗಳನು ಎಳೆದು ಮತಗಳನು
ತುಳಿದು ಗರ್ವವ ತೊಳೆದು ಶೋಕವ
ಮುರಿದು ರಾಗವ ಸೆಳೆದು ಮಾನವ
ಥಳಥಳ ಬೆಳುದಿಂಗಳಿನೊಳು
ಬಲು ಚಿದಾನಂದ ಬ್ರಹ್ಮವೇ ಆಗಿಯೆ ೩

## ೧೪೩

ದಶವಿಧ ನಾದವು ಭಕ್ತರಿಗೆ ಕೇಳುತಿದೆ
ದಶವಿಧ ನಾದವು ಭಕ್ತರಿಗೆ ಕೇಳುತಿದೆ
ದುಶ್ಮಾನರು ಇಬ್ಬಗೆಯಾಗಲು ದೆಸೆ ಬಿರಿಯಲು
ಯೋಗಿಯ ಕಿವಿ ಎರಡರಲಿ ಪ

ಛಿಣಿ ಛಿಣಿ ಎಂಬ ಚಿನ್ನಿನ ನಾದವು ಚಿತ್ಕೃತಿಯಾಗಿ ಚಿಮ್ಮುತಿರೆ

ಝಣಝಣವೆಂಬ ಝಿಲ್ಲಿಯ ನಾದವು
ಝೇಂಕಾರದಿ ಝೇಂಕರಿಸುತಿದೆ
ಎಣಿಕೆಯಿಲ್ಲದೆ ನಾಗಸ್ವರದ ಧ್ವನಿ
ಎಡೆದೆರೆಪಿಲ್ಲದೆ ಕೂಗುತಿದೆ
ಧಣಧಣ ಎನಿಪ ತಾಳನಾದವು ದಟ್ಟಣೆಯಾಗಿ ತುಂಬುತಿದೆ ೧

ಮೃಣು ಮೃಣು ಎನಿಪ ಮೃದಂಗ ನಾದವು
ಮುಂಕಾಟ್ಟಾಗಿಯೆ ನುಡಿಯುತಿದೆ
ತನನಾ ಎಂಬ ವೀಣಾಸ್ವರವು ತಂಪಾಗೆಲ್ಲವ ಮುಚ್ಚುತಿದೆ
ಘನಘನ ಎನುತಲಿ ಶಂಖನಾದವು
ಘಮ್ಮೆನ್ನುತಲಿ ಭೋರೆನುತಲಿದೆ
ಘಣಘಣ ಎನುತಲಿ ಘಂಟಾನಾದವು
ಘಂಟ್ಯಾಗಿಯೆ ಓಂ ಎನುತಲಿದೆ ೨

ಭೇರಿಯ ನಾದವು ಧಮಧಮ ಎನುತಲಿ
ಬಹಳಾಗಿಯೆ ಭೋಂಕರಿಸುತಿದೆ
ಘೋರದಿ ಮೇಘದ ನಾದವು ಘರ್ಜಿಸುತಿದೆ ಘುಡಿ ಘುಡಿಸುತಿದೆ
ನೂರಾರು ಸಿಡಿಲಂತೆ ನೂಕು ನುಗ್ಗಡಿಸುತಿದೆ
ವೀರ ಚಿದಾನಂದ ವಿಸ್ಮಯನಾಗಲು ವಿಚಿತ್ರದಿ ಬಾರಿಸುತಿದೆ ೩

## ೧೪೪

ದಶವಿಧ ನೌಬತ್ತಾಗುತದಣ್ಣ
ದಶವಿಧ ಸೌಬತ್ತಾಗುತದೆ
ದುಸುಮಾನರ ಎದೆ ಇಬ್ಬಗೆಯಾಗಲು
ದೆಸೆ ಬಿರಿಯಲು ಯೋಗಿಯ ಕಿವಿಯೆರಡಲ್ಲಿ ಪ

ಚಿಣಿ ಚಿಣಿ ಎಂಬ ಸಿಂಜಿಣಿನಾದವು
ಚಿತ್ಕೃತಿಯಾಗಿ ಚಿಮ್ಮುತಿದೆ

ಝಣಝಣಕೃತವೆಂಬ ಝಿಯಾನಾದವು
ಝೇಂಕಾರದಿ ಝೇಂಕರಿಸುತಿದೆ
ಎಣಿಕೆಯು ಇಲ್ಲದೆ ನಾಗಸ್ವರ ಧ್ವನಿ
ಎಡದೆರಪಿಲ್ಲದೆ ಕೂಗುತಿದೆ
ಘಣಘಣ ಎನಿಪ ತಾಳದ ನಾದವು
ದಟ್ಟಣೆಯಲಿ ತಾ ತುಂಬುತಿದೆ ೧

ಮೃಣು ಮೃಣು ಎನಿಪ ಮೃದಂಗ ನಾದವು
ಮುಂಕಟ್ಟಾಗಿಯೆ ನುಡಿಯುತಿದೆ ತನನಾ ಎಂಬ
ವೀಣಾ ಸ್ವನವು ತಂಪಾಗೆಲ್ಲವ ಮುಚ್ಚುತಿದೆ
ಘನ ಘನ ಎನುತಲಿ ಶಂಖನಾದವು
ಘಮ್ಮೆನ್ನುತಲಿ ಘೋರೆನುತಲಿದೆ
ಘಣಘಣ ಎನುತಲಿ ಘಂಟಾನಾದವು
ಘಂಟ್ಯಾಗಿಯೆ ಓಂ ಎನುತಲಿದೆ ೨

ಭೇರಿಯ ನಾದವು ಧಮಧಮ ಎನುತಲಿ
ಧಾಂಧಮ ಧಾಂಧಮ ನುಡಿಯುತಿದೆ
ಘೋರದಿ ಮೇಘದ ನಾದವು ಗರ್ಜಿಸುತಿದೆ
ಘುಡಿ ಘುಡಿಸುತಿದೆ ನೂರಾರು ಸಿಡಿಲಂತೆ
ನೂಕು ನುಗ್ಗಡಿಸುತಿದೆ ವೀರ ಚಿದಾನಂದ
ವಿಸ್ಮಯನಾಗಲು ವಿಚಿತ್ರದಿ ಬಾರಿಸುತಿದೆ ೩

## ೧೪೫

ದಶವಿಧ ಬ್ರಹ್ಮರ ಮನೆಯಲಿ ಭಿಕ್ಷವ ಕೊಳುತಿಹ ಅವಧೂತ
ದಶವಿಧ ಬ್ರಹ್ಮರ ವಿವರವನೀಗಲೆ ಪೇಳುವೆ ಪ್ರಖ್ಯಾತ ಪ

ಸತ್ಯವು ಶೌಚವು ಸಮಸ್ತ ಬ್ರಹ್ಮವು ಸರ್ವದಿ ದಯವಿಟ್ಟಿಹನು
ನಿತ್ಯವು ತತ್ವವು ಈತನು ಬ್ರಾಹ್ಮಣರೊಳಗೆ ಬ್ರಾಹ್ಮಣನು ೧

ಛಾಯೆಯು ಇಲ್ಲವು ಸ್ನಾನಕರ್ಮದಲಿ ದೇವಗೋವು ಪ್ರಿಯನು
ಆಯುಧದಿಂ ರಣ ಜಯಿಸುವನೀತನು ಬ್ರಾಹ್ಮಣ ಕ್ಷತ್ರಿಯನು ೨

ಸಿದ್ಧವು ಕರ್ಮದಿ ದೇವಗೋವುಗಳ ಪೂಜಿಸುತಿಹನೀತ
ಉದ್ದಿಮೆ ಮಾಡುವ ನಾನಾ ಬ್ರಹ್ಮರೊಳು ವೈಶ್ಯನೆ ಇವನೀತ ೩

ಚಲ್ಲಣ ಹಾಕಿಯೆ ಮಿಣಿನೊಗ ಹೊತ್ತಿಹನೀತ
ಎಲ್ಲ ಕೃಷಿಯ ವ್ಯವಹಾರವನು ಮಾಡುವ ಬ್ರಾಹ್ಮಣರೊಳು ಇವ ಶೂದ್ರ ೪

ಹಲಬರು ಇಹೆವೆಂದು ಸ್ವಯಂಪಾಕಕೆತ್ತುವ ಮಾಡುತ ಬಹುಜಾಲ
ಆಚಾರದ ಸೋಗಿನಲಿ ಹೊರಗುಂಬುವರು ಬ್ರಾಹ್ಮಣಮಾರ್ಜಾಲ ೫

ಎಡಗೈ ಅರಿಯನು ಬಲಗೈ ಅರಿಯನು ನುಡಿವನು ಬಿರುಮಾತ
ಉಡುವನು ಹಬ್ಬಕೆ ಧೋತ್ರವ ಬ್ರಾಹ್ಮಣರೊಳಿವನೀಗ ಕುರುಬ ೬

ಚೋರರ ಕೂಡಿಯೆ ಪಾಲನೆಕೊಂಬನು ಮಾಡುತ ಬಲು ಘಾತ
ಆರಾದರನು ಅರಿಯನು ಬ್ರಾಹ್ಮಣರೊಳವ ಕಿರಾತ ೭

ಕಾಣನು ಭೇದವ ತಂದೆ–ತಾಯಿಯಲಿ ಜೀವರುಗಳ ನೋಡ
ಪ್ರಾಣವ ಕೊಂಬನು ಬ್ರಹ್ಮೆಂತೆನ್ನದೆ ಬ್ರಾಹ್ಮಣರೊಳಿವ ಕಟುಕಾ ೮

ಬಗೆ ಬಗೆ ನಾಮವು ನಿರಿವುಡಿಧೋತ್ರವು ಸಂಧ್ಯಾಧಿಗಳವ ದೃಶ್ಯ
ಸೊಗಸನೆ ಮಾಡಿಯೆ ಕಣ್ಣನೆ ಹಾರಿಪ ಬ್ರಾಹ್ಮಣರೊಳಿವ ವೇಶ್ಯಾ ೯

ತಾಯಕ್ಕತ್ತೆಯು ಸೊಸೆ ಸಹೋದರಿ ರಜಕೀಪರಿಭಾಳಾ
ಮಾಯಾದಿ ಸ್ವಪಚಳ ಹೋಗುವ ಬ್ರಾಹ್ಮಣರೊಳಿವ ಚಂಡಾಲ ೧೦

ಈ ಪರಿ ದಶವಿಧ ಬ್ರಹ್ಮರುಗಳಲಿ ಭಿಕ್ಷೆಯ ಬೇಡುತ
ಭೂಪ ಚಿದಾನಂದ ಅವಧೂತ ಸದ್ಗುರು ಮನವೊಪ್ಪಿಯೆ ಉಂಬ ೧೧

## ೧೪೬

ದುಃಖವಿಲ್ಲವೋ ಪರಮಾತ್ಮನಿಗೆ ಲಿಂಗದ ದೇಹದ
ದುಃಖವಿಲ್ಲವೋ ಪರಮಾತ್ಮನಿಗೆ ಪ್ರತ್ಯಗಾತ್ಮನಿಗೆ
ದುಃಖವುಂಟೆ ನಿಜ ನಿರ್ಲಿಪ್ತಗೆ
ಮಿಕ್ಕ ಥಳಥಳ ಸಾಕ್ಷಿಬ್ರಹ್ಮಂಗೆ ಪ

ಜಲದೊಳು ಹೊಳೆವ ಇಂದುವಿಂಗೆ
ಜಲದ ಕಂಪವು ಹೊಳೆವುದೇ ಪೂರ್ಣಚಂದ್ರಗೆ
ಆ ಪರಬ್ರಹ್ಮಂಗೆ ಹೊಳೆಯಲು ಲಿಂಗದಿ
ಲಿಂಗದ ಗುಣಗಳು ಕೆಲವನು ತಿಳಿಯಲು ಪುಣ್ಯಾತ್ಮನಹೆ ೧

ಉದಧಿಲಿ ತೋರ್ವ ಸೂರ್ಯನಿಗೆ ಆ
ಉದಧಿಯ ಕೊಳಕು ಬೆರೆಸೀತೆ
ದ್ವಾದಶಾತ್ಮಂಗೆ ಆ ಪರಿ ಆತ್ಮಂಗೆ ಲಿಂ-
ಗಾದಿ ಜನ್ಮವೊಂದುಗುಡೆ ಕಷ್ಟಪಡುವಿಕೆ
ಲಿಂಗವೆ ಅಳಿಯಲು ನಿತ್ಯಾತ್ಮನುತ
ಭಂಗವ ಕಳದೇ ಚಿದಾನಂದ ಬ್ರಹ್ಮನಹನು ೨

## ೧೪೭

ದೃಷ್ಟಿ ಇರಬೇಕಯ್ಯ ಬ್ರಹ್ಮದಿ ದೃಷ್ಟಿಯಿರಬೇಕು
ದೃಷ್ಟಿಯಿಲ್ಲದಿರಲು ಅನುಭವ ಪಟು ದೊರಕದು ಪ

ಆಲಿಯು ನಿಂತೆ ಆಲಿಯ ಗೊಂಬೆಯು ತಿರುಗದಲಿರಬೇಕು
ಆಲಿಯು ಮುಚ್ಚದೆ ಆಲಿಯ ರೆಪ್ಪೆಯು ಬಡಿಯದಲಿರಬೇಕು ೧

ಅನಿಮಿಷ ದೃಷ್ಟಿಯಂದದಿ ಬ್ರಹ್ಮವ ಆಲಿಸುತಿರಬೇಕು
ಅನಿಮಿಷದಂದದಿ ಕಣ್ಣಿನ ಗುಡ್ಡೆ ತಿರುಗದಲಿರಬೇಕು ೨

ದೃಷ್ಟಿಯು ಕುಳಿತಾ ದೃಷ್ಟಿಯು ಮುಂದಕೆ ಸಾಗಲಿರಬೇಕು
ದೃಷ್ಟಿಯು ತಾನೆಡಬಲಕೆ ಸರಿಯದೆ ದೃಷ್ಟಿಯು ಇರಬೇಕು ೩

ಕುಳಿತಾ ಸ್ಥಳವು ತಪ್ಪಲು ಮತ್ತೆಯು ಕುಳಿತುಕೊಳ್ಳಬೇಕು
ಥಳಥಳ ಹೊಳೆಯುವ ಬೆಳಗದ ಪಸರಿಸಿ ತರನಾಗಿರಬೇಕು ४

ಉದಯಾಸ್ತಮಾನವು ದಿವರಾತ್ರಿಯುಡುಗಿ ಇರಬೇಕು
ಚಿದಾನಂದ ಸದ್ಗುರು ತಾನಾಗಿಯೆ ತಾನೆ ಇರಬೇಕು ೫

## ೧೪೮

ದೇಹವ ಬಿಟ್ಟು ಬ್ರಹ್ಮವು ಎಂತೆನೆ ದೇಹಬಿಟ್ಟು ಬ್ರಹ್ಮವೆಲ್ಲಿ
ದೇಹವು ಬ್ರಹ್ಮವು ಒಂದೆಯೋ ದೇಹವು ಇಹುದು ಬ್ರಹ್ಮದಲ್ಲಿ ಪ

ಮಾಯೆಯು ಬಿಟ್ಟು ಬ್ರಹ್ಮವು ಎಂದೆನೆ
ಮಾಯೆಯ ಬಿಟ್ಟು ಬ್ರಹ್ಮೆಲ್ಲಿ
ಕಾಯ ಬಿಟ್ಟು ಆತ್ಮವು ಎಂತೆನೆ
ಕಾಯವ ಬಿಟ್ಟು ಆತ್ಮೆಲ್ಲಿ ೧

ಪಿಂಡವ ಬಿಟ್ಟು ಬ್ರಹ್ಮಾಂಡ ವೆಂತೆನೆ
ಪಿಂಡಾಂಡಿಲ್ಲದೆ ಬ್ರಹ್ಮಾಂಡವೆಲ್ಲಿ
ಖಂಡವ ಬಿಟ್ಟಾಖಂಡವೆಂತೆನೆ
ಖಂಡವ ಬಿಟ್ಟು ಅಖಂಡವದೆಲ್ಲಿ ೨

ಜಗವನು ಬಿಟ್ಟು ತನ್ನನು ತೋರೆನೆ
ಜಗವನು ಬಿಟ್ಟು ತಾನೆಲ್ಲಿ
ಜಗಪತಿ ಚಿದಾನಂದ ಸದ್ಗುರು ನೀನು ನೀ
ಜಗಸಂಶಯವೆಲ್ಲಿ ೩

## ೧೪೯

ದೊರೆಯಾಗಿ ನಾನಿಹೆನಮ್ಮ ಅಜ
ಹರಿಹರರ್ಗಿಲ್ಲದೆ ಪದ ಸೇರಿತಮ್ಮ ಪ

ಭೂಮಿಯೆ ಮಣಿಮಂಚವಮ್ಮ ಮಹಾ
ವ್ಯೋಮವೆಂಬುದೆ ಹೊಸ ವಸ್ತ್ರವಮ್ಮ
ಸಾಮವೆ ಮಣಿಭೂಷಣವಮ್ಮನಿ
ಸ್ಸೀಮ ಭಿಕ್ಷವೇ ಪರಿ ಪರಮಾನ್ನವಮ್ಮ ೧

ಸಂಗರಹಿತ ಸತಿಯಮ್ಮ ಆ
ಮಂಗಳವೆಂಬ ಘನಸುತರಮ್ಮ
ಜಂಗಮವೇ ಜನವಮ್ಮ ಭೇ
ದಂಗಳ ಪರಿದಿಹುದೇ ಅರಮನೆಯಮ್ಮ ೨

ನಾದವೆಂಬುದ ವಾದ್ಯವಮ್ಮ ಸು
ನಾದವೆಂಬುದೇ ಗೀತಗಾಯಕರಮ್ಮ
ಆದಿ ಬಂಧುವೇ ಮದವಮ್ಮ ತೇಜ
ವಾದ ಚಿತ್ತವೇ ದೀವಟಿಗೆಮ್ಮ ೩

ಜ್ಞಾನವೆಂಬುದೇ ಬಲವಮ್ಮ ಮಹ
ದಾನಂದ ರಾಜ್ಯಕ್ಕೆ ಅಧಿಪತಿಯಮ್ಮ
ತಾನೆ ಎಂಬುದೇ ಮುದ್ರೆಯಮ್ಮ ಇಂತು
ನ್ಯೂನವಿಲ್ಲದೆ ಸ್ಥಿರ ಸೇರಿದುದಮ್ಮ ೪

ಸುರವರರ್ಗಿನಿತುಂಟೆ ಅಮ್ಮ
ಹಿರಿಯಾರಾರಾದರೇನು ದೊರಕದಮ್ಮ
ಗುರುವಿನ ದಯದಿಂದಲಮ್ಮ ನಿಜ
ಗುರು ಚಿದಾನಂದನೇ ತಾನಾದುದಮ್ಮ ೫

## ೧೫೦

ನಂಬುವುದು ತಾನು ಎಂತು ಸತಿಯು ಸುತರು ಮಗಳನು
ನಂಬಿ ಕಡೆ ಹಾಯ್ದುದುಂಟೆ ಹಾದಿಕಾರರನು ಪ

ದಾರಿಕಾರರಿಗೆ ವಸತಿ ಮಳಿಗೆ ಭೇಟಿಯಲ್ಲೇ
ದಾರಿ ಹಿಡಿದ ಬಳಿಕ ತಿರುಗಿ ಭೇಟಿಯಾಗೋದೆಲ್ಲಿ
ದಾರ ಸುತರ ಭೇಟಿಯಿದೇ ದೇಹದೊಳಗೆ ಎಂದರಿಯೋ
ಶರೀರವು ಬಿದ್ದ ಬಳಿಕ ಭೇಟಿ ಮುಂದೆ ಮರೆಯೋ ೧

ಕನಸಿನವರ ತಾನು ಈಗ ನೆನಸಲಿಕ್ಕೆ ಬಹರೆ
ಕನಸಿನಂತೆ ತೋರುವರು ನೀನು ನಚ್ಚುವರೆ
ಮನೆಯ ಬದುಕುಭಾಗ್ಯವೆಲ್ಲ ಮನದಿ ಜರೆದು ಬಿಡು
ನಿನಗೆ ಗತಿಯು ಏನು ಎಂದು ನೀನು ತಿಳಿದು ನೋಡು ೨

ಹೆಗ್ಗಣವು ಜಾಗಿನೊಳಗೆ ಬಿದ್ದು ಮಿಡುಕಿದಂತೆ
ವೆಗ್ಗಳಾಗಿ ಸಂಸಾರಕೆ ಮಾಡಿವೆಯೋ ಚಿಂತೆ
ನುಗ್ಗು ಆದೆ ಬಯಲಭ್ರಾಂತಿ ನಿನಗೆ ವ್ಯಾಪಕಾಗಿ
ಮುಗ್ಗುವೆ ನೀನೊಣನ ತೆರದಿ ನರಕದಲ್ಲಿ ಹೋಗಿ ೩

ನನ್ನ ಸಂಸಾರವೆನ್ನಬೇಡ ನೀನು ಇದನು ಈಗ
ನನ್ನ ನನ್ನದೆಂದೆ ಹೋದ ನಿಮ್ಮಪ್ಪ ಮುಕ್ತನು
ಇನ್ನು ನಾಶವಿದು ಒಬ್ಬರಿಲ್ಲ ಸತ್ಯ
ನಿನ್ನದಾರೆಂದು ಮರೆಯದಡೆ ನಿತ್ಯಾ ೪

ಇಂದ್ರಜಾಲ ನೋಡಲಿಕ್ಕೆ ಖರೆಯದಾಗಿ ಇಹುದು
ಅಂದದಾ ಪರಿಯು ಸಂಸಾರವೆ ನಿತ್ಯವಿಹುದು
ಬಂಧನವು ನಿನಗೆ ಇಹುದು ಗುರುವಿನ ಪಾದವ
ಹೊಂದು ಮುಂದೆ ಚಿದಾನಂದನಹೆ ನೀನೀಗ ಎಂದು ೫

## ೧೫೧

ನಡೆಯೇ ತೀರ್ಥವು ನುಡಿ ಪ್ರಸಾದವು
ಕೊಡುವುದೇ ತಾನೀಗನುಗ್ರಹವು
ಹಿಡಿವುದೇ ತತ್ವವು ಬಿಡುವುದೇ ವೈರಾಗ್ಯ
ದೃಢದಲಿ ತನ್ನ ತಿಳಿದಾ ಮಹಾತ್ಮನಾ ಪ

ಮೆಟ್ಟಿದ್ದೆ ಕಾಶಿಯು ಮಲಗಿದ್ದೆ ಶ್ರೀ ಶೈಲ
ದಿಟ್ಟಾಗಿ ಕುಳಿತುದೇ ಕುರುಕ್ಷೇತ್ರವು
ಘಟ್ಟಿಯಾಗಿಹುದೇ ಗಯವೀಗ ಗೋಕರ್ಣ
ಮುಟ್ಟಿಯೇ ತನ್ನತಾ ತಿಳಿದ ಮಹಾತ್ಮನಾ ೧

ಉಂಡದ್ದೆ ಕೇದಾರ ಉಟ್ಟಿದ್ದೆ ಶ್ರೀ ಬದರಿ
ಕಂಡದ್ದೆ ಕಂಚಿ ಕಾಳಹಸ್ತಿ
ಮಂಡೆಗೆರಕೊಂಡುದೇ ಮೈಲಾರ ಮಧುರೆಯು
ಖಂಡಿಸಿ ತನ್ನತಾ ತಿಳಿದ ಮಹಾತ್ಮನಾ ೨

ಸುಧಾ ಶರಧಿಯು ಆತ ಸಾಕ್ಷಾತ್ತು ದೈವವು
ವಿಧ ವಿಧದ ಜಗ ತಾನೆಯಾದಾತನು
ಮದಕಾಮ ಕ್ರೋಧ ಪಾಶ ಶೋಕ ವರ್ಜಿತ
ಚಿದಾನಂದ ಗುರುವೇ ತಾನಾದ ಮಹಾತ್ಮನಾ ೩

## ೧೫೨

ನಾ ಕಂಡ ಕನಸು ಕನಸಲ್ಲ ಅದು ಹೇಳಲು
ಬಾರದು ಕೇಳಲು ಬಾರದು ಪ

ಕಂಗಳ ಮುಚ್ಚಿ ನಾನಿರುತಿಹೆ ಅಂತರಂಗದೊಳಗೆ ದೃಷ್ಟಿಯನಿಡೆ
ಮಂಗಳವಿತ್ತು ಮಹತ್ತುಯಿತ್ತು ಜಂಗಮವಿತ್ತು ಜಗತ್ತು ಇತ್ತು ||

ಧ್ಯಾನವು ಗುರುಪಾದದಲ್ಲಿರೆ ಒಳ್ಳೆ ಗಾನವು ಕಿವಿಗೆ ಕೇಳಿಸುತಲಿರೆ
ಆನಂದವಿತ್ತು ಸುಖತರವಿತ್ತು ತನ್ಮಯವಿತ್ತು ಥಳಿಥಳಿಸಿತ್ತು ೨

ಆನಂದ ಮನೆಯೊಳಗಾನಿರೆ ಚಿದಾನಂದ ದೇವರ ಕೂಡಿರೆ
ತಾನೆ ತಾನಿತ್ತು ತವೆ ಬೆರೆತಿತ್ತು ಏನೇನೋ ಇತ್ತು ಎಂತೆಂತೋ ಇತ್ತು ೩

## ೧೫೩

ನಾ ಕೆಟ್ಟ ಕೇಡ ಹೇಳುವೆನು ಎಲ್ಲ ಲೋಕದಂತೆನ್ನ
ಬದುಕು ಆಗಲಿಲ್ಲ ಪ

ಹೆಂಡರಿಚ್ಛೆಯಿಲ್ಲ ಹೀನವೆಂಬುದಿಲ್ಲ
ಪಂಡಿತತ್ವದ ಪರಮಾರ್ಥಕಿಲ್ಲ
ಉಂಡೆ ಉಟ್ಟೆನೆಂಬ ಊಹೆ ಮೊದಲಿಗಿಲ್ಲ
ಕಂಡ ಕಂಡಂತೆ ಚರಿಸುವಂತಾಯಿತೆ ೧

ಅರಿವು ಮರೆವು ಇಲ್ಲ ಆಸೆಗಳೇನಿಲ್ಲ
ಇರುಳು ಹಗಲು ಎಂಬುದೆರಡಿಲ್ಲವೋ
ಶರೀರ ಸ್ಮರಣೆಯಿಲ್ಲ ಶ್ರೇಷ್ಠ ಭಾವಗಳಿಲ್ಲ
ಮರುಳು ಮರುಳು ಆಗಿ ತಿರುಗುವಂತಾಯಿತು ೨

ಚಿದಾನಂದ ಗುರುವಿನ ಚಿತ್ತದಿ ಪಿಡಿದರೆ
ಒದವಿದ ಬ್ರಹ್ಮಾನಂದವ ಸವಿದು
ವಿಧವಿಧವಾದ ಬೆಳಕಿನೊಳಾನಡಗಿರೆ
ಇದರಿಂದಲಿ ಇಂತಾದುದಿದೆಲ್ಲವು ೩

## ೧೫೪

ನಾಚಿಸಿದೆಯ ದೇವಯನ್ನ ಎಲ್ಲ
ಈ ಚರಾಚರ ತುಂಬಿಹ ವ್ಯತ್ವನ್ನ ಪ

ಶ್ರೀಗಿರಿ ನೋಡುವೆನೆಂದು ನಾ
ಸಾಗಿ ಪಯಣಗೊಂಡು ಬಂದು
ರಾಗವುದಿಸಿ ಮನಕಿಂದು ಮುಂದೆ
ಭೋಗ ತರದ ಮನ ತೂರಿತು ನಿಂದು ೧

ಮಧ್ಯಾಹ್ನ ಬಿಸಿಲೊಳು ನಡೆಯೆ ನಾನು
ಅದ್ವಯವಿಲ್ಲದೆ ಹಾದಿ ನೀರ್ಗುಡಿಯೆ
ಇದ್ದ ಚೈತನ್ಯ ತಾ ನುಡಿಯೆ ಇಂತು
ಹೊದ್ದ ಶರೀರ ಬಳಲಿ ನೆಲಕೆಡೆಯೆ ೨

ಧರಣಿಯ ಸುರರೂಪ ತಾಳಿ ನೋಡೆ
ವರಣ ವರಣ ರುದ್ರಾಕ್ಷಿ ಜಾಳಿ
ಚರಣ ಕಿರಣದಲ್ಲಿ ಹೂಳಿ ನಾನು
ಗುರುವೆ ಎಂದು ನುಡಿವುದ ಕೇಳಿ ೩

ಎಲ್ಲಿ ಪೋಗುವೆ ಎಂದು ಕೇಳೆ
ಮಲ್ಲಿಕಾರ್ಜುನನ ನೋಡಿಯೇ ಬಹೆನೆಂದು
ಸೊಲ್ಲುಡುಗಲು ನಾನಿತ್ತೆಂದು ಗುರು
ಸುಳ್ಳು ಆದನೆ ಸರ್ವ ಪೂರಿತನಿಂದು ೪

ಸರ್ವರೂಪದು ಮೃಷೆಯಾಯ್ತು ಎಲ್ಲ
ಸರ್ವಜನರಿಗೆ ಬೋಧಿಸುವದೇನಾಯ್ತು
ಸರ್ವತಾನೆನಿಪುದೇನಾಯ್ತು ಎಲ್ಲ
ಸರ್ವರನುಳಿದು ಬಂದಿಹುದೊಳಿತಾಯ್ತು ೫

ಇಂತು ಬುದ್ಧಿಗಳಿಂದ ಝಡಿಯೆ ಎಲ್ಲ
ಅಂತು ಕೇಳುತ ನೀವು ಆರೆಂದು ನುಡಿಯೆ
ನಿಂತಲ್ಲಿ ದೃಶ್ಯವ ಪಡೆಯೆ ಕಂಡು
ಸಂತೋಷದಿಂ ನಾ ಸಾಷ್ಟಾಂಗವೆರಗೆ ೬

ಆನಂದ ತೊರೆಯೊಳು ಮುಳುಗಿ ಚಿ-
ದಾನಂದ ಗುರುವ ಕಾಣದೆ ಮನಮರುಗಿ
ಧ್ಯಾನದಿ ಕಂಗಳು ತಿರುಗಿ ನೋಡಿ
ತಾನೇ ತಾನಾದ ಘನದಿ ಮನ ಕರಗಿ ೭

## ೧೫೫

ನಾದದಿ ಬೆರೆತಿರು ಮುಕ್ತಾ ನಿತ್ಯವಿರಕ್ತಾ
ವಾದದಿ ಬೆರೆತಿರುಮುಕ್ತಾ ನಾದದಿ ತಾನಾಗಿ ನಿನ್ನ ವಿಚಾರಿಸು
ನಾದಂ ಧಿಂಧಿಂಧಿಮಿಕೆ ಎಂಬ ಪ

ಸರ್ವರೂಪಕವಿದೆ ನಾದ ಸಕಲ ವಿನೋದ
ಪರ್ವಿಕೊಂಡಿರುತಿಹ ನಾದ ಬಹುಲೋಕ ಮೋದ
ದುರ್ವಿಕಾರದ ಮನವ ಎಲ್ಲೆಡೆ ಹರಿಯಿಸುವ ವೀಣಾನಾದ ೧

ಆನಂದಕಾಶ್ರಯನಾದ ಆಗಿದೆ ಭೇದ
ಸ್ವಾನಂದ ತಾನೆಯದೆ ನಾದ ಹೇಳಲಿಕೆ ಭೇದ
ಜ್ಞಾನ ಶುದ್ಧನು ಸುಭಕ್ತಿ ವಿರಕ್ತಿಯು
ತಾನಹುದಹುದೆಂದು ಭೇರಿಯ ನುಡಿಸುವ ೨

ತಾಪತ್ರಯದ ಮೂಲ ಹರಣ ಯೋಗಿಗಳ ಭರಣ
ಪಾಪ ಪುರುಷನ ಸಂಹರಣ ತಾನಿಹುದು ಸದ್ಗುಣ
ಭಾಪು ಚಿದಾನಂದ ಗುರುವನು ಕೂಡಲು
ಈ ಪಥವಲ್ಲದೆ ಇನ್ನೊಂದು ತಾನಿಲ್ಲ ೩

## ೧೫೬

ನಾದದಿ ಮಲಗ್ಯಾನೆ ಯೋಗಿ ನಿತ್ಯಾನಂದ ಭೋಗಿ
ನಾದದಿ ಮಲಗ್ಯಾನೆ ಯೋಗಿ
ನಾದಂ ಝಣಂ ಝಣನಾದಂ ಭಿಣಿಂಭಿಣಿ
ನಾದಸಲೆಯ ವೀಣಾನಾದವ ಕೇಳುತ ಪ

ಈಷಣತ್ರಯ ಪಾಪಾತ್ಮರಿರಾ ಎಚ್ಚಿಸಲು ಬ್ಯಾಡಿ
ವಾಸನವೆಂಬ ಅಷ್ಟಕರ್ಮಿಗಳೇ ಒದರ ಬ್ಯಾಡಿ
ಪಾಶವ ಹರಿವುತ ಪಂಚಕ್ಲೇಶದ
ಈಸು ಉಳಿಯದಂತೆ ತರಿದಾಯಾಸದಿ ೧

ಅಂತರ ಎಂಬ ಘಾತಕರಿರಾ ಅತ್ತ ಹೋಗಲು ಬ್ಯಾಡಿ
ಭ್ರಾಂತುಯೆಂದೆಂಬ ಭ್ರಷ್ಟರಿರ ಜಗಳಾಡಲಿ ಬ್ಯಾಡಿ
ಅಂತರಿಸದೆ ಆರು ಶತ್ರುವ ಛೇದಿಸಿ
ಅಂತಿಂತೆನ್ನದೆ ಆಯಾಸದಿಂದಲಿ ೨

ಸಂಕಲ್ಪವೆಂಬೋ ಖೋಡಿಗಳಿರಾ ಸದ್ದು ಮಾಡಲಿ ಬ್ಯಾಡಿ
ಮಂಕು ಎಂದೆಂಬ ಮಾಂದ್ಯಗಳಿರ ಮುಂದಕ್ಕಡ್ಡಾಡಬೇಡಿ
ಬಿಂಕದಹಂಕಾರ ಬೇರ ಕಿತ್ತು
ಓಂಕಾರ ಚಿದಾನಂದ ವಸ್ತು ಆಯಾಸದಿ ೩

## ೧೫೭

ನಾದನಾದ ಸುನಾದವ ತಿಳಿದವ ನಾದ ಮೂರುತಿ ನಿಜನಾದ ಪ

ಆರು ಅರಿಗಳು ಅವರನು ಗೆಲುವೊಡೆ ಆಶ್ರಯ ತಾನಿದೆ ನಾದ
ಧೀರತನದಲಿಹ ನಾಲ್ವರ ಸಾಧಿಸೆ ದಿಟವು ತಾನಿದೆ ನಾದ ೧

ಅಷ್ಟಮದಂಗಳನೆಲ್ಲವ ತಿಳಿವ್ರೊಡೆ ಆದಿಯುಮದು ಈ ನಾದ
ದುಷ್ಟರು ಐವರ ದೃಢವನು ಕೆಡಿಸಲು ದೃಷ್ಟಿಗೆ ತಾನಿದೆ ನಾದ ॥

ಮೂರು ಮೂರು ಮೂರೆನಿಸುವ ತ್ರಿಪುಟಿಯ ಮೂಲನಾಶವಿದೆ ನಾದ
ಚೋರರು ಸಪ್ತಾ ಸಪ್ತರು ಎಂಬರ ಭೇದಿಸೆ ತಾನಿದೆ ನಾದ ೩

ಎರಡರ ಭೇದವನೆಲ್ಲವನಳಿವ್ರೊಡೆ ಎಡೆದೆರಪಿಲ್ಲದ ನಾದ
ಭರಿತವನಂದಾನಂದವ ತುಳುಕುವ ಭಾಗ್ಯವು ತಾನಿದೆ ನಾದ ೪

ನಾದದಿ ನಿತ್ಯವು ಬೆರೆತಿಹ ಪುರುಷನೆ ನಾದ ಚತುರ್ಮುಖನಾದ
ನಾದರಹಿತ ಚಿದಾನಂದ ಗುರುವಿನ ಪಾದದೊಳಗೆ ಅವನಾದ ೫

## ೧೫೮

ನಾದವನಾಲಿಸೋ ನಿತ್ಯದಿ ನಾದದೊಳಗಿನ ನಾದ ಸುನಾದ
ಓಂಕಾರ ನಾದವನರಿವನೆ ಧನ್ಯ ಯೋಗೀಶ ಪ

ನಾದದಿಂದಲಿ ಅಷ್ಟಪಾಶವಿಕ್ಕಡಿಯುಹುದು
ನಾದದಿಂದಲಿ ಮದಗಳೆಂಟುಡುಗಿ ಹೋಗುವವು
ನಾದದಿಂದಲಿ ಅರಿಗಳರುವರೂ ತೊಲಗುವರು
ನಾದದಿಂದಲಿ ಕರ್ಮವು ದೂರಹುದು
ನಾದದಿಂದಲಿ ಧರ್ಮವು ವೃದ್ಧಿಪುದು
ನಾದದಿಂದಲಿ ಬ್ರಹ್ಮವು ಯೋಗೀಶ ೧

ನಾದದಿಂದಲಿ ಮೌನ ತನಗೆ ತಾನಾಗುವುದು
ನಾದದಿಂದಲಿ ಚತುಸ್ಸಾಧನವು ದೊರಕುವುದು
ನಾದದಿಂದಲಿ ಸಪ್ತ ಭೂಮಿಕೆಗಳಾಗಿಹವು
ನಾದದಿಂದಲಿ ಜ್ಞಾನವು ಸ್ಥಿರವಹುದು

ನಾದದಿಂದಲಿ ಚಿತ್ರವಚಲವಹುದು
ನಾದದಿಂದಲಿ ಸರ್ವರು ಯೋಗೀಶ ೨

ನಾದದಿಂದಲಿ ಬುದ್ಧಿ ನಿರ್ಮಲವಾಗುವುದು
ನಾದದಿಂದಲಿ ಮನವು ಹಿಡಿತದಲಿರುತಿಹುದು
ನಾದದಿಂದಲಿ ದೃಕ್‌ದೃಶ್ಯ ಸಾಧನವಹುದು
ನಾದವೆ ಬ್ರಹ್ಮವಹುದು
ಚಿದಾನಂದನಾದವನ ತೋರಲು ಬಹುದು ಅವನಲಿ
ಭೇದವಿಲ್ಲದೆ ಕೂಡಲುಬಹುದು ಯೋಗೀಶ ೩

## ೧೫೯

ನಾದವಾದನು ನಾದದ ಮನೆಯಿದ್ದ ಅಚ್ಚರಿ ನೋಡಿ
ವಾದಿಗಳನು ಗೆದ್ದು ಜಯವ ತಾ ಮಾಡಿ ನಾದವಾದನು ಪ

ಸುಮನಸವೆಂದೆಂಬ ಕುದುರೆಯ ಹತ್ತಿ
ಅಮಲವೆನಿಪ ಧೈರ್ಯದ ಕತ್ತಿಯ ಹಿಡಿದು
ಭ್ರಮಣೆಯಲ್ಲದ ವಿವೇಕ ಘೇರಿಯಿಂದ
ವಿಮಲಾನಂದದಿ ದುಮುಕಿಸುತಿರುತಿಪ್ಪ ನಾದವಾದನು ೧

ಅಷ್ಟ ಆನೆಗಳ ತಲೆಗಳ ಹೊಡೆದು
ಷಷ್ಟರಧಿಕರ ಸಾಲನು ಕಡಿದು
ದುಷ್ಟಕುದುರೆಗಳ ಏಳರ ಕಾಲನು ಉಡಿದು
ಕಷ್ಟರೂಪದ ಚೋರರೈವರನು ದೂಡಿದ ನಾದವಾದನು ೨

ಈಷಣತ್ರಯ ಪ್ರಧಾನರ ಜೀವವ ಕಳೆದು
ವಾಸನೆ ದಳವಾಯ್ಗಳೀರ್ವರ ನೆರೆ ತುಳಿದು
ಮೋಸಗಾರರ ದೊರೆ ನಾಲ್ವರನಳಿದು
ಏಸು ನುಡಿಯಲಿ ತಾನೊಬ್ಬನೇ ಉಳಿದು ನಾದವಾದನು ೩

ದೋಷಕರೆಲ್ಲರ ದೇಶ ಬಿಟ್ಟೋಡಿಸೆ
ನಾದವಾದರು ಎಲ್ಲರು ಕೊನೆಗೆ ಉಳಿದವರೆಲ್ಲಾ
ಸಾಷ್ಟಾಂಗ ವೆರಗಿದರು
ವಾಸಿ ಪಂಥವ ಬಿಟ್ಟು ಕೊಂಡಾಡುತ ನಾದವಾದನು ೪

ಇಂತು ರಣವ ಮಾಡಲು ಕೈಯ ಸುರಗಿ
ಸಂತೋಷವೆಂಬ ಮೃತದಿ ತಾ ಮುಳುಗಿ
ಶಾಂತನಾಗಿಯೆ ಚಿದಾನಂದ ಗುರುವಿಗೆರಗಿ
ನಿಂತು ನೋಡಿಯೆ ಕಂಡನಾತನೆ ತಿರುಗಿ ನಾದವಾದನು ೫

## ೧೬೦

ನಾದವ ಕೇಳುತ ನಿದ್ರೆಯ ಮಾಡುತ ಬ್ರಹ್ಮವು ತಾನಾಗಿ
ನಾದವ ಕೇಳುತ ನಾನಾ ಗುಣಗಳು ಹೋದವು ತಾವಾಗಿ ಪ

ಕೂಡಿತು ದೃಷ್ಟಿ ಪರಬ್ರಹ್ಮದಿ ತಾ ಅನುದಿನದಲಿ ಬಾಗಿ
ಮನ ಇಂದ್ರಿಯಗಳು ಹುಡುಕಿದರಿಲ್ಲ ಹೋದವು ತಾವಾಗಿ ೧

ನಾನಾ ವರ್ಣದ ಛಾಯೆಯ ನೋಡುತ ನಿದ್ರೆಯ ಮಾಡಿದೆನೋ
ಭಾನು ಕೋಟಿ ಛಾಯೆಯ ನೋಡುತ ನಿದ್ರೆಯ ಮಾಡಿದೆನೋ ೨

ಕಾಣದ ರೂಪದ ಕಾಣುತಲೆ ನಾ ಕಾಮಿಸಿ ಮಲಗಿದೆನೋ
ಬೋಧ ಚಿದಾನಂದ ಸದ್ಗುರು ನಾಥನ ಧ್ಯಾನವ ಮಾಡಿದೆನೊ ೩

## ೧೬೧

ನಾದಾನಂದದಿ ಮುಳುಗಾಡೋ ಪ

ಇಲ್ಲವೆಂಬುದು ಸಲ್ಲ ಗುರು
ಎಲ್ಲಾ ಪೂರಿತನಹುದಲ್ಲ ಇದ ಬಲ್ಲವರು ಬಲ್ಲರೆಲ್ಲ
ತಾನೆಲ್ಲ ತಿಳಿಯೆ ನೀ ಸಾಕ್ಷಿಕನಹುದಲ್ಲ ೧

ಮತಿಯಿಂದ ತಿಳುಕೋ ವಿಚಾರ ಈ
ಗತಿಯಲ್ಲಿ ಆತ್ಮನು ಪೂರ
ಗತಿಗೆ ಕೇಡಿಲ್ಲ ಇದು ಸ್ಥಿರ ಮಹ
ದತಿ ಸೌಖ್ಯ ಪದಕೆ ರಾಜ ನೀನೆ ಉದಾರ ೨

ಭೇದ ಭೇದವು ನಿನಗೇತಕೆ ನೀ
ವಾದ ದೂರನು ಪರಕೆ ಈ
ವಾದ ಸಂವಾದಗಳ್ಯಾತಕೆ ಮಹ
ದಾದಿ ಪುರುಷನು ನೀನಹುದು ಬಿಡು ಜೋಕೆ ೩

ಸತ್ಯ ಸಂವಿದ್ರೂಪ ಆತ್ಮ ನೋಡೆ
ಪ್ರತ್ಯಗಾತ್ಮ ಪರಕತೀತ ಆರಿಂದಲಾದುದು
ಖ್ಯಾತ ಸುನಾದವರಿದನೇ ನಿ
ರ್ಭೀತ ಮಹಾನಾದ ಚಿದಾನಂದನ ಕೂಡಿದನಾತ ೪

## ೧೬೨

ನಿನ್ನನೆ ತಿಳಿದು ನೀ ನೋಡು ಕಂಡ್ಯಾ
ನೀ ನನ್ನ ತಿಳಿಯೆ ನೀ ಶಿವನು ಕಂಡ್ಯಾ ಪ

ಆದಿ ಮಧ್ಯಂತರ ಅನಾದಿ ಕಂಡ್ಯಾ
ನಾದ ಬಿಂದು ಕಳಾತೀತ ಕಂಡ್ಯಾ
ಭೇದಾಭೇದಕೆ ಅಭೇದ ಕಂಡ್ಯಾ ನೀ
ವಾದ ಸುವಾದ ವರ್ಜಿತನು ಕಂಡ್ಯ ೧

ಮೂರು ಗುಣಕೆ ನೀ ಮೂಲ ಕಂಡ್ಯ
ನೀನಾರು ಅರಿಗಳಿಗತ್ತತ್ತ ಕಂಡ್ಯ
ತೋರುವುದಕೆ ನೀ ತೋರ್ಕೆ ಕಂಡ್ಯ
ನೀ ಮಾರನಟ್ಟುಳಿಗೆ ಮಹೇಶ ಕಂಡ್ಯ ೨

ಮಂಗಳ ತರಕೆ ಮಂಗಳನು ಕಂಡ್ಯ ನೀ
ಮಂಗಳ ಮೂರುತಿ ಮಹಾತ್ಮ ಕಂಡ್ಯ
ಮಂಗಳ ವಸ್ತುಮಾಪತಿಯು ಕಂಡ್ಯ ನೀ
ಮಂಗಳನಿಗೆ ಮಾಯೆ ಮಾತು ಕಂಡ್ಯ ೩

ನಿರುಪಮ ನಿರ್ಗುಣ ನೀನು ಕಂಡ್ಯ ನೀ
ಪರಮ ಪರಾತ್ಪರನು ಕಂಡ್ಯ
ಸುರವರ ಜೇಷ್ಠ ಸ್ತುತಿಪನು ಕಂಡ್ಯ ನೀ
ಭರಿತವಾನಂದ ಸಿಂಧು ಕಂಡ್ಯ ೪

ಗುರುವಿನ ಪಾದ ಸೇರು ಕಂಡ್ಯ
ಗುರು ಕಟಾಕ್ಷವ ನೀನು ಪಡೆಯೋ ಕಂಡ್ಯ
ಗುರುವೆಂದು ಎಲ್ಲವನರಿಯೋ ಕಂಡ್ಯ
ಗುರು ಚಿದಾನಂದ ನೀನೆನ್ನು ಕಂಡ್ಯಾ ೫

## ೧೬೩

ನೆಲೆಯಾವುದಯ್ಯ ಹೊಲಬಾವುದಯ್ಯ
ತಿಳಿದು ಆತ್ಮನನು ತಿಳಿಯದ ಮನುಜರಿಗೆ ಪ

ವೇದ ಸಾರವನೋದಿ ವೇದದರ್ಥವ ಕಂಡು
ಆದಿಯಾಗಿಹಅನಾದಿ ಮೂರುತಿಯನ್ನು
ಸಾಧಿಸಿ ಸಾಧ್ಯವಾಗದೆ ಸರ್ವರೊಳಗಾಗಿ
ಬಾಧೆಯೊಳಗೆ ಸಿಕ್ಕುಬಿದ್ದ ಮನುಜಗೆ ೧

ತನುದುಸ್ಥಿತಿಯ ಕಂಡು ತನುವಲಿಹನ ಕಂಡು
ಚಿನುಮಯವಾದ ಚಿದ್ರೂಪನೆಂಬನ
ಮನದ ಕೊನೆಯಲಿಟ್ಟು ಮಥಿಸಲಾರದೆ ತಾನು
ಘನ ದುಃಖದೊಳು ಬಿದ್ದು ಗಲಭೆಯಾದವಗೆ ೨

ಕರಣ ಚರಿತೆಯ ನೋಡಿ ಕರಣ ಸಾಕ್ಷಿಯ ಕಂಡು
ಸ್ಥಿರ ಬುದ್ಧಿಯಾಗಿಯೆ ಸ್ಥಿಮಿತನಾಗದೆ ತಾನು
ವರ ಚಿದಾನಂದ ಪದ ಹೊಂದಲಾರದೆ
ನರಕದೊಳಗೆ ಬಿದ್ದು ನರಳಾಡುವವನಿಗೆ ೩

## ೧೬೪

ಪಥವ ಬಿಡು ಬಿಡು ದೇವ ಪಥದಿ ಮಲಗುವರೆ
ಗತಿ ಚಿದಾನಂದನಿರೆ ಗತಿಗೆಡುವೆನೆ ಭಯಕೆ ಪ

ಅಲ್ಲಿ ನಾನಾ ಬೋಧೆ ಬೋಧಿಸಲು ಭವ ಹರಿದು
ನಿಲ್ಲದಲೆ ನಾನೀಗಲ್ಯೆ ತರಲಿಕೆ
ಇಲ್ಲಿ ಸರ್ವವೆ ಆಗಿ ನೀ ಬಂದು ಮಲಗಿರುವೆ
ಸುಳ್ಳನಿತು ಸೇರದಿದು ನಿನ್ನವಗೆ ಬಿಡು ಪಥವ ೧

ಮನುಜ ಸಂಗವನಳಿದು ಮಹದರಣ್ಯವ ಹೊಕ್ಕು
ಅನಂತರದ ಪುಣ್ಯದಾಶ್ರಮವ ನೋಡಿ
ಸನುಮತದಿ ಪೂಜೆಯನು ಮಾಳ್ಪೆನಾನೆಂದು ಬರೆ
ಘನಸರ್ಪವಾಗಿ ನೀನಡ್ಡ ಬಿದ್ದಿಹೆ ದೇವ ೨

ಸಕಲ ಸಂಗವನುಳಿದು ಸ್ವಾನುಭಾವಗಳಿಂದ
ಅಖಿಲ ಮೃಗಗಳ ಕೂಡಿ ನಿಶ್ಚಲತೆಯಿಂದ
ಭಕುತಿಯಲಿ ನಿನ್ನನು ಭಜಿಪೆನೆಂದ್ಯೆದುತಿರೆ
ಭಕುತನಿಗೆ ಸರ್ಪನಂತಿಹುದಿದೇನ್ಯೆ ಸ್ವಾಮಿ ೩

ಏಕಾಂತ ಗೃಹಗಳಲಿ ಏಕಾಂತ ಸ್ಥಳಗಳಲಿ
ಏಕಾಂತವಾಗಿ ನಿನ್ನನೆ ಪೂಜಿಸಿ
ಏಕಾಂತ ಸರ್ವಸಾಧನವೆನುತಲ್ಯೆದುತಿರೆ
ಏಕಾಂತ ಮಾತೇಕೆ ಪಥವ ಬಿಡು ಎಲೆ ದೇವ ೪

ಶುಕಗೆ ಪಂಜರದಂತೆ ಸಾಕ್ಷಿಯೆನಗಿರುತಿರಲು
ಅಖಿಲ ಚಿಂತೆಯ ಗಿಡುಗ ಬರಲಹುದೆ
ಮುಕುತಿದಾಯಕ ಚಿದಾನಂದ ಗುರು ಕೇಳೆನಗೆ
ಯುಕುತಿಯುಂಟೇ ಬೇರೆ ಬಿಡುಬಿಡಿರೆ ಬಿಡು ಪಥವ ೫

## ೧೬೫

ಪರಮ ಪುರುಷ ನಿನಗೆ ನಮೋ ನಮೋ
ಪರಮ ಪರಾತ್ಪರಗೆ ನಮೋ ನಮೋ ಪ

ಆದಿ ಅನಾದಿಗೆ ನಮೋ ನಮೋ ಮಹ
ದಾದಿ ತತ್ವಕೆ ನಮೋ ನಮೋ
ವಾದರಹಿತನಿಗೆ ನಮೋ ನಮೋ ನಿಜ
ವಾದ ವಸ್ತುವಿಗೆ ನಮೋ ನಮೋ ೧

ಲೋಕ ಹಿತಾಖ್ಯಗೆ ನಮೋ ನಮೋ ಜಗ
ದೇಕವಲ್ಲಭನಿಗೆ ನಮೋ ನಮೋ
ನಾಕ ವಂದಿತಗೆ ನಮೋ ನಮೋ ನಿ-
ರಾಕಾರ ನಿತ್ಯನಿಗೆ ನಮೋ ನಮೋ ೨

ಸಿಂಧು ಆನಂದಗೆ ನಮೋ ನಮೋ
ನಾದ ಬಿಂದು ಕಳಾತ್ಮಗೆ ನಮೋ ನಮೋ
ಸುಂದರ ತೇಜಗೆ ನಮೋ ನಮೋ
ಚಿದಾನಂದ ವಿಗ್ರಹಗೆ ನಮೋ ನಮೋ ೩

## ೧೬೬

ಪೂಜೆಯ ಮಾಡಿದೆನೆ ದೇವರ ಪೂಜೆಯ ಮಾಡಿದೆನೆ
ಈ ಜಗದರಸ ಚಿದಾನಂದ ತಾನೆಂದು ಪ

ಶುದ್ಧ ಸ್ನಾನವನೆ ಮಾಡುತ ನಿರ್ಮಲ ವಸನವನು
ಬಂಧಿಸಿ ಬಿಗಿದು ಸ್ವಸ್ಥಾನಾಸ ಮಧ್ಯದಲ್ಲಿ ಕುಳಿತು ೧

ನಿಸ್ಪೃಹ ಭಸಿತವನೇ ಧರಿಸುತ ನಿಷ್ಕಲಂಕನಾಗಿ
ವಿಶ್ವೇಶ್ವರ ವಿರೂಪಾಕ್ಷನೇ ತಾನೆಂದು ೨

ಸರ್ವ ಪೂಜಿತನು ತಾನೀಗ ಸರ್ವನಿವಾರಿತನು
ಸರ್ವರೂಪಕ ತಾನೀಗೆಂದು ಧ್ಯಾನವರ್ಪಿಸಿದೆನೆ ೩

ಆನಂದ ವ್ಯಾಪಕನೆ ತಾನೀಗ ಆನಂದ ರೂಪಕನೇ
ಆನಂದಾತ್ಮಕ ತಾ ನೀಗೆಂದಾಹ್ವಾನ ವರ್ಪಿಸಿದನೆ ೪

ಇಂದ್ರಿಯ ರೂಪಕ ತಾನೀಗ ಇಂದ್ರಿಯ ವ್ಯಾಪಕನೇ
ಇಂದ್ರಿಯ ಸಾಕ್ಷಿಕ ತಾನೀಗೆಂದು ಸಿಂಹಾಸನವರ್ಪಿಸಿಡೆನೆ ೫

ನಿಶ್ಚಲಾತ್ಮಕನವ ತಾನೀಗ ನಿಶ್ಚಲೈಕ್ಯನಾದ
ನಿಶ್ಚಲವಸ್ತು ನಿಜತಾನೇ ಎಂದರ್ಘ್ಯವರ್ಪಿಸಿದೆನೆ ೬

ವಿಶ್ವದ ವಿಶ್ವಕರ್ತು ತಾನೀಗ ವಿಶ್ವ ವಿಶ್ವಭೋಕ್ತ್ರು
ವಿಶ್ವಲೀಲಾತ್ಮಕ ತಾನೀಗೆಂದು ಪಾದ್ಯವರ್ಪಿಸಿದೆನೆ ೭

ಅನಂತ ಮಹಿಮ ತಾನೀಗ ಅನಂತ ನಿಗಮ
ಅನಂತ ನಿಗಮ ಗೋಚರ ತಾನೆಂದು ಸ್ನಾನವರ್ಪಿಸಿದೆನೆ ೮

ಅಂಬರ ರೂಪಕ ತಾನೀಗ ಅಂಬರ ವ್ಯಾಪಕನೇ
ಅಂಬರದೊಳು ಚಿದಂಬರ ತಾನೆಂದು ವಸ್ತ್ರವರ್ಪಿಸಿದೆನೆ ೯

ಚೈತನ್ಯಾಧಾರ ತಾನೀಗ ಚೈತನ್ಯಾದೂರ ಚೈತನ್ಯಾಧಿಪ
ತಾನೆಂದು ಯಜ್ಞೋಪವೀತ ವರ್ಪಿಸಿದನೆ ೧೦

ಕಲುಷ ನಿರ್ಧೂತ ತಾನೀಗ ಕಲುಷ ನಿರ್ಜಿತನೇ
ಕಲುಷ ಹರತಾ ನಿಜವೆಂದಾಭರಣವರ್ಪಿಸಿದೆನೆ ೧೧

ಲೇಪಕ್ಕಾಧಾರ ತಾನೀಗ ಲೇಪ ನಿರಾಧಾರ
ಲೇಪಹರ ತಾ ನಿಜವೆಂದು ಅನುಲೇಪವರ್ಪಿಸಿದೆನೆ ೧೨

ಪುರತನು ವಿಸ್ತರಿಸಿ ತಾನೀಗ ಪುರಾಧಿಪತಾನೆನಿಸಿ
ಪುರುಷೋತ್ತಮ ತಾನೆಂದು ಸುಪುಷ್ಪವರ್ಪಿಸಿದೆನೆ ೧೩

ಪರ ಇಹವು ತಾನೇ ತಾನೀಗ ಪರಾತ್ಪರನು ತಾನೆ
ಪರವಸ್ತು ತಾ ನಿಜವೆಂದು ಧೂಪವರ್ಪಿಸಿದೆನೆ ೧೪

ಜ್ಯೋತಿಯ ರೂಪ ತಾನೀಗ ಜ್ಯೋತಿ ನಿರ್ಮಯನು
ಜ್ಯೋತಿಯಹ ಚಿಜ್ಯೋತಿಯು ತಾನೆಂದು ಜ್ಯೋತಿಯರ್ಪಿಸಿದೆನೆ ೧೫

ನಿತ್ಯನಿರ್ಲಿಪ್ತನು ತಾನೀಗ ನಿತ್ಯ ತೃಪ್ತನು
ನಿತ್ಯತೃಪ್ತ ತಾನೆಂದು ನೈವೇದ್ಯವರ್ಪಿಸಿದೆನೆ ೧೬

ಮಂಗಳವೆ ಆದ ತಾನೀಗ ಮಂಗಳಾಂಗನಾದ
ಮಂಗಳ ಮೂರುತಿ ತಾನೆಂದು ತಾಂಬೂಲವರ್ಪಿಸಿದೆನೆ ೧೭

ನಿರ್ವಿಕಾರ ನಿಜ ತಾನೀಗ ನಿರಾವಲಂಬ ನಿಜ ನಿ–
ರಾವರಣ ತಾನೆಂದು ಪ್ರದಕ್ಷಿಣವರ್ಪಿಸಿದೆನೆ ೧೮

ಜಯ ಜಯಾತ್ಮಕನೆ ತಾನೀಗ ಜಯ ಸದಾತ್ಮಕನೆ
ಜಯನಿತ್ಯಾತ್ಮಕ ತಾನೆಂದು ನಮಸ್ಕಾರವರ್ಪಿಸಿದೆನೆ ೧೯

ಲೋಕೈಕನಾಥ ತಾನೀಗ ಏಕೈಕ ನಾಥನು
ಏಕ ನಾಥನು ತಾನೆಂದು ವಿಸರ್ಜನವರ್ಜಿಸಿದೆನೆ ೨೦

ಈ ಪರಿ ಪೂಜೆಯನು ನಿತ್ಯದಿ ಆ ಪರಬ್ರಹ್ಮದಲಿ
ಭೂಪ ಚಿದಾನಂದ ರೂಪನೆ ತಾನೆಂದೀ ಪರಿ ಮಾಡಿದನೆ ೨೧

## ೧೬೭

ಬಿಡಬೇಕು ಸ್ತ್ರೀಸಂಗ ಬ್ರಹ್ಮನಾಗುದಕೆ
ಬಿಡದಿರಲು ಕೆಡುತಿಹನು ಬಿಡೆಯವಿಲ್ಲಯ್ಯ ಪ

ಕಣ್ಣುಗಳು ತಿರುಪಲಿಕೆ ಕಾಲುಕೈಯುಡುಗುವುದು
ನುಣ್ಣನೆಯ ಗಂಟೊಲಿಯೆ ಎದೆಗುಂದುವುದು ಅಯ್ಯ
ಸಣ್ಣ ಹಲ್ಲನು ಕಾಣೆ ಸರಿವುದು ಶಿವಧ್ಯಾನ
ನುಣ್ಣನೆಯ ಮುಖಕ್ಕೆ ನುಗ್ಗಹುದು ದೃಢ ಚಿತ್ತ ೧

ಕಿರುನಗೆಯ ಕಾಣಲು ಕಳಚಿಹೋಹುದು ಬುದ್ಧಿ
ಸೆರಗು ಸಡಿಲಲು ಸ್ಥೈರಣೆಯು ಅಡಗುವುದು ಅಯ್ಯ
ತಿರುಗಾಡುತಿರಲು ತಿಳಿವಳಿಕೆ ಹಾರುವುದು ಮು–
ಕುರ ಮುಖ ಕಾಣಲು ಮುಳುಗುವುದು ಅರಿವು ಅಯ್ಯ ೨

ಗಾಳಿಯದು ಹಾಯಲಿಕೆ ಗತವಹುದು ಅನುಭವವು
ಬೀಳೆ ಅವರ ನೆರಳು ಬಯಲಹುದು ಬೋಧನೆಯು
ಬಾಲ ನುಡಿಗಳ ಕೇಳೆ ಬೀಳುವುದು ಬಲ್ಲವಿಕೆ
ಬಾಲೆಯರ ಸಂಗವದು ಭವದ ತಿರುಗಣೆಯಯ್ಯ ೩

ನವನೀತ ಪುರುಷನು ನಾರಿಯೇ ಅಗ್ನಿಯು
ನವನೀತ ಕರಗದೆ ಅಗ್ನಿಯೆದುರಿನಲಿ

ಯುವತಿ ಸನಿಹದಲಿರಲು ಎಲ್ಲಿ ಬ್ರಹ್ಮವು ನಿನಗೆ
ಶಿವನಾಣೆ ಸತ್ಯವಿದು ಸುಳ್ಳೆಂದಿಗೂ ಅಲ್ಲ ೪

ಪಾತಕದ ಬೊಂಬೆಯು ಫಣಿವೇಣಿಯರ ರೂಪ
ಘಾತಕವು ತಾನಹುದು ಯೋಗಗಳಿಗೆಯಲಯ್ಯ
ಮಾತು ಬಹಳವದೇಕೆ ಮಹಿಳೆಯನು ತ್ಯಜಿಸಿದರೆ
ದಾತ ಚಿದಾನಂದನು ತಾನೆ ಅಹನಯ್ಯ ೫

## ೧೬೮

ಬಿಟ್ಟೆನಯ್ಯ ಬಿಟ್ಟೆನಯ್ಯ ಪ್ರಪಂಚವ
ಮುಟ್ಟಿದೆನು ಬ್ರಹ್ಮವನು ಮುಕ್ತನಾದೆನು
ಹುಚ್ಚು ಮೂಳಿ ಹೆಂಡತಿಯ ಪ

ಮೆಚ್ಚಿ ನಲಿವ ಮಗನು ಸೊಸೆಯು
ಉಚ್ಚಿ ಬದುಕನೆಲ್ಲ ನಾನು ಉಡುಗಿ ಕಳೆದೆನು ೧

ನೆಂಟರಿಷ್ಟರೆಲ್ಲರನ್ನು ದೂರಮಾಡಿ ಕುಳಿತೆ ನಾನು
ಹೆಂಟೆಯಂತೆ ಕಂಡೆನಯ್ಯ ಹೇರು ಹೇಮವ ೨

ಅಷ್ಟದೇವರನ್ನು ನಾನು ಅಡವಿಗೆಂದು ಅಟ್ಟಿಬಿಟ್ಟೆ
ಕಷ್ಟಪಡಿಪ ಪುರೋಹಿತನ ಕಡೆಗೆ ತಳ್ಳಿದೆ ೩

ವಾರವಾರ ನೇಮವನ್ನು ಒಲೆಯನೀಗ ಹೊಗಿಸಿದೆ
ದಾರಿ ಹಚ್ಚಿಸಿದೆನು ಕುಲವ ಶೀಲವ್ರತಗಳ ೪

ಮತಗಳೆಂಬ ವಾದವನ್ನು ಮಣ್ಣುಪಾಲು ಮಾಡಿದೆನು
ಸತತ ಚಿದಾನಂದ ಬ್ರಹ್ಮ ಸಾಕ್ಷಿಯಾದನು ೫

## ೧೬೯

ಬೆಳಗಾಯಿತು ಕೇಳಿ ಭ್ರೂಮಧ್ಯ ಮಂಟಪದೊಳಗೆ
ಬೆಳಕು ಪಸರಿಸುತಿದೆಕೊ ಎತ್ತಿತ್ತ ನೋಡೆ
ಮುಂಬೆಳಕು ಕಾಣಿಸುತ್ತ ರವಿಕೋಟಿಯಂ ಪಳಿಯುತಿದೆ
ನಿರ್ಮಳ ನೋಡಲುಪ್ಪವಡಿಸ ಯತಿರಾಜ ಪ

ಷೋಡಶಾಕಾರವಹ ಸೋಮ ಕಳೆಗುಂದಿಹುದು
ಖೋಡಿ ಜನನ ಮರಣ ಚಕ್ರ ತಾ ಕೊರಗಿದುದು
ಪಾಡಳಿದು ಜೀವಶಿವ ಶೈತ್ಯ ಬಿಟ್ಟಾಡಿದುದು
ಆರೂಢನೊಲಿದುಪ್ಪವಡಿಸ ಯತಿರಾಜ ೧

ತಾಪತ್ರಯಗಳೆಂಬ ರಾತ್ರಿ ತಾ ಜಗುಳಿದುದು
ಪಾಪಿ ಇಹಪರವೆಂಬ ಸುಳಿಗಾಳಿ ಜಾರಿದುದು
ಕೋಪಿ ಸಪ್ತವ್ಯಸನ ಗೂಗೆ ಕಣ್ಣುಡುಗಿದುದು
ನಿರ್ಲೇಪನುಪ್ಪವಡಿಸ ಯತಿರಾಜ ೨

ಅಷ್ಟ ಪ್ರಕೃತಿಗಳೆಂಬ ನಕ್ಷತ್ರವಡಗಿದವು
ದುಷ್ಟ ಪಂಚೇಂದ್ರಿಯದ ಕುಮುದಗಳು ಬಾಡಿದವು
ನಷ್ಟರಾರುವರೆಂಬ ಶಿವನಿಕರ ವೋಡಿದವು
ಶಿಷ್ಟ ನೀನೊಲಿದುಪ್ಪವಡಿಸ ಯತಿರಾಜ ೩

ಶಾಂತರಸ ಲಹರಿ ತನಿವಾತ ಸೂಸುತಲಿದೆ
ಸ್ವಾಂತನಾದ ಭ್ರಮರ ಪರಿಪರಿಯ ಪಾಡುತಿದೆ
ಅಂತರಂಗದ ಕಮಲ ತಾನಿಲ್ಲಿ ಬಿರಿಯುತಿದೆ
ನಿಶ್ಚಿಂತನೊಲಿದುಪ್ಪವಡಿಸ ಯತಿರಾಜ ೪

ನಿರುಪಮ ನಿರಾಲಂಬ ನಿರಮಾಯ ನಿರಪೇಕ್ಷ
ಪರಮ ಪರತರ ವಸ್ತು ಪರಮೇಶ ಪರಮಾತ್ಮ

ನಿರುತ ನಿತ್ಯಾನಂದ ಮೂರ್ತಿ ಚಿದಾನಂದ
ಗುರುನಾಥನುಪ್ಪವಡಿಸ ಯತಿರಾಜ ೫

## ೧೭೦

ಬೇಡಿದೆನು ಕೊಡುಕಂಡ್ಯ ಬೇಡಿದೆನು ಕೊಡುಕಂಡ್ಯ
ಬೇಡಿದೆನು ನೀ ನೀಡು ಕಂಡ್ಯಾ ಪ

ನಿನ್ನ ಹಾಡನು ಹಾಡಿ ನಿನ್ನ ನಿಜದೊಳಗಾಡಿ
ನಿನ್ನನೇ ಕಾಡಿ ನಿನ್ನನೇ ಬೇಡಿ
ನಿನ್ನ ಓಲಗವ ಮಾಡಿ ನಿನ್ನ ನಿಟ್ಟಿಸಿ ನೋಡಿ
ನಿನ್ನ ಲೀಲೆಯೊಳು ನಾನಿರುತಿಹುದದನಾ ೧

ನೋಟದೊಳಗಿನ ನೋಟ ಕೂಟದೊಳಗಿನ ಕೂಟ
ಆಟದೊಳಗಿನ ಆಟ ಇಂಥ ಆಟ
ನೀಟದೊಳಗಿನ ನೀಟ ನಿನ್ನಲ್ಲಿ ಬೆರೆದಾಟ
ಪಾಟ ಮಾಡಿಯೆ ಎನಗೆ ಪಾಲಿಸುವುದನ ೨

ಶರೀರದಿಚ್ಛೆಯನುಳಿದು ಶರೀರ ವಾಸನೆ ಕಳೆದು
ಶರೀರ ವಿಷಯದ ಹೊಲಬೆಲ್ಲ ಬಳಿದು
ಶರೀರದ ನೆಲೆಯು ತಿಳಿದು ಶರೀರದೊಳೊಬ್ಬನನುಳಿದು
ಶರೀರದ ಸಂಗ ದೂರಕದಿಹದದನಾ ೩

ನಾದಲಕ್ಷಿಸಿ ಹಿಡಿದು ನಾದ ಸಂಗವ ಪಡೆದು
ನಾದಾಮೃತವ ಕಿವಿತುಂಬ ಕುಡಿದು
ನಾದ ದಾರಿಯ ನಡೆದು ನಾದ ದೊಳ್ವೆಳ ಗೊಡದು
ನಾದವನೆ ಮರೆತು ಸುಖಿಸುತಿಹದದನ ೪

ನಿನ್ನ ನೀನುಳಿದಿಲ್ಲ ನೀ ದೈವ ಜಗಕೆಲ್ಲ
ನಿನ್ನಂತೆ ಆಪ್ತರಿಲ್ಲ ನಿನ್ನ ನಂಬಿದೆನಲ್ಲ
ನೀ ಕಾಯಬೇಕಲ್ಲ ಚೆನ್ನ ಚಿದಾನಂದ
ನೆನೆಪಂಬತಾತ್ವಿಕ ಹಿನ್ನೆಲೆಯ ಕೀರ್ತನೆಗಳುದದನಾ ೫

## ೧೭೧

ಬ್ರಹ್ಮವೆಂಬಿರಿ ನಿಮ್ಮ ಬರಿದೆ ಮಾತಲ್ಲದೆ
ಬ್ರಹ್ಮನಾದವನ ಬಗೆಯನು ಹೇಳುವೆ ಕೇಳಿ ಪ

ಆಶಾಪಾಶಗಳಿಗೆ ವಶವಾಗದವ ಬ್ರಹ್ಮ
ಮೋಸಹೋಗದೆ ಮಾಯೆಗೆ ಇರುವವ ಬ್ರಹ್ಮ
ಕೂಸಿನಂದದಿ ಭಾವ ಕೂಡಿಹನವ ಬ್ರಹ್ಮ
ಘಾಸಿಯಾಗನು ಮದನಗೆ ಅವನು ಬ್ರಹ್ಮ ೧

ಸತಿಸುತರಿಚ್ಛೆಯ ಸಮನಿಸದವ ಬ್ರಹ್ಮ
ಇತರರ ವಾಕ್ಯಕೆ ಕಿವಿಗೊಡದವ ಬ್ರಹ್ಮ
ಗತಿ ಯಾವುದೆನಗೆಂದು ಗುಣಿಸುತಿಪ್ಪವ ಬ್ರಹ್ಮ
ಅತಿ ಹರುಷದಿಂ ಬಾಳುತಿರುವವನು ಬ್ರಹ್ಮ ೨

ಸಕಲ ವಿಶ್ವವು ಎನ್ನ ಸರಿಯು ಎಂಬುವವ ಬ್ರಹ್ಮ
ಸುಖ ದುಃಖವನು ಸಮದೃಷ್ಟಿಯಲಿ ನೋಡುವವ ಬ್ರಹ್ಮ
ಭಕುತಿ ಭಾವನೆಯಿರುವ ಮಾನವನು ತಾ ಬ್ರಹ್ಮ
ಮುಕುತಿ ಮರ್ಗದಲಿರುವ ಯೋಗಿಯವ ಬ್ರಹ್ಮ ೩

ಹುಚ್ಚರಂದದಿ ನೋಡೆ ಹುದುಗಿಕೊಂಡಿಹ ಬ್ರಹ್ಮ
ಅಚ್ಚರಿಯ ಅವನಾಟ ತಿಳಿವವನು ಬ್ರಹ್ಮ
ನಿತ್ಯಕಾಲದಿ ಜ್ಞಾನ ಬೇಕೆನ್ನುವವ ಬ್ರಹ್ಮ
ಕೊಚ್ಚಿತೆಂಬನು ಎಲ್ಲ ಕುಲಜ ಬ್ರಹ್ಮ ೪

ದಾಸದಾಸರ ದಾಸನಾದವನೆ ಬ್ರಹ್ಮ
ಈ ದೇಹದಾ ಹಂಗ ತೊರೆದವನು ಬ್ರಹ್ಮ
ಭಾಸುರ ಚಿದಾನಂದನ ಭಜಿಪ ಭಕ್ತನೆ ಬ್ರಹ್ಮ
ವಾಸರಿಲ್ಲವೋ ಈ ವಾಕ್ಯಕೆಂಬುವವ ಬ್ರಹ್ಮ ೫

## ೧೭೨

ಬ್ರಹ್ಮತಾನೆ ನಿತ್ಯಾ ಬ್ರಹ್ಮತಾನೆ
ಬ್ರಹ್ಮ ಪರಾತ್ಪರ ಬ್ರಹ್ಮ ತಾನೇ ಪ

ಕಾಲು ಕಣ್ಣು ಕೈ ಬಾಯಿ ಕಿವಿ ಮೂಗು ತಾಳಿಕೊಂಡು
ಕಾಲವನಿಲ್ಲಿಯೆ ಕಳೆಯಲು ಬಂದ ಗುರುಮೂರ್ತಿ
ಮೂಲಾಧಾರನೆಂದು ತಿಳಿದುಕೊಳ್ಳಿರಾ ಬ್ರಹ್ಮ ತಾನು ೧

ಪುತ್ರ ಮಿತ್ರರರು ಕಳತ್ರರಾಗಿ ಬಂಧುವಾಗಿ
ನಿತ್ಯದಾಟವ ಇಲ್ಲಿ ಕಳೆಯಲು ಬಂದ ಬ್ರಹ್ಮ ತಾನೇ ೨

ಆಪವಿರಲು ಚಂದ್ರನು ಬಂದ ತೆರನಂತೆ
ಉಪಾಧಿಯಿಂದ ಚಿದಾನಂದ ಬಂದ ಬ್ರಹ್ಮತಾನೇ
ಉಪಾಧಿಯಿಂದ ಚಿದಾನಂದ ಬಂದ ಗುರುಮೂರ್ತಿ
ಉಪಾಧಿ ಹರನೆಂದು ತಿಳಿದುಕೊಳ್ಳಿ ಬ್ರಹ್ಮತಾನೆ ೩

## ೧೭೩

ಬ್ರಹ್ಮಾಸ್ತ್ರ ಬ್ರಹ್ಮಾಸ್ತ್ರ ಎಂಬ ಮಾತೆಂತೆನೆ
ಬದಲಿಲ್ಲದಿರುವುದೇ ಬ್ರಹ್ಮಾಸ್ತ್ರ
ಬ್ರಹ್ಮಾಸ್ತ್ರಕೆ ಬ್ರಹ್ಮಾಸ್ತ್ರವೇಯಲ್ಲದೆ
ಬ್ರಹ್ಮಾಸ್ತ್ರವೇ ಬ್ರಹ್ಮಾಸ್ತ್ರವು ಬ್ರಹ್ಮಾಸ್ತ್ರ ಪ

ಪಾಶುಪತಾಸ್ತ್ರ ನಾರಾಯಣಾಸ್ತ್ರವನೆಲ್ಲ
ಪೂರ್ಣಾಹುತಿಯ ಕೊಂಬುದೇ ಬ್ರಹ್ಮಾಸ್ತ್ರ
ವಾಸವಾದಿತ್ಯ ಆಗ್ನೇಯಾಸ್ತ್ರವನೆಲ್ಲ
ಬೆದರದೇ ನುಂಗುವುದೆ ಬ್ರಹ್ಮಾಸ್ತ್ರ ೧

ಬ್ರಹ್ಮರಂಧ್ರವೆ ಅದು ರಾಜಯೋಗ ಸ್ಥಾನ
ಬ್ರಹ್ಮರಂಧ್ರದ ನಿವಾಸಿ ಬ್ರಹ್ಮಾಸ್ತ್ರ
ಬ್ರಹ್ಮದೇವರ ಜಿಹ್ವೆ ಹಿಡಿದತುರೀಯ ದೇವತೆ
ಬ್ರಹ್ಮಾಸ್ತ್ರವೇ ಅಸ್ತ್ರವು ಬ್ರಹ್ಮಾಸ್ತ್ರ ೨

ಬ್ರಹ್ಮ ತುರೀಯಾತೀತ ಬ್ರಹ್ಮಾಸ್ತ್ರ
ನಿರ್ಗುಣ ಬ್ರಹ್ಮಾಸ್ತ್ರವೆ ಸ್ವರಾಟ್ ಬ್ರಹ್ಮಾಸ್ತ್ರ
ಬ್ರಹ್ಮ ಚಿದಾನಂದ ಬ್ರಹ್ಮಾಸ್ತ್ರವೆನಿಸಿತು
ಬ್ರಹ್ಮಾಸ್ತ್ರವೇ ಬಗಳ ಬ್ರಹ್ಮಾಸ್ತ್ರ ೩

## ೧೭೪

ಬ್ರಹ್ಮಾಸ್ತ್ರದ ನಿಜವನು ನಾ ಪೇಳುವೆ
ಬ್ರಹ್ಮಾಸ್ತ್ರವೇ ಬ್ರಹ್ಮವು
ಬ್ರಹ್ಮಾಸ್ತ್ರ ತಾನೆಂದು ಭಜಿಸುವಾತನು
ಬ್ರಹ್ಮಾಸ್ತ್ರವೇ ಆತನು ಬ್ರಹ್ಮಾಸ್ತ್ರ ಪ

ಪೀತಾಂಬರದುಡಿಗೆ ರಾಶಿಯು ಹಾಕಿದ ಎದೆಕಟ್ಟು
ಪೀತವಾಗಿಹುದೇ ಬ್ರಹ್ಮಾಸ್ತ್ರ
ಪೀತವರಣ ಪೀತ ಪುಷ್ಪ ಗಂಧಾನುಲೇಪನ
ಪೀತದಿಂದಿಹುದೇ ಬ್ರಹ್ಮಾಸ್ತ್ರ ಪ್ರೀತಸರ್ವವು ಆಗಿ
ಪ್ರೀತ ಪ್ರೀತೆಯೆ ಆಗಿ ಪೀತಾವರಣವೆ ಬ್ರಹ್ಮಾಸ್ತ್ರ ೧

ಬಿಗಿದ ಬತ್ತಳಿಕೆಯು ಎಡಹಸ್ತ ಶಾರ್ಙ್ಗದಿ
ಝಗಿ ಝಗಿಸುವುದೇ ಬ್ರಹ್ಮಾಸ್ತ್ರ
ತೆಗೆದು ಕೆನ್ನೆಗೆ ಶರವನೆಳೆದು ರೌದ್ರದಿ
ನಿಗಿನಿಗಿನಿಗಿಸುವುದೇ ಬ್ರಹ್ಮಾಸ್ತ್ರ ೨

ವೀರ ಮಂಡಿಯ ಹಾಕಿ ಖಡ್ಗವ ಸೆಳೆದು
ತೂರತಲಿಹುದೇ ಬ್ರಹ್ಮಾಸ್ತ್ರ
ಕಾರುವ ಕಿಡಿಗಳ ಕ್ರೂರ ದೃಷ್ಟಿಯಲಿ
ಘೋರವಾಗಿಹುದೇ ಬ್ರಹ್ಮಾಸ್ತ್ರ
ಬಾರಿಬಾರಿಗೆ ಹೂಂಕಾರಗೈಯುತ ಅವಡುಗಚ್ಚಿ
ಮಾರಿಯಾಗಿಹುದೇ ಬ್ರಹ್ಮಾಸ್ತ್ರ
ಸಾರ ಕಿಚ್ಚಿನ ಜ್ವಾಲೆ ಭುಗುಭುಗು ಛಟಛಟ
ಎನುತಲಿಹುದದೇ ಬ್ರಹ್ಮಾಸ್ತ್ರ ೩

ದಿಸೆಗಳು ಮುಳುಗಿವೆ ಉರಿಯ ಕಾಂತಿಯಲಿ
ರವಿಶತ ಕೋಟಿಯ ರಶ್ಮಿ ಚೆಲ್ಲುವುದೇ ಬ್ರಹ್ಮಾಸ್ತ್ರ
ಪಸರಿಸಿ ಇಹ ಬ್ರಹ್ಮಾಂಡವನಂತವ
ಭಸ್ಮ ಮಾಡುವುದೇ ಬ್ರಹ್ಮಾಸ್ತ್ರ
ನುಸಿಗಳು ಅಸಂಖ್ಯಾದಿ ಬಹ್ಮರುದ್ರಾದ್ಯರ
ಅಸುವ ಕೊಂಬುದೇ ಬ್ರಹ್ಮಾಸ್ತ್ರ ೪

## ೧೭೫

ಭಂಗಿ ಹತ್ತಿದೆ ಜ್ಞಾನ ಭಂಗಿ ಹತ್ತಿದೆ
ನುಂಗಿ ಕಾಮ ಕ್ರೋಧಗಳನ್ನು
ಅಂಗ ಮರೆವ ಮರವೆನಿಕ್ಕಿ ಪ

ನಿತ್ಯತೃಪ್ತನು ನಿರಾಕಾರ ನಿರ್ಲಿಪ್ತನು
ಪ್ರತ್ಯಗಾತ್ಮ ಅತ್ಯಾಧಿಕ
ಸತ್ಯಸಂಧನು ತಾನೆ ಎಂಬ ೧

ವಿಶ್ವ ನಾಟಕ ಮಹಾವಿಶ್ವದಾಧಾರ
ವಿಶ್ವದೊಳ ಹೊರಗೆಲ್ಲ
ವಿಶ್ವತೃಪ್ತ ತಾನೆ ಎಂಬ ೨

ಏನ ಕೇಳುವಿರೋ ನೀ
ವೇನ ಹೇಳುವಿರೋ
ಜ್ಞಾನ ಮೂರುತಿ ಚಿದಾನಂದ
ತಾನೆ ತಾನೆ ಎಂಬ ೩

## ೧೭೬

ಭವ ಸಂಸಾರ ಶರಧಿಯ ಗುರು ಅಂಬಿಗ ದಾಟಿಸಿದ
ಶಿವನ ಮಾಡುತಲೆನ್ನ ಮುಕ್ತಿಗೇರಿಸಿದ ಪ

ಬಯಕೆಗಳೆಂಬ ತೆರೆಯು ತಾಪತ್ರಯಗಳೆ ಲಹರಿಯು
ಪ್ರಿಯಗಳೆಂಬುವೆ ನೊರೆಯು ಕ್ಲೇಶವೆಂಬುದೆ ಹರಿಯು ೧

ತಿಳಿವು ಇಲ್ಲದ ಮಡುವು ಕಸಿವಿಸಿ ಎಂಬುದೆ ದಡವು
ಬಲು ಅವಿವೇಕವೆ ಗುಡುಗು ಸುಖದುಃಖಗಳೆಂಬುವು ತೆರೆಯು ॥

ಸತಿಯೆಂಬುವಳೆ ಮೊಸಳೆ ಸುತರೆಂಬವರೆ ಜಿಗಳೆ
ಅತಿ ಬಗುಳವೇ ನೀರ್ಗೋಳಿ ಮೋಹವೆಂಬುದೆ ಸುಳಿ ೩

ಸಂದಣಿಯೆಂಬುವು ಜಲಚರವು ಸಡಗರವೆಂಬುದೆ ತಳವು
ಹೊಂದಿಹ ಚಿಂತೆಯ ದಡವು ಸ್ಥಿರವಿಲ್ಲದುದೇ ಗಡುವು ೪

ಜ್ಞಾನದ ನಾವೆಗಳಿಂದ ಪ್ರಣವದ ಹುಟ್ಟುಗಳಿಂದ
ದಾಟಿಸಿದ ಚಿದಾನಂದ ಅಂಬಿಗ ಛಲದಿಂದ ೫

## ೧೭೭

ಭ್ರಮೆಯಿಂದ ಎರಡಾಯ್ತು ಇದ್ದುದೊಂದೆ ವಸ್ತು
ಭ್ರಮೆಯಳಿದ ಬಳಿಕ ಮುನ್ನಿಹುದೆ ನಿಜವಸ್ತು ಪ

ಸ್ಥಾಣುವೆಂಬುದು ಪೋಗಿ ಮನುಜ ರೂಪಾದಂತೆ
ಕಾಣಿಸಿತು ರಜ್ಜುವದು ಸರ್ಪದಂತೆ ೧

ಕೆಂಪು ಎಂಬುದು ಪೋಗಿ ಕನಕರೂಪಾದಂತೆ
ಇಂಪು ಕಾಣಿಸಿ ಶುಕ್ತಿ ರಜತದಂತೆ ೨

ಒಬ್ಬನಿರುತಿಪ ಆತ್ಮ ಜೀವತ್ವವದು
ಭ್ರಾಂತಿ ಒಬ್ಬನೆ ಚಿದಾನಂದ ತಾನೆ ಸತ್ಯ ೩

## ೧೭೮

ಮಡಿಯಾಗಿ ತಂಗಿ ಮಹಾಲಿಂಗ ಪೂಜೆ ಮಾಡೆ
ಮುಕ್ತಿ ಸದನಕೇರುವೆ ನೋಡೇ ಪ

ದೇಹವೆಂಬ ಮನೆಯ ಸಾರಿಸೆ
ಮೋಹವೆಂಬ ತಂಗಳ ಮಡಕೆ ಹೊರಗಿರಿಸೆ
ಸೋಹಂ ಎಂಬ ರಂಗವಲ್ಲಿಯನಿಡೆ
ಜ್ಯೋತಿಯನು ಬೆಳಗಿಸೆ ನೀನು ೧

ನಾನಾವಾಸನೆಯ ಮೈಲಿಗೆಯನು ಬಿಡೆ
ಮನಮೈಲಿಗೆಯನು ತೊಳೆ
ಸ್ವಾನುಭವದ ಪೀತಾಂಬರವನುಡೆ
ನಾನು ಎಂಬ ಕಸವನು ಗುಡಿಸೆ
ನಾದದ ಸುಖವನು ಅನುಭವಿಸೆ ನೀನು ೨

ಧ್ಯಾನ ಮನನೆನಪಿಲ್ಲದಾಗಿ
ಸ್ವಸ್ಥಾನದಲ್ಲಿ ಭಾನುವೀಗ ಬೆಳಗಿದಂತಾಗಿ ನೀನು
ನಾನು ಎಂಬುದು ಅಳಿದು ನೀನೆ
ಚಿದಾನಂದನಾಗಿ ಪೂಜಿಸು ೩

## ೧೭೯

ಮನವೆಂಬ ಬೇಟೆಗಾರ
ಹತ್ತಿಂದ್ರಿಯ ನಾಯಿ
ಮನ ಬಂತು ಘೋರವಾದ
ಮನಮನಾದಿ ಮೃಗಂಗಳನು
ಮಹಾಕೊಲೆಯ ಕೊಲ್ಲುತಿಹನು ಪ

ಮಹಾಪ್ರಪಂಚ ಬಲೆಯು
ತಾಪತ್ರಯ ತೊಡಕು
ಮಹಾವಿಷಯ ಮೇವು ಮಹಾವಿಷಯ
ಮೇವಿಗೆ ಬಂದು ಮನುಜಮೃಗಗಳು ಕೆಡವುತಿಹವು ೧

ನಯನೇಂದ್ರಿಯಗಳೆಂಬ ನಾಯಿ
ಕಂಡಾಗಲೆ ಹಿಡಿವುದು
ಪ್ರಾಯ ಒಳ್ಳೆಯ ನಾಯಿ
ನಿಯತವಿಹುದಲ್ಲೆ-
ನ್ನದಲೆ ನೆನೆದಾಗಲೇ ಹಿಡಿಯುತಿಹುದು ೨

ಒಂದಕ್ಕದೊಂದು ವೇಗವುಪತ್ತೀಪರಿನಾಯಿ
ಬಂದರೆಂತೊಂದು ಸತ್ವವು
ಬಂದು ಹಿಡಿಯದಿರೆ
ಮತ್ತೊಂದಾದರೆ ಹಿಡಿದು ಕೆಡವುತಿಹುದು ೩

ಬಾಹ್ಯದ ಅಡವಿಯೊಳಗೆ
ಮೃಗಂಗಳಿಗೆ ಬಹಬಾಧೆ ನಿತ್ಯದೊಳಗೆ
ಬಾಹ್ಯ ವಿಷಯಪೇಕ್ಷೆಯು
ಬಿಟ್ಟರೆ ಬದಿಯ ನಾಯಿಗಳು ಸೇರದಿಹವು ೪

ತನಗೆ ತಿಳಿಯಬೇಕು
ತಾನುಳಿವುದಕೆ ತನಗೇಯಬೇಕು
ತನ್ನ ಚಿದಾನಂದನೆಂದು ತನ್ನ ಕಂಡರೆ ಭಯವಿಲ್ಲ ೫

## ೧೮೦

ಮರತೆ ನೀ ಕಂಡ್ಯ ಮನವೇ ಎಚ್ಚರವು
ಗುರುವರನ ನೆನೆಯೋ ನೀನು
ಅರಿತು ಸರ್ವಸರ್ವರಲ್ಲಿ ಅತ ತಾನಿಹನೆಂದು
ಹಿಂದು ನೆಲೆಗೊಳಿಸು ಬೇಗ ಪ

ಅಣುಮಹತ್ತಾದನೆಂದು
ಅನಂತ ಗುಣಗಣನೆಯಾದನೆಂದು
ಎಣಿಸೆ ಏಕ ದೇವಾದವನ
ಕುಣಿಕುಣಿದು ನೆನೆದು ಆಡುವಾಡು ೧

ಅವಾವಸ್ಥೆಯ ತೋರ್ಪ
ಅವನೆಲ್ಲ ತೀವಿಹನು ಪೂರ್ಣನಾಗಿ

ದೇವದೇವಾದವನ ಧೈರ್ಯದಿಂ ಹೃದಯದಲಿ
ಸಾವಧಾನದಲಿ ನಿಲಿಸು ಬಲಿಸು ೨

ನಿರುಪಮ ನಿರಾಶಾಪರ ನಾ
ನಿಶ್ಚಿಂತ ನಿರುತ ನಿರ್ಲೇಪನಾ
ಪರಮ ಪಾವನ ಮೂರ್ತಿ ಪದ್ಮಾವತಿ ಶತಕೋಟಿ
ವರ ಚಿದಾನಂದ ಗುರುವಾ ಸ್ಥಿರವಾ ೩

## ೧೮೧

ಮಾಡುತಿಪ ಸಂಸಾರ ಮಲಿನ ಹೊದ್ದದೆಯೋಗಿ
ಆಡಲೇನವ ಆನಂದವಿಹ ಸುಖವ ಪ

ಬಾಲ ಶಿಶುಲೀಲೆಗಳ ಬಗೆ ಬಗೆಯ ಲಾಲಿಸುತ
ಶೂಲಧರಸುತರೀಗ ಬಂದರೆನುತ್ತ
ಕಾಲು ಕೈ ಮೋರೆಗಳ ತೊಳೆದುಣಿಸಿ ರಕ್ಷಿಸುತ
ಮೂಲೋಕಕೆನ್ನ ಭಾಗ್ಯ ಮಿಗಿಲು ಮಿಗಿಲೆನುತ ೧

ಸತಿ ವಿನೋದವ ಮಾಡೆ ಸರಸವನೆ ಮಾಡುತ್ತ
ಅತಿ ಆದಿವಸ್ತು ತಾನೀಕೆಯನುತಾ
ಮತಿಭ್ರಾಂತನಾಗದಲೆ ಮಂಗಳನು ತಾನೆನುತ
ಮತಿಯಾಟ ಬ್ರಹ್ಮವಿದು ಇದುವೆ ಎನ್ನುತ್ತ ೨

ಬಡತನವು ಬಂದು ಕಾಡುತ್ತಲಿರೆ ನೋಡುತ್ತ
ದೃಢಬುದ್ಧಿಯಾಗಿ ತಾನೀಗಲಿರುತ
ಬಿಡದೆ ರಕ್ಷಿಪ ವಿಶ್ವಕುಟುಂಬಿಯಹನೆನುತ
ಪಡದೆ ಆಯಾಸ ಸುಖವಾಸಿಯಾಗಿರುತ ೩

ಬಡಿದಾಡುತಿಹ ಗೃಹದ ಜನರುಗಳ ನೋಡುತ್ತ
ಬಿಡು ನಿನ್ನ ಬುದ್ಧಿಯನು ಎಂದು ಹೇಳುತ್ತ
ಕಡೆಗಣಿಸಿದವರ ಅತ್ತಿತ್ತ ಮಾಡುತ್ತ
ಕಡಹ ನಿಶ್ಚಲದಿಂದ ಮತಿಶಾಂತವಿರುತ ೪

ನಿಂದ್ಯದೂರಪವಾದವನು ಕೇಳುತ್ತ
ಮಂದ ಶ್ರವಣನೋ ಎಂಬ ತರದಲಿರುತ
ನಿಂದು ದೃಢ ಚಿತ್ತದಲಿ ನಿರ್ಲೇಪ ತಾನೆನುತ
ಬಂಧಹರ ಚಿದಾನಂದ ತಾನಾದಗೆನುತ ೫

## ೧೮೨

ಮಾರಿಯನು ತೋರುತಿಹೆನು ಅದನೀಗ
ನಾರಿ ಎಂದೆಂಬರಯ್ಯ ಪ

ಸೀರೆ ಕುಪ್ಪಸವನುಟ್ಟು
ಸಿಂಗರದಿ ತೋರ ಕಂಕಣವನಿಟ್ಟು ಅಯ್ಯ
ಮೂರಳೆಯ ಕಟ್ಟಾಣಿ ಕಟ್ಟಿಯೇ
ಮೋರೆ ಮುರಕಿಸುತಿಹುದು ಅಯ್ಯ ೧

ಚಳ್ಳತುಂಬುಗಳಿಂದ
ಚವುರಿ ಬೆಳ್ಳಿಯ ಬಳೆಗಳಿಂದ ಅಯ್ಯ
ಮುಳ್ಳು ಗಜ್ಜೆಗಳ ಧರಿಸಿ ಮನೆಯೊಳಗೆ
ಹಲ್ಲು ಕಡಿಯುತಲಿಹುದು ಅಯ್ಯ ೨

ಒಲೆ ಮಾಡಿಸು ಎಂಬುದು
ವರಹಕೆ ಬಾಳುವೆ ನೋಡಿರಿ ಎಂಬುದಯ್ಯ
ಹೇಳುವುದು ಕಿವಿಯೊಳಗೆ ಲೋಭ
ಕಾಲು ಕೈ ತಿರುಹುವುದು ಅಯ್ಯ ೩

ಕರೆಕರೆಯ ಮಾಡುತಿಹುದು ತಾಯಿಯ
ಪೊರಡಿಸು ಮನೆಯಿಂದಲೆಂಬುದಯ್ಯ
ಪರನ ಚಿಂತೆಗೆ ಹಾನಿಯು ಇದರಿಂದ
ನರಕ ಬಹಳವ ತಿರುಗುವೆ ಅಯ್ಯ ೪

ನಾರಿಯೆನಿಸಿಹುದೆ ಮೃತ್ಯು
ಇದನೀಗ ದೂರ ಮಾಡಿದನಾದರೆ ಅಯ್ಯ
ಸೇರುವುದು ಸರ್ವಮುಕ್ತಿ
ಚಿದಾನಂದನಿರೆ ತಾನೆಯಹುದು ಅಯ್ಯ ೫

## ೧೮೩

ಮುಕ್ತಿ ಬೇರಿಲ್ಲಯ್ಯ ಸಾಯುಜ್ಯಮುಕ್ತಿ ಬೇರಿಲ್ಲವೋ
ಮುಕ್ತಿ ಬೇರಿಲ್ಲ ಭಕ್ತಾ ಭಕ್ತ ವಿರಕ್ತರ
ಪಾದ ನೆನೆಹು ಎಂಬುದು ನಿಜ ಪ

ನಿತ್ಯನಿರ್ಗುಣಧಾರನ ನಿರಾಲಂಬ
ಪ್ರತ್ಯಯ ಮಂಗಳಕಾರನ
ಸತ್ಯಸಂಪದನಿಂದ ಸುಗುಣಾದಿವರ್ಧಿಪ
ನಿತ್ಯಾನಂದರ ನೆನಹು ಎಂಬುದು ನಿಜ ೧

ಆಶಾಪಾಶಗಳಳಿದುದು ಅಹಂ ಎಂಬ
ವಾಸನೆಯ ಕಳೆದು ದೋಷರಹಿತವಾದ
ದಾಸರ ದಾಸನೆಂದೆನಿಪ ಸುದಾಸನೆಂಬುವನೆ ನಿಜ ೨

ತರಣಿ ಕಿರಣಾಬ್ಧಿಯ ತಾಳಿರುವಂಥ
ಗುರು ಚಿದಾನಂದ ಮೂರ್ತಿಯ
ಸಿರಿಚರಣವ ಕಂಡು ಶೀಘ್ರದಿ ಪೂಜಿಸೆ
ಗುರುತಾನದನೆ ಗುಣನೆನೆವುದೆ ನಿಜ ೩

## ೧೮೪

ಮುಟ್ಟು ಚಟ್ಟೆಂದು ನಗುವಯ್ಯ
ನಿನ್ನ ತಿಳಿಯಯ್ಯ
ಮುಟ್ಟು ಚಟ್ಟೆಂಬುದು ನಗುವಯ್ಯ
ಮುಟ್ಟಿದು ಆದುದು ನಿನ್ನಿಂದಲೆ
ಮುಟ್ಟಿಗೆ ಸಾಕ್ಷಿಯು ನೀ ಪರವಸ್ತು ಪ

ತಿಂಗಳು ತಿಂಗಳು ರಕ್ತಕಲಕು ಘಟ್ಟಾಗಿ ಬಲಿತು
ಇಂಗಾ ಇಂಗಡದ ವಯವ ಜಗಿತು
ಅಂಗಾಯಿತು ತೆರದ
ಅಂಗವ ಮುಟ್ಟಿರಿ ಮುಟ್ಟಿರಿ ಎಂದು
ಮಂಗನ ತೆರದಲಿ ಕುಣಿವುದು ಮುಟ್ಟು ೧

ಮೃಗಜಲದಂತೆ ಮಾಯೆ ಮುಟ್ಟು
ಆದುದು ಯಥೇಷ್ಟ
ಬಗೆಬಗೆ ರೂಪಳವಟ್ಟು
ತೋರಿದವದುರಿಟ್ಟು
ನಗಸಾಗರನದಿ ನರಸುರ ಕ್ರಿಮಿಪಶು
ನಗಧರ ಹರವಿಧಿ ಲೋಕವೆ ಮುಟ್ಟು ೨

ಮುಟ್ಟು ಭಟ್ಟರು ಹೇಳುವಂತಿಲ್ಲ
ಬೆಳಗಿದುದು ಎಲ್ಲ
ಅಷ್ಟಾಗಿ ಕಳೆಥಳಿಥಳಿಪುದೆಲ್ಲ
ತನ್ನರಿದವ ಬಲ್ಲ
ಶಿಷ್ಟ ಚಿದಾನಂದ ನೀನೆಂದು ಕಾಣಲು
ಮುಟ್ಟಿಗೆ ಜಾಗವಿಲ್ಲ ನೀಚರ ವಸ್ತು ನಿಜ ಬ್ರಹ್ಮ ೩

## ೧೮೫

ಮುತ್ತು ಬಂದಿದೆ ಕೊಳ್ಳಿರಣ್ಣಾ ಅದಕೆ
ವೆಚ್ಚವೇನಿಲ್ಲ ಬೆಲೆಯಾಗದಣ್ಣಾ ಪ

ಥಳಥಳ ಹೊಳೋಯುತದಣ್ಣ
ಅದು ಬಲ್ಲ ಜಾಣಂಗಿನ್ನು ಬಯಲೊಳಗಣ್ಣ
ಕೂದಲ ಎಳೆಗಿಂತ ಸಣ್ಣ ಅದು
ಬಣ್ಣ ಬಣ್ಣದ ಬ್ರಹ್ಮದ ಲೋಕಣ್ಣ ೧

ತನು ಎಂಬ ತಕ್ಕಡಿ ಪಿಡಿದು
ಆದಿ ಶರಣರು ತೂಗ್ಯಾರು ವಾಸನೆ ಕಳೆದು
ಮನವೆಂಬ ಮಣಿದಾರ ಪಿಡಿದು
ಲೋಕ ಹೋಗದೆ ತೂಗ್ಯಾರು ಯೋಗ ಮಾಡಿ ಅವರು ೨

ಮುತ್ತಿನ ಮಹಿಮೆ ಮುಂದದ
ಇದರ ಗೊತ್ತು ತಿಳಿಯದೆ ಮಂದಿ ಸತ್ತುಹೋಗೇದ
ಸುತ್ತಮುತ್ತಲು ಸುಳಿವುತಲದು
ಚಿದಾನಂದನ ಚಿತ್ತದೊಳಗದ ೩

## ೧೮೬

ಮುದಕಿಯ ಕಂಡರೆ ಸೇರದೆನಗೆ ಮುದಕಿಯ ಕಂಡರೆ ಸೇರದೋ
ಸದಮಲಪರತತ್ವದ ಗುರಿಯ ತೋರದಂತೆ ಮಾಡಿದ ಪ

ಒಬ್ಬನನೊಯ್ದಿಬ್ಬರ ಮಾಡಿ ಓಡಿಶ್ಯಾಡುವ ಮುದಕಿ
ಹಚ್ಚಿಕೊಂಡು ಜಗವೆನಲ್ಲ ಹರಿದು ಆಡುವ ಪಾಡುವ ಮುದುಕಿ ೧

ನಿಲ್ಲದೆ ಸ್ವರ್ಗಕೆ ನರಕಕೆ ಮನಜರನೆಲ್ಲರ ತಿರುಗಿಪ ಮುದುಕಿ
ಎಳ್ಳಷ್ಟೂ ಎಚ್ಚರ ಪುಟ್ಟಿಸದ ಎಡವಟ್ಟಾದ ಮುದುಕಿ ೨

ಇಂದ್ರಜಾಲವ ಖರೆಯಂದದಲಿ ಎಸಗಿಕೊಂಡಿಹ ಮುದುಕಿ
ಬಂಧಿಸಿಯಿಹಳು ಊನವಿಲ್ಲದಲೆ ಬಾಜಿಗಾರ ಮುದುಕಿ ೩

ಏನೇನಿಲ್ಲವು ತನಗದು ರೂಪವು ಎಲ್ಲವು ಆದ ಮುದುಕಿ
ತಾನಾರೆಂದು ತನ್ನನ್ನು ತಿಳಿಯೆ ತನ್ನೊಳಗಡಗಿಹ ಮುದಕಿ ೪

ಮುನ್ನ ಅನಾದಿಯು ಎನಿಸಿಕೊಂಡರು ಮೂಲಮಾಯೆ ತಾ ಮುದುಕಿ
ತನ್ಮಾತ್ರಾದ ಚಿದಾನಂದ ಬ್ರಹ್ಮದಿ ತೋರುತ ಅಡಗುವ ಮುದಕಿ ೫

## ೧೮೭

ಮುಳುಗಿದನು ಯೋಗಿ ಮುಳುಗಿದನು
ಒಳ್ಳೆ ಬಲಹುಳ್ಳ ನಾದ ಸಮುದ್ರ ಮಧ್ಯದಿ ಯೋಗಿ ಪ

ಸತಿ ಮೂವರ ಸಮನಿಸಲಾರದೆ
ಪಿತರೀರ್ವರ ಕರಕರೆಯನು
ನೀಗಿಸುತರೈವರೆನಿಪರು ಮಾತು ಕೇಳದಿರೆ
ಮತಿಯೇನು ಹೇಳಲಿ ಎಲ್ಲ ಸಂಗವ ಬಿಟ್ಟು ೧

ಜೇಷ್ಟರಾರುವರ ಕಾಟವ ತಾಳದೆ
ದುಷ್ಟನಾದಿನಿಯ ನಾಲ್ವರ ತೊರೆದು
ಅಷ್ಟಮಾತುಳರಪ್ರಯೋಜಕವೆಂದು
ಕಷ್ಟರಿವರು ಎಂದು ಮನವ ಭೀತಿಯ ಬಿಟ್ಟು ೨

ಇಂತು ಎಲ್ಲವ ಬಿಟ್ಟು ಚಿಂತಕ ತಾನಾಗಿ
ಭ್ರಾಂತು ಎಳ್ಳಿನಿತು ಒಬ್ಬರೊಳಿಲ್ಲದೆ

ಚಿಂತಕನು ಚಿದಾನಂದ ಮೂರುತಿಯನು
ಅಂತು ಬಲಿದು ಎನ್ನ ದೇಹ ಮರೆವಗಿಳಿ ೩

# ೧೮೮

ಮೋರೆಯ ಕಾಂತಿಗೆ ಪಚ್ಚಿರೋ ಕಿಚ್ಚಾ
ಮರುಳಾಗುತಿರುತಿಪನವ ಹುಚ್ಚಾ ಪ

ಯೋನಿಯ ಮುಖ ನೋಡೆ ಎಲ್ಲಕೆ ಹೇಸಿಕೆ
ತಾನೆ ರಕ್ತವ ನಿತ್ಯತವಿಸುತಿಹುದು
ಏನೇನು ಶುಚಿಯಲ್ಲ ಇಂತು ವಿವೇಕವಿಲ್ಲ
ಏನು ಕಾರಣ ಮೋಹ ಪಡುವರೋ ೧

ನರಕಾಣುವ ಪೂರಿತವದು ಭಗವದು
ಭರದಿ ದುರ್ಗಂಧ ವಾಸನೆ ಬಹುದು
ಸರಸಿಜೋದ್ಭವನಾಗಲಿ ಶಿವನೆ ತಾನಾದರಾಗಲಿ
ಮರುಳೆ ಪುನಃ ಜನ್ಮಕೆ ತಾರದೆ ಬಿಡುವುದೇ ೨

ಚಕ್ರ ಖಂಡವು ಆಸ್ತಿ ಚಮರಸ್ತಿರೂಪಾಗಿ
ಕರ್ಮವೆಂಬುದಕೆ ಸ್ಥಾನವಾಗಿಹುದು
ನಿರ್ಮಳ ಚಿದಾನಂದ ವಸ್ತುವ ತಿಳಿಗೊಡದ
ಧರ್ಮದಾ ಪಥದಲ್ಲಿ ಕೆಡಹುತಿಹುದು ೩

# ೧೮೯

ಯಮದೂತರು ನರನನು ಎಳೆದೊಯ್ಯುದನು
ಎಲ್ಲರಿಗೆ ಹೇಳುವೆನು

ಕುಮತಿಯಲಿ ಸದ್ಗುರು ಚರಣವ ಹೊಂದದ
ಕೇಡಿಗಾಗುವ ಫಲಗಳನು ಪ

ಮುರಿದ ಮೀಸೆಯಲಿ ಮಸಿದೇಹದಲಿ
ಉರಿಹೊಗೆ ಹೊರಡುವ ಉಸುರಿನಲಿ
ಕರುಳು ಮಾಲೆಯಲಿ ಕೋರೆದಾಡೆಯಲಿ
ಜರೆಮೈ ಹಸಿದೊಗಲುಡುಗೆಯಲಿ ೧

ಝಳಿವ ಖಡುಗದಲಿ ಹೂಂಕಾರದಲಿ
ಕಡಿದವಡೆಯಲಿ ಹುರಿಮೀಸೆಯಲಿ
ಬಿಡಿಗೂದಲಲಿ ಕರದ ಪಾಶದಲಿ
ಸಿಡಿಲ ತೆರೆದ ಬಿಡುಗಣ್ಣಿನಲಿ ೨

ಮಿಡುಕುತ ಸತಿಸುತರನು ಆಪ್ತರನು
ಹಿಡಿದೊಪ್ಪಿಸುತಿಹ ವೇಳೆಯಲಿ
ಕಡಿಯಿರಿ ಹೊಡಿಯಿರಿ ತಿನ್ನಿರಿ ಎನುತಲಿ ಧುಮುಕಲು
ಬಿಡುವನು ಪ್ರಾಣವ ಕಾಣುತಲಿ ೩

ಯಾತನೆ ದೇಹವ ನಿರ್ಮಿಸಿ ಅದರೊಳು
ಪಾತಕ ಮನುಜನ ಹೊಗಿಸುತಲಿ
ಘಾತಿಸುವ ನಾನಾಬಗೆ ಕೊಲೆಯಲಿ
ಘನಮುಚ್ಚು ಕಲ್ಲೊಳಗೆ ಎಳೆಯುತಲಿ ೪

ಈ ತೆರವೈ ಈ ಧರ್ಮ ಶಾಸ್ತ್ರವ
ನೀತಿಯ ತೆರದಲಿ ಮಾಡುತಲಿ
ಪಾತಕವನು ಬಹುಪರಿ ಶಿಕ್ಷಿಪರು
ದಾತ ಚಿದಾನಂದನಾಜ್ಞೆಯಲಿ ೫

## ೧೯೦

ಯೋಗಕ್ಕೆ ಸ್ಥಿತಿ ನಾಲ್ಕೇ ಒಡವೆ
ಯೋಗಕ್ಕೆ ಈ ನಾಲ್ಕು ಇಲ್ಲದಿದ್ದರೆ ಅದು ಅಡವಿ ಪ

ಸುಸುಖ ಬುದ್ಧಿಯ ತಾಳ್ದು ಎಲ್ಲ ವ್ಯವಹಾರ ತಾಳ್ದು
ಹಸಿವೆ ಎಂಬುದು ನೀಗಿ ಮೌನಕ್ಕೆ ಮನಸಾಗಿ
ಅಸನವಿಕ್ಕಿದರುಂಡು ಸಾತ್ವಿಕವ ಕೈಗೊಂಡು
ಉಸುರೆ ಪ್ರಥಮ ಸ್ಥಿತಿ ಇದುವೆ ಪಶುಸಿದ್ಧಿ ೧

ಕರ್ಮಂಗಳನ ಸುಟ್ಟು ವಿಧಿ ನಿಷೇಧಗಳ ಬಿಟ್ಟು
ನಿರ್ಮಳತ್ವವ ತಾಳಿ ಪಾಪ ಪುಣ್ಯವ ದೂಡಿ
ದುರ್ಮತಿ ಸನ್ಮತಿಗಳಿಲ್ಲ ದೋಷ ಭೂಷಣವಿಲ್ಲ
ಧರ್ಮವೆರಡನೆಯ ಸ್ಥಿತಿ ಇದುವೆ ಶಿಶುಸ್ಥಿತಿ ೨

ಅಂತರವೆ ಸಹ್ಯವಾಗಿ ಬ್ರಾಂತ್ಯ ಅಸಹ್ಯವಾಗಿ
ನಿಂತು ಕಣ್ಣು ಮುಚ್ಚಿ ಕುಳಿತು ಮೈಯ ಮರೆಯುತ
ಸಂತತಾನಂದದ ಬೆಳಗ ತೋರುತಿರೆ ನಿತ್ಯಬೆಳಗು
ಇಂತಿದು ಮೂರನೆಯ ಸ್ಥಿತಿ ಇದುವೆ ತೂಕಡಿಸುವ ಸ್ಥಿತಿ ೩

ಧ್ಯಾನವೆಂಬುದ ನೀಗಿ ಧಾರಣೆಯದು ಹೋಗಿ
ಹೀನ ಮೈಲಿಗೆ ತೊಳೆದು ಆತ್ಮ ಜ್ಯೋತಿಯು ಹೊಳೆದು
ತಾನೆ ಮಲಗಿಹನು ರಾತ್ರೆ ದಿವಗಳ ಕಾಣ
ಇದುವೆ ನಾಲ್ಕನೆಯ ಸ್ಥಿತಿ ಇದುವೆ ನಿದ್ರಾಸ್ಥಿತಿಯು ೪

ಒಂದರಿಂದ ಒಂದರಂತೆ ಇವನು ಸಾಧಿಸಬೇಕು
ಒಂದಲ್ಲದಿರೆ ನಿರ್ವಿಕಲ್ಪ ಸಮಾಧಿ ತಾನಿಲ್ಲ
ಸಂದುಗೊಂದಿನ ಹಾದಿಯಲ್ಲ ವಿಹಂಗ ಪಥ
ಬಂಧ ಹರನು ಚಿದಾನಂದನೆ ತಾನಂಹನು ೫

## ೧೯೧

ಯೋಗಿ ಬಂದ ಕಣೇ ಚಿದಾನಂದ ಯೋಗಿ ಬಂದ ಕಣೇ
ಪೋಗಿ ಮಾಗಿಯು ವಸಂತ ಬಂದಂತೆ
ತಾನಾಗಿ ಭಕುತ ಜನ ಹೃದಯದಾಗರಕೆ ಪ

ಶಾಂತಕುಂಡಲಗಳನು ತೂಗುತ
ಸ್ವಾಂತನಿರ್ಮಳ ಕೌಪವ
ಸಂತಸದಲಿ ಬಗಿದಳವಡಿಸಿಯ ವಿ–
ಶ್ರಾಂತ ಸುಭಸಿತವ ಪೂಸಿ ರಂಜಿಸುತಿಪ್ಪ ೧

ನಿಷ್ಕಲ ಹೃದಯದಲಿ ಒಲೆಯುತಿಪ್ಪ
ಪುಷ್ಕಲ ಜಪಮಾಲೆಯ ಮುಸುಕಿ ನಿಂದಲಿ
ಮಹಾಪ್ರಳಯಂಗಳೆಣಿಸುತ್ತ
ಪುಷ್ಕರ ಶತಕೋಟಿ ತೇಜನಾಚಿಸುತಿಪ್ಪ
ಇಹಪರ ಪಾದುಕೆ ಮಾಡಿ ಮೆಟ್ಟುತ
ಅಹಿಧರ ಬೆಳಗುತಲಿ ವಿಹಿತದಿಂದಲಿ
ಬ್ರಹ್ಮಗಾನವ ಮಾಡಲು ವಿಷ್ಣು
ವಹಿಸೆ ಅಮೃತ ಕಳಶದ ಕಳೆಯಸೆಯಲು ೨

ವಿವೇಕ ಧೈರ್ಯರೆಂಬ ಚಡಿಕಾರರು
ತಾನೆ ಮುಂಗಡೆಯಲಿರ್ದು
ಸಾವಧಾನದಿ ಪಥವಬಿಡಿಸು ತಿರಲು ಸರ್ವ
ದೇವೆಂದು ಪೊಗಳಿದ ವಿಜಯ ಭಟ್ಟಾದೀಶ
ಇಂತು ವೈಭವದಿಂದ ಚಿದಾನಂದ
ನಿಂತ ನಿಜಸ್ಥಿರವಾ ಸಂತಸದಲ್ಲಿ ಕಂಡು ಸರ್ವವ ಮರೆತು ನಾ
ನಂತು ಇಂತೆನಲೇನ ಆತ ತಾನಾಗಿರ್ದ ೩

## ೧೯೨

ಯೋಗಿ ಬಿಟ್ಟರೆ ಬಿಡದು ನಾದವು
ಯೋಗಿ ಬಿಟ್ಟರೆ ಬಿಡದು ನಾದವು
ಕೂಗುತಿಹುದು ಸರ್ವಕಾಲದಿ
ಜಾಗಟೆ ಕೊಳಲು, ತಮ್ಮಟೆ
ಚಂಗು ಕೊಂಬು ತಾಳರವಗಳಿಂದ ಪ

ಮಲಗೆ ಕುಳಿತರೆ ಕೂಗುತಿಹುದು
ನಿಲಲು ನಡೆಯೆ ಕೂಗುತಿಹುದು
ಒಲಿದು ಮಾತುಗಳಿರಲಿಕೆ
ಬಲಿದು ಧುಂಧುಂ ಎಂದು ಭೇರಿಯ ಶಬ್ದರವಗಳಿಂದ
ನಿಲದೆ ಮುರಿದು ಮದವ
ಸುಲಭ ಸುಖವ ಸುರಿಸುತ ೧

ಕಣ್ಣು ಮುಚ್ಚಲು ಕೂಗುತಿಹುದು
ಕಣ್ಣು ತೆರೆಯೆ ಕೂಗುತಿಹುದು
ಉಣ್ಣುತಲಿ ತಾನು ಇರಲಿಕೆ
ಘಣ್ಣ ಘಣ್ಣ ಘಣ್ಣಲು ಎಂದು ಘಂಟೆ ಶಬ್ದದ ರವಗಳಿಂದ
ಮಣ್ಣಗೂಡಿಸಿ ಶೋಕ ಮೋಹವ
ಪುಣ್ಯರವವ ಬೀರುತ ೨

ಸುಮ್ಮನಿರಲು ಕೂಗುತಿಹುದು ಸುಳಿದಾಡೆ ಕೂಗುತಿಹುದು
ಬಮ್ಮನೊಮ್ಮೆ ಮರೆತು ಇರಲಿಕೆ
ಘಮ್ಮ ಘಮ್ಮ ಘಮ್ಮ ಎಂದು ಶಂಖ ಶಬ್ದದ ರವಗಳಿಂದ
ಹಮ್ಮುವಾಸನ ಕ್ಷಯವಮಾಡಿ
ನಿರ್ಮಲತ್ವವ ತೋರುತ ೩

ಅರುಣಕಾಲದಿ ಅಸ್ತಕಾಲದಿ ಅವಸ್ಥಾತ್ರಯ ಕಾಲದಿ
ಅರಗಳಿಗೆ ಕ್ಷಣ ಮೂಹೂರ್ತದಿ

ಸರಿಗರಿ ಗಮಪ ಎಂದು ಸ್ವರಮಂಡಲರವಗಳಿಂದ
ತರಿದು ಜನನ ಮರಣವನ್ನು ತೇಜ ಬಿಂದು ಸುರಿವುತ ೪

ಇಂತು ನಿತ್ಯ ಕಾಲದಿ ಬಿಡದೆ
ಸಂತತದಲಿ ಹಾಡಿಪಾಡಿ
ನಿಂತು ಚಾಕರಿಯನೆ ಮಾಡುತ
ಚಿಂತಕರನುತಾ ಚಿದಾನಂದನಾಗಿ ತೋರ್ಪ ಯೋಗಿಯನ್ನು
ಅಂತ್ಯವಿಲ್ಲದಾನಂದಪಡಿಸಿ ಆಶೀರ್ವಾದವ ಪಡೆಯುತ ೫

## ೧೯೩

ಯೋಗಿಗದ್ಯಾತಕೆ ತಳ್ಳಿ ಸಂಸಾರಬಳ್ಳಿ
ಯೋಗಿಗದ್ಯಾತಕೆ ತಳ್ಳಿ ಯೋಗಿಸು
ನಿಶ್ಚಲಯೋಗಿ ಸುನಿರ್ಮಲ
ಯೋಗಿ ಸುಖೋನ್ನತಯೋಗಿ ಚಿದಾನಂದ ಪ

ನಿದ್ರೆಯಿಂದಲಿ ಮೈಯ ಮರೆತು
ನಿರ್ಗುಣದೊಳು ಬೆರೆತು
ಶುದ್ಧಮಂಡಲದಂತೆ ಪೊಳೆದು
ಸುಖದುಃಖಗಳನುಳಿದು
ಶುದ್ಧವಿಶುದ್ಧ ಚಿನ್ಮಾತ್ರವೇ ಎಂಬ
ಬದ್ಧಹರನಾಗಿ ಭಾಗ್ಯೋದಯನಾದ ೧

ಆನಂದ ಮೂರ್ಛಿತನಾಗಿ
ಅಹುದಹುದಹುದಾಗಿ
ಧ್ಯಾನಮೌನಗಳವು ಪೋಗಿ
ಧಾರಣೆಯನು ನೀಗಿ
ಜ್ಞಾನಂಜ್ಞೇಯಂ ಜ್ಞಾತೃವು ತೊರದೆ
ಸ್ವಾನಂದಾಮೃತ ಶರಧಿಯೊಳ್ ಮುಳುಗಿದ ೨

ಏನೇನರಿಯನು ತುರಿಯ
ಎರಡೆಂಬುದ ನರಿಯ
ಮೌನಮೂರುತಿ ಅದನು ಅರಿಯ
ತಾನೆ ತಾನೆ ತಾನಾಗಿರುತಲಿ
ತಾನೆ ಚಿದಾನಂದ ಗುರು ತಾನೆ ಆದ ೩

## ೧೯೪

ಯೋಗಿಗೆ ಸೃಷ್ಟಿ ಬರುವುದೆಂತು ವಿದ್ಯದಲಲ್ಲದೆ
ಯೋಗ ವಿದ್ಯೆದಲ್ಲಿ ಎಂತು ಅನ್ನಬಹುದೆ ಇಂತು
ಯೋಗಿಯೆ ಈಶ್ವರ ತಾನೀಗೇಕೆ
ಯೋಗಿಯು ಈಶ್ವರ ಬೇರೆ ಎನೆ ನರಕವು ಪ

ಆಲಿಯು ನಿಂತೆ ಆಲಿಯ ಗೊಂಬೆಯು ತಿರುಗದಲಿರಬೇಕು
ಆಲಿಯು ಮುಚ್ಚದೆ ಆಲಿಯು ರೆಪ್ಪೆಯು ಬಡಿಯದಲಿರಬೇಕು ೧

ಅನಿಮಿಷ ದೃಷ್ಟಿಯಂದಲಿ ಬ್ರಹ್ಮವ ಆಲಿಸುತಿರಬೇಕು
ಅನಿಮಿಷದಂದದಿ ಕಣ್ಣಿನ ಗುಡ್ಡೆ ತಿರುಗದಲಿರಬೇಕು ೨

ದೃಷ್ಟಿಯು ಕುಳಿತಾ ದೃಷ್ಟಿಯು ಮುಂದಕೆ ಸಾಗಲಿರಬೇಕು
ದೃಷ್ಟಿಯು ತಾನೆಡಬಲಕೆ ನಲಿಯದೆ ದೃಷ್ಟಿಯು ಇರಬೇಕು ೩

ಕುಳಿತಾ ಸ್ಥಳವು ತಪ್ಪಲು ಮೆತ್ತೆಯು ಕುಳಿತುಕೊಳ್ಳಬೇಕು
ಥಳಥಳ ಹೊಳೆಯುತ ಬೆಳಗದ ಪಸರಿಸಿ ಗೂಢನಿರಲುಬೇಕು ೪

ಉದಯಾಸ್ತಮಾನವು ದಿವರಾತ್ರಿಯುಡಗಿ ಇರಬೇಕು
ಚಿದಾನಂದ ಸದ್ಗುರು ತಾನಾಗಿಯೆ ತಾನೆ ಇರಬೇಕು ೫

## ೧೯೫

ಯೋಗಿಯ ಲಕ್ಷಣವಿದೆ
ಯೋಗಿಯ ಲಕ್ಷಣ ತಿಳಿಯದಡೆ ಇವನಿಂತು ಬಲ್ಲ ಪ

ಮೌನವೆಂಬುದು ಬಹಳ ಏನೇನೆಂದರು ಕೇಳ
ಕಾನನವೊಂದೇ ಊರು ಒಂದೇ ತಾನೆಂಬುದು ಢಾಳ
ಹೀನವಾದವ ಕೇಳ ತಾನು ಈ ಪರಿಯಲಿಹ ಯೋಗಿ ೧

ಮಾತಾಡೆ ಮಾತಿಲ್ಲ ಯಾತರ ಗೊಡವೆಯಿಲ್ಲ
ಭೂತ ಹೊಡೆದಂತೆ ಸುಮ್ಮನಿಹನು
ಭೀತಿಯ ತಾನಿಲ್ಲ ಈ ತೆರದಲಿ ತಾನಿರುತಿಹ ಯೋಗಿ ೨

ಎದ್ದರೆ ಎದ್ದಿಹ ಬಿದ್ದರೆ ಬಿದ್ದಿಹ
ನಿದ್ದೆಯು ಯಾವಾಗಲು ಕಟ್ಟಿಹುದು
ಬುದ್ಧಿಯ ಮಾತಿಲ್ಲ ಬುದ್ಧಿಯವರ್ಜಿಸಿಹ
ಇದ್ದು ಈ ತೆರದಿ ತಾನಿದ್ದು ಇರುತಿಹ ಯೋಗಿ ೩

ಶರೀರದ ಸ್ಮರಣೆಯಿಲ್ಲ ಶ್ರೇಷ್ಠ ಭಾವಗಳಿಲ್ಲ
ಪೋರರ ಕಂಡರೆ ಪೋರರಂತೆ
ಮಾರನ ಬಾಧೆಯಿಲ್ಲ ಮಹಾಕೋಪಗಳಿಲ್ಲ
ಧೀರತನದಲಿಂತು ಇರುತಿಹ ಯೋಗಿ ೪

ಹೊರಗಿಂತು ತೋರಿಹನು ಹೃದಯದ ಪರಿಯನ್ನು
ಅರಿವೆನೆಂದರೆ ಅರಿಗಳವಲ್ಲವೋ
ಇರುಳು ಹಗಲು ಚಿದಾನಂದ ಮೂರುತಿಯನು
ಸ್ಥಿರವೀಗ ತಾನಂದು ನಿತ್ಯ ಬೆರತಿಹನು ೫

## ೧೯೬

ಯೋಗಿಯಹುದಹುದೋ ಚಿದಾನಂದ
ಯೋಗಿಯಹುದುಹುದೋ ದಯಾ
ಸಾಗರ ಕಾರಣ್ಯದಾಗರ ನಿತ್ಯಾತ್ಮ ಪ

ಅಷ್ಟಮದಂಗಳನ್ನು ಸುಟ್ಟು ಭಸ್ಮವ ಮಾಡಿಹ
ಅಷ್ಟ ಪ್ರಕೃತಿಯನ್ನು ಕಾರಿ ಕಾರಿ ಮಹ
ದಷ್ಟ ಯೋಗವ ಸಾಧಿಸಿ ಶ್ರವಣವನ್ನು
ಕೊಟ್ಟುನಾದವ ಭೇದಿಸಿ ಆತ್ಮದಲ್ಲಿ
ದೃಷ್ಟಿ ಎಂಬುದ ನಿರಿಸಿ ಸರ್ವಕಾಲ
ಶಿಷ್ಟರೆಂದೆನಿಪ ಉತ್ಕೃಷ್ಟಮಾರ್ಗದ ವಾಸಿ ೧

ಆರು ಅರಿಯ ಮೀರಿದರು ಭ್ರಮೆಯ ವಿಕಾರವ ತರಿದು
ತರಿದು ಹೀರಿ ಆರು ಚಕ್ರದ ಮೇಲೆ
ಏರಿ ಸಹಸ್ರಾರ ಸ್ಥಳದಿ ನಿಂದು ಜ್ಯೋತಿರ್ಮಯ
ಸಾರವ ಸೇವಿಸುತಲಂದು ನಿತ್ಯಾ ನಿತ್ಯ
ಘೋರ ತಪದಿ ಯೋಗಿ ಶೂರ ಭಕ್ತರ ಬಂಧು ೨

ಸಪ್ತವ್ಯಸನ ರೂಪ ಕೆಡಿಸಿ ಬಳಿಕ ದುಷ್ಟ
ಸಪ್ತಾವರಣವನ್ನು ತುಳಿದು ಪಾದದಲೊದ್ದು
ಗುಪ್ತವಾಗಿಹ ಪ್ರಭೆಯ ಶೋಧಿಸಿ ಘನ
ತೃಪ್ತ ಅಮೃತ ಸುಧೆಯ ಸುರಿದು ಮೇರು
ಕಾಂಚನ ಗಿರಿಯ ಸೇರಿಯೆ ಜ್ಯೋತಿ
ವ್ಯಾಪಕ ಭಾಸ್ಕರ ದೀಪ್ಯಮಾನ ಪ್ರಭಾ ೩

ಕರ್ಮ ಪಾಪವು ಪುಣ್ಯ ಹಮ್ಮು ವಾಸನ ಕ್ಷಯ
ದುರ್ಮತಿ ದುರ್ಗುಣವೆಲ್ಲ ದೊಡ್ಡ
ಬ್ರಹ್ಮಾನಂದದ ಲಕ್ಷಣ ತಿಳಿದಾ ನಿತ್ಯಾ
ನಿರ್ಮಳ ನಿರಾವರಣ ರೂಪಿತ ಆತ್ಮ

ಸ್ವರ್ಮಣಿ ಸುಗುಣ ನಿರ್ಗುಣ ಪರ
ಬ್ರಹ್ಮವೇ ತಾನಾಗಿ ಬೆಳಗುವ ಯತಿ ಜಾಣ ೪

ಸಾಧನ ನಾಲ್ಕನು ಸಾಧಿಸಿ
ನಾದವ ಭೇದಿಸಿ ಜ್ಯೋತಿ ಸಂಪಾದಿಸಿ ಆತ್ಮನ
ಭೇದವೆಂಬುದನರಿತ ಬಳಿಕ ಘನ
ಸಾಧನ ಗುಣ ಚರಿತಯೋಗಿ ತಾನೆನಿಸಿ ಕೈವಿಡಿಯೆನ್ನ
ಬೋಧ ಸದ್ಗುರು ಚಿದಾನಂದ ಅವಧೂತ ೫

## ೧೯೭

ರಕ್ಷ ಚಿದಾನಂದ ರಕ್ಷಚಿದಾನಂದ ರಕ್ಷಮಾಂ ರಕ್ಷ ಪ

ಪಟುತರ ಕಾಂತಿ ವಿಸ್ಫುಟಿತ ಮಧುರ ಪುಂಜ
ಘಟವಿಧಿಪೂರ ಸದ್ಘಟನ ಚಿದಾನಂದ ೧

ಸಾರ ನಿಗಮತತಿ ದೂರ ಸುಮನ ಮನೋ-
ಹರ ನಿಖಿಳ ಜಗೋತ್ತಾರ ಚಿದಾನಂದ ೨

ಬಿಸಜರಿಪು ನೇತ್ರ ಸುಭಸಿತ ಮಂಗಳಾಕಾರ
ವಿಷಧರೋದ್ಧಾರ ದಿಗ್ವಸನ ಚಿದಾನಂದ ೩

ಈಶ ಭೂತೇಶ ಮಹೇಶ ಗಿರೀಶ
ಉಮೇಶ ನಟೇಶ ಸರ್ವೇಶ ಚಿದಾನಂದ ೪

ಗುರು ಪ್ರಣವಾನಂದ ಗುರು ತ್ರಿಯಕ್ಷರ
ಗುರು ಚಿದಾನಂದ ಗುರುವೇ ಚಿದಾನಂದ ೫

## ೧೯೮

ಲಕ್ಷವ ಹಿಡಿದೆ ಅಂದವಳ
ಲಕ್ಷನಿಂತೆ ನೀನೇ ಬ್ರಹ್ಮವಾಗಿ ಹೊಳೆಯೋ ಪ

ಸುಣ್ಣದ ಬಟ್ಟಿಸುಟ್ಟಂತೆ
ಕೆಂಗಣ್ಣಲಿ ತಂಬಾಕವ ನೊಣ ನೋಡಿದಂತೆ
ನಿನ್ನೊಳಾಪರಿ ಲಕ್ಷನಿಂತೇ ತೇಜ
ತಾನಾಗಿಯೇ ಬೆಳಗೋದು ಚಿಕ್ಕೆಯಂತೆ ೧

ಒಡವೆಯ ಅಮರಿಸಿದಂತೆ
ಕಾಲಡಿ ಮುಳ್ಳ ಚಿಮ್ಮಟಿಗೆಯು ಹಿಡಿದಂತೆ
ದೃಢದಲೀ ಪರಿ ಲಕ್ಷನಿಂತೇ
ಕಿಡಿಕಿಡಿಯ ಕೆಂಕರಿಗೆದರಿ ಹರಡುವ ಕಾಂತಿಯಂತೆ ೨

ಕಳೆಗಳು ಬಹು ತೇಜ ತೋರಿ ನೋಡೆ
ಕಳೆಯಡಗಿದ ಶುದ್ಧಮಂಡಲದ ಪರಿ
ಥಳಥಳ ರವಿ ಕೋಟಿ ಮೀರಿ
ಬಲು ಸುಲಭ ಚಿದಾನಂದ ಕಾಣುವುದೀ ಪರಿ ೩

## ೧೯೯

ವಿಷಯದೊಳಿರೆ ಬ್ರಹ್ಮಜ್ಞಾನ
ವಿಷಯ ಪಾಪ ಹತ್ತಿತೇನ
ವಿಷಯದೊಳಿರುತಾತ್ಮನಾಗಿಯೆ ಎಚ್ಚರಿಕೆ
ಭಸ್ಮವಹುದು ದುರ್ಗುಣ ಪ

ಮುತ್ತೈದೆ ಇರುತಿರಲ್ಕೆ ಆಕೆಗೆ ಕೆಲಸವು ಬಹಳವಾಗಿ
ಮುತ್ತೈದೆಯು ತಾನು ಎಂಬುದು ಮರೆತರೆ
ಮತ್ತೆ ವಿಧವೆಯಾದುದೆಲ್ಲಿ ೧

ಒತ್ತೊತ್ತು ಮನೆ ಇರುತಿರಲು
ಸ್ವಪ್ನಹತ್ತಿರೆ ಕೆಟ್ಟುಹೋಗಿರಲು
ಮತ್ತುತ್ತಮನು ಸ್ವಪ್ನದಲಿ ಕೆಟ್ಟು ಎಚ್ಚರವಾಗೆ
ಉತ್ತುಮನು ಕೆಟ್ಟಿದೇನು ೨

ಶರೀರ ಧರ್ಮವು ಜ್ಞಾನಿಗೆ ಹೊಳೆಯೆ
ಕಾಮ ಹೊರಳಿ ಕ್ರೋಧ ಲೋಭ ಸುಳಿಯೆ
ವರ ಚಿದಾನಂದ ಗುರುತಾನಾಗೆ ಎಚ್ಚರಿಕೆ
ಮರೆದ ಕರ್ಮನಿಂದುರಿಯೇ ೩

## ೨೦೦

ವೀರ ಬಂದ ವೀರ ಬಂದ
ಘೋರ ಹಮ್ಮು ಎಂಬ ದಕ್ಷನ
ತೋರ ಶಿರವರಿಯಲೋಸುಗ ಪ

ಭಯನಿವಾರಣವೆಂಬ ಕಾಸೆಯನೆ ಹೊಯ್ದು
ಜಯಶೇಖರನೆಂಬ ವೀರ ಕಂಕಣ ಕಟ್ಟಿ
ನಿಯತ ಸಾಹಸವೆಂಬ ರತ್ನ ಮುಕುಟವಿಟ್ಟು
ಸ್ವಯಂ ಸೋಹಂ ಎಂಬ ಕುಂಡಲವ ತೂಗುತ ೧

ಆಡಲೇನದ ಶುದ್ಧವೆಂಬ ಭಸಿತವಿಟ್ಟು
ರೂಢಿಯ ಸತ್ವವೆಂದೆಂಬ ಹಲಗೆಯಾಂತು
ಇಡಾಪಿಂಗಳವೆಂಬ ಪಾವುಗೆಗಳ ಮೆಟ್ಟಿ
ಗಾಢ ಧೈರ್ಯವೆಂಬ ಖಡುಗ ಝಳಪಿಸುತ ೨

ಒಂದೊಂದೆ ಹೆಜ್ಜೆಯನಂದು ಪಾಲಿಸುತಾಗ
ಹಿಂದೆಡಬಲ ನೋಡದೆ ಮುಂದು ನಿಟ್ಟಿಸಿ
ಛಂದಛಂದದಲಾಗುವಣಿ ಲಗುವಿನಿಂದ
ಬಂದನು ಬಹು ಶೂರಧೀರ ಮಹಾವೀರ ೩

ದಾರಿ ಊರುಗಳನೆ ಧೂಳಿಗೋಂಟೆಯ ಮಾಡಿ
ಆರಾಧರೇನು ಶಿಕ್ಷಿಸುವೆನೆಂದೆನುತ
ಭೇರಿ ಕರಡಿ ಸಮ್ಮೇಳಗಳೊಡಗೂಡಿ
ಕಾರಣವಹ ಯಜ್ಞಮಂಟಪದೆಡೆಗಾಗಿ ೪

ಸುಷುಮ್ನವೆಂದೆಂಬ ಬಾಗಿಲ ಮುರಿಯುತ ಆ
ಸಮಯದಿ ಬಂದ ಅಸುರರ ಕೊಲ್ಲುತ
ಭೇಸರಿಸುವ ದೊರೆ ದೊರೆಗಳನಿರಿಯುತ
ದ್ವೇಷರೆನಿಪ ಷಡುರಥಿಕರ ಕಟ್ಟುತ ೫

ಅಷ್ಟಸಿದ್ಧಿಗಳೆಂಬ ದಿಕ್ಪಾಲಕರ ನಟ್ಟಿ
ಭ್ರಷ್ಟ ಮೋಹವದೆಂಬ ಯಮನ ಹಲ್ಮುರಿದೆತ್ತಿ
ನಷ್ಟಮನವೆಂಬ ಬೃಗುವಿನ ಮೀಸೆಯ ಕಿತ್ತು
ಶಿಷ್ಟಶಿಷ್ಟರನು ಎಲ್ಲರ ಕೆಡೆಮೆಟ್ಟಿ ೬

ಹಮ್ಮು ತಾನಾಗಿರುತಹ ಉನ್ಮತ್ತ
ದಕ್ಷನ ಶಿರವನು ತರಿಯುತಲಾಗ
ಗಮ್ಮನೆ ತ್ರಿಕೂಟ ಯಜ್ಞಕುಂಡದೊಳು
ಸುಮ್ಮನಾಹುತಿಯಿಟ್ಟು ಸುಲಭದಲಿ ನಲಿಯುತ ೭

ಪಾಪರೂಪನಾದ ಜೀವದಕ್ಷನನು
ಈ ಪರಿಯಲಿ ಕೊಂದು ನಾಟ್ಯವಾಡಲು
ಭಾಪುರೇ ಎಂದು ಸಾಧು ಪ್ರಮಥರು ಹೊಗಳಲು
ತಾಪಹರನಾಗಿ ಶಾಂತಿಯ ಹೊಂದುತ ೮

ನಿರುಪಮ ನಿತ್ಯ ನಿರಾಳನೆ ತಾನಾಗಿ
ಪರಮೇಶ ಪರವಸ್ತು ಪರತರವೆಯಾಗಿ
ಭರಿತ ಚೇತನ ಪ್ರತ್ಯಗಾತ್ಮನೆ ತಾನಾಗಿ
ನಿರುತ ನಿತ್ಯಾನಂದ ಚಿದಾನಂದ ಯೋಗಿ ೬

## ೨೦೧

ವೀಣಾಸ್ವರವನು ಕೇಳುತಲಿರುವನ ವಿಶ್ವಾತ್ಮಕನೆಂದೆಂಬೆ
ವೀಣಾಸ್ವರ ಕೇಳಲು ದುರ್ಗುಣವುಡಗಿ ಪೋಗುವುವು ಎಂದೆಂಬೆ ಪ

ನಾದಬ್ರಹ್ಮವನಾಲಿಸುತಿಹನನು ನರನಲ್ಲವು ನಾನೆಂಬೆ
ನಾದಬ್ರಹ್ಮವನಾಲಿಸುತಿರಲಿಕೆ ನಾನಾಗುಣವು ಲಯವೆಂಬೆ ೧

ಘಂಟಾ ಸ್ವರವನು ಕೇಳುತ ಸುಖವನು ಅನುಭವಿಸುವನ ಗುರುವೆಂಬೆ
ಘಂಟಾಘೋಷದಿಜನನ ಮರಣವು ಮುಳುಗಿಹವು ಎಂದೆಂಬೆ ೨

ಭೇರಿನಾದವ ಕೇಳುತಲಿರುವನ ಭಾಗ್ಯವಂತನು ಎಂಬೆ
ಧೀರ ಚಿದಾನಂದ ಸದ್ಗುರುನಾದದಿ ಲಯವಿಹನು ಎಂದೆಂಬೆ ೩

## ೨೦೨

ವೈರಾಗ್ಯದಾವಾಗ್ನಿ ಉರಿಯು ಛಟಿಛಟಿಸಿತು
ಸರ್ವಪ್ರಪಂಚವೆಲ್ಲವ ಅಟ್ಟಟ್ಟಿ ಸುಟ್ಟಿತು ಪ

ಸತಿಸುತರು ಎಂಬ ಹೆಮ್ಮರವೀಗ ಸುಟ್ಟವು
ಪಿತೃ ಮಾತೃವೆಂಬ ಪಲ್ಲವ ಕರಿಕಿಟ್ಟಿತು
ಹಿತವೆಂಬ ಬಳ್ಳಿಗಳು ಅನಿಲ ಪುಟ್ಟವಿಟ್ಟವು
ಅತಿಭಾಗ್ಯವೆಂದೆಂಬ ಸಿಂಗಾರ ಹೊಗೆಯಿಟ್ಟವು ೧

ಏಸೋ ಬಂಧುಗಳೆಂಬ ಧ್ರುಮವು ಶಿಖಿಸೋಂಕಿದವು
ಕ್ಲೇಶವೆಂದೆಂಬ ಕರಡವು ಭುಗಿ ಭುಗಿ ಲೆಂದವು
ವಾಸಗಳೆಂದೆಂಬ ಕುಡಿ ಕಿಡಿಯಾಗಿ ಉದುರಿದವು
ಆಸೆ ಎಂಬ ಫಲ ವಹ್ನಿಗಾಹಾರವಾದವು ೨

ಘನಭ್ರಾಂತಿ ಎಂಬ ಪಕ್ಷಿಗಳು ಹಾರಿಹೋದವು
ಮನೆಯೆಂಬ ಗೂಡುಗಳು ನಿಗಿನಿಗಿಯಾದವು
ಬಿನುಗು ಚಿಂತೆ ಎಂಬ ಹರಿಣ ಮುಗ್ಗರಿಸಿದವು
ಮನಸಿಜನ ಕ್ರೋಧವೆಂಬ ಕಳ್ಳರು ಸತ್ತಿಹರು ೩

ಅಷ್ಟಮದದಾನೆ ಎಂಬುವು ಅಡವಿಯ ಹಿಡಿದವು
ತುಚ್ಛ ವಿಷಯಗಳೆಂಬ ನರಿಗಳೋಡಿದವು
ದುಷ್ಟಗುಣವೆಂದೆಂಬ ದುರ್ಜನ ಮೃಗವು ಚಲ್ಲಿದವು
ಕಷ್ಟ ತಾಪತ್ರಯದ ಕತ್ತಲು ಹರಿಯಿತು ೪

ಇಂತು ಪ್ರಪಂಚವೆಂಬೀ ವೈರಾಗ್ಯದಾವಾಗ್ನಿ
ಯಂತೆ ಧಗಧಗನೆ ಝುಗಝುಗನೆ ಸುಡುತಲಿ
ಚಿಂತಯಕ ಚಿದಾನಂದ ಉರಿಯು ಅಖಂಡವಾಗಿ
ಶಾಂತರೆಂಬರ ಮುಕ್ತರುಗಳ ಮಾಡಿತ್ತು ೫

## ೨೦೩

ಶಾಂತ ಶಾಂತವು ಎಂದು ಎಂಬರಿ ನಿಮ್ಮನು
ಶಾಂತವಿಂತಿರುತಿರೆ ಶಾಂತ
ಶಾಂತವಿಂತಿರೆ ಜೀವ ಮುಕ್ತನು
ಶಾಂತಿಲಿ ಭ್ರಾಂತಿರೆ ಭಯವುಕೃತಾಂತ ಪ

ಸತಿ ಜಾರೆಯಾಗಲು ಗುರುನಾಥಲೀಲೆಯೆಂದು
ಸತಿಗನುಕೂಲವೇ ಶಾಂತ

ಖತಿಯ ಮಾಡಲು ನಾನಾಜನರು ಚಂಚಲವಾಗದ
ಸ್ಥಿತಿಯೇ ಶಾಂತ ಸತತ ಸಂಸಾರ ಕರಕರೆ ಬಳಲಿಕೆ
ಸಂಗವಿಲ್ಲದಿಹುದೇ ಶಾಂತ
ಅತಿ ಚೋರ ಸುಲಿದೊಯ್ಯೆ ಆನಂದದಲಿ
ನಸುನಗುತಿರುವುದೇ ಶಾಂತ ೧

ವಿಷವನಿಕ್ಕಿದವರನ್ನು ಕಾಣಲು ಅವರೊಳು
ವಿಶ್ವಾಸವಿಹುದೇ ಶಾಂತ
ದುಶ್ಮನನು ತನ್ನನ್ನು ಕಡಿಯಬರೆ ಇದು
ಮೋಕ್ಷವೆಂಬುದೆನೆ ಶಾಂತ
ಮುಸುಕಿನ ಮಾತ ಊರ ಮುಂದಿಕ್ಕಲು
ಮತಿಗೆಡದಿಹುದದು ಶಾಂತ
ಹಸಿದು ಮಕ್ಕಳು ಅಳೆ ಹೆಂಡತಿ ರೋಧಿಸೆ
ಕುಸಿದು ಬೀಳದೊಡದು ಶಾಂತ ೨

ಕೊಟ್ಟಿದ್ದು ಸುಳ್ಳು ಎಂಬುವರೆದುರಿಗೆ
ಕೊಟ್ಟಿಲ್ಲವೆಂಬುದೇ ಶಾಂತ
ಭ್ರಷ್ಟರು ನಾನಾ ನಿಂದೆಯ ಮಾಡಲು
ಭಯ ಹುಟ್ಟದಿರುವುದೇ ಶಾಂತ
ಬಿಟ್ಟುಹೋಗಲು ತನ್ನ ಸತಿ ಸುತರೆಲ್ಲರು
ಭ್ರಾಂತಿಯ ತೋರುವುದೇ ಶಾಂತ
ದಿಟ್ಟ ಚಿದಾನಂದ ಸದ್ಗುರು ತಾನಾಗಿ
ದೃಢನಾಗಿಹುದದು ಶಾಂತ ೩

## ೨೦೪

ಶಿವನೀ ಹ್ಯಾಗಲ್ಲ ಮನುಜ
ಶಿವನೀಹ್ಯಾಗಲ್ಲ
ಶಿವನೇ ಜೀವನು ಬ್ರಹ್ಮಾಂಡಪಿಂಡಾಂಡ ಪ

ಶಿವಜೀವನು ತಿಳಿ ತಾನೊಬ್ಬ
ಕಣ್ಣೇ ಸೂರ್ಯನು ಕಿವಿಯೇ ದಿಕ್ಕು
ಚೆನ್ನಾದ ಪ್ರಾಣವೆ ತಾವಶ್ವಿನಿ ೧

ಜಿಹ್ವೆಯೇ ವರುಣತ್ವ ತ್ವಕ್ಕುತಾವಾಯುವು
ಗುಹ್ಯವೇ ವಿಧಾತೃ ಉಪಸ್ಥವೇ ಮೃತ್ಯು ೨

ವಾಕ್ಕು ತಾನಗ್ನಿ ಪಾದ ಉಪೇಂದ್ರನು
ಚೊಕ್ಕೂಟದಿಂತಿಳಿ ಪಾಣಿಯೆ ಇಂದ್ರನು ೩

ಮನವೆ ಚಂದ್ರನು ಬುದ್ಧಿಯೆ ಬ್ರಹ್ಮನು
ಘನ ಚಿತ್ತವು ತಾನದು ಕ್ಷೇತ್ರಜ್ಞ ೪

ಅಹಂಕಾರ ರುದ್ರನು ಜ್ಞಾತೃವೇ ಈಶ್ವರ
ಶಂಕರ ಚಿದಾನಂದನೀ ಪರಮಾತ್ಮನು ೫

## ೨೦೫

ಶ್ರವಣಮನನ ನಿಧಿ ಧ್ಯಾನವು ಯೋಗಕ್ಕೆ
ಸಮನಿಸೆ ಸಾಧಕಂಗೇತಕೆ ಈ ಮೂರು ಪ

ನಿತ್ಯಗುರುಮುಖದಿಂದ ನಿಜವೇದಾಂತ ಸಾರವ–
ನಿತ್ಯಕಾಲದಲ್ಲಿ ಕೇಳುತಲಿ ಇದ್ದು
ನಿತ್ಯಜೀವರ ಪರಮ ನಿಲುಗಡೆಗಳ ತಿಳಿದು
ಸತ್ಯತಾನೆಂದು ಕಂಡು ನಿಶ್ಚೈಸಿದುದೆ ಶ್ರವಣ ೧

ವಾಸನೆ ಹರವಾಗಿ ಬಲಿದು ಆತ್ಮಾನಂದಕೆ
ಸೂಸದೆ ಮನವನು ನಿಲ್ಲಿಸುತ

ದೇಶಿಕೋತ್ತಮನಿಂದ ತನಗಾವ ಉಪದೇಶ
ಬೇಸರಿಸದೆ ಮತ್ತೆ ಮತ್ತೆ ನೆನೆವುದೆ ಮನನ ೨

ದಧಿಮಥನವ ಮಾಡೆ ನವನೀತ ತೇಲುವೊಲು
ಉದಧಿಮಥಿಸೆ ಅಮೃತ ತಾ ಬಂದಂತೆ
ಮಥಿಸೆ ಕಾಷ್ಟಕ್ಕೆ ಕಾಷ್ಠ ಅಗ್ನಿ ತಾ ಪುಟಿದಂತೆ
ವಿಧಿಸೆ ಈ ತೆರದಲಿ ತಾನದುವೆ ನಿಧಿಧ್ಯಾಸ ೩

ಈ ಮೂರು ಸಾಧನಗಳಿರಬೇಕು ಯೋಗಕ್ಕೆ
ಈ ಮೂರು ಸಾಧಿಸಲು ರಾಜಯೋಗಿ ತಾನು
ಇವರೊಳು ಒಂದು ಕಡಿಮೆಯಾದರು ಯೋಗಿಯಾಗನು
ಇಂತಿಲ್ಲದಿರೆ ನಿಜಮುಕ್ತಿ ದೊರಕದು ೪

ಶ್ರವಣವೆಂಬುದು ಅದು ಸರ್ವಸಾಧನವಯ್ಯ
ಶ್ರವಣ ಮನನವಾಗೆ ಶ್ರಮ ಪರಿಹಾರವು
ಶ್ರವಣ ಮನನ ನಿಧಿಧ್ಯಾಸ ಮೂರಾಗೆ
ಶಿವನೆ ಆತನು ಚಿದಾನಂದ ದೇವನವನು ೫

## ೨೦೬

ಶ್ರೀ ಗುರುವಿನ ನೆನದು ಸುಖಿಯಾಗು ಮನವೇ ನೀನು
ದುರ್ಗುಣ ಪಾಪಹರಿದು ಛೇದಿಸು ಜನನವ ಪ

ನಾನಾ ಜನ್ಮದಿ ತೊಳಲಿ ನೀ ಬಂದು ನರ
ಮನುಷ ಜನ್ಮವ ತಾಳಿ ಮರತ ಕಂಡ್ಯಾ ತನುವಿನಲಿ
ಧ್ಯಾನಿಸುಸದಾಕಾಲದಿ ದುರ್ಜನ ಬುದ್ಧಿ
ಮಾಣಿಸು ಪರಂಜ್ಯೋತಿಯ
ನೆನೆದು ನೆನೆದು ದೃಷ್ಟಿಸಿ ಕಾಣುಗುಣಜ್ಞನ ಕರುಣ
ಪ್ರಾಜ್ಞನ ಜ್ಞಾನ ಸಿದ್ಧನ ಗುರುವ ಸಿದ್ಧನ

ಮಾನಸ ರೂಪನ ಮೂಜಗ ವ್ಯಾಪನ
ದೀನರನಾಥನ ವಾಙ್ಮಯಾತೀತನ ೧

ಸುಜನರ ಸಂಗವ ಮಾಡದೆ ಸಾಯುತಲಿಹೆ
ಕುಜನರ ಸಂಗದಿಂದ ಕರುಣವೆಂಬುದು ಮರೆತೆ
ತ್ಯಜಿಪುದು ನಿನಗೆ ನೀತಿಯೆ ಥೂ ನಿನಗೆ ಬುದ್ಧಿಯೇ
ಭಜಿಸು ಪರಾತ್ಪರವ ನೆನೆದು ದೃಷ್ಟಿಸು ಮನವೇ
ತ್ರಿಜಗ ವಂದ್ಯನ ತ್ರಿಗುಣಕೆ ಮಾನ್ಯನೆ
ಸುಜನವ್ರಾತನ ಸುಪ್ರಭಾತೀತನ
ಭಜಕರ ಭಾಗ್ಯನ ಬಹುಗುಣ ಯೋಗ್ಯನ
ಸರ್ವಬೇಧಜ್ಞನ ನಯಸರ್ವಜ್ಞನ ೨

ಇರುವೆ ಮೊದಲು ಗಜ ಕಡೆಯಾದ ಎಂಭತ್ತನಾಲ್ಕು
ತಿರುವಿನ ಲಕ್ಷಜೀವದಿ ಜನಿಸಿ ಜನಿಸಿ ಪುಟ್ಟುವ
ಪರಿಯನೆಲ್ಲವ ಛೇದಿಪ ಉಪಾಯವ ತಿಳಿವ
ಚಿರಕಾಲ ನೆನೆಯೋ ಕಂಡ್ಯಾ ಚಿದಾನಂದಾವಧೂತನ
ಪರಮ ಪರೇಶನ ಪಂಡಿತ
ಪುರುಷನ ಶರಣು ಜನಾಂಗನ ಸುಗುಣ ಕೃಪಾಂಗನ
ಕರುಣಾ ಕಟಾಕ್ಷನ ಕಾರಣ ಮೋಕ್ಷನ
ಮರಣ ವಿದೂರನ ಮುನಿಯತಿ ವರನ ೩

## ೨೦೭

ಸಂತೆ ಮಾಡಿದರೆ ಸಂಸಾರ ಸಂತೆ ಮಾಡಿದನೆ
ಸಂತೆಯವರ ನಂಬಿದರೆ ಕೆಟ್ಟುಹೋಗುವೆ ಕಾಣೆ ಪ

ತಂದೆತಾಯಿ ನೆವಗಳಿಂದ ಸಂತೆಗೆ ಬಂದೆ
ಬಂದು ಕೂಡಿದನು ಗಂಡ ಜೋಡಾದೆನು ಎಂದೆ

ಬಂದನೀಗ ಮಗನೆಂಬುವನು ಸೊಸೆಯು ಆತನ ಹಿಂದೆ
ಬಂಧುಬಳಗ ಬಹಳಾಯಿತು ನೆರೆದುದು ಸಂತೆಯು ಮುಂದೆ ೧

ಸಂತೆ ಮಾಡಿಕೊಂಡು ಗಂಡನೀಗ ತೆರಳಿದನೆ
ಅಂತು ಸಂತೆಯ ಮಾಡಿ ಮಗನೀಗ ಹೋಗಿಹನು
ಇದಕು ಮೊದಲೇ ಸೊಸೆಯ ಇಹಲೋಕ ಬಿಟ್ಟಿಹಳು
ಇಂತು ಸಂತೆಯ ಮಾಡಿ ಬಯಲಿಗೆ ಬಿದ್ದನೇ ೨

ದಾರಿಕಾರರೆಲ್ಲ ಸರಿದು ಸಂತೆ ಬಯಲಾಗೆ
ಆರಿಗಾರು ಇಲ್ಲವಾಗಿ ನನ್ನ ಬಿಟ್ಟು ಹೋಗೆ
ಧೀರ ಚಿದಾನಂದ ಗುರು ಕೈಯ ಹಿಡಿದ ಬೇಗ
ನೀರೆ ಅಂಜಬೇಡವೆಂದು ಮುಟ್ಟಿಸಿದ ಮನೆಗೆ ೩

## ೨೦೮

ಸಂಸಾರ ಶರಧಿಯೊಳು ಮುಳುಗಿ ಮುಳುಗಿ ಸಂಶಯವಿಲ್ಲದೆ
ಬಳಲುತಿಹ ಮರುಗಿ ಮರುಗಿ ಪ

ಅಜ್ಞಾನ ತಿಮಿರವೆಂಬ ವ್ಯಾಪಾರದೊಳೋಡಾಡಿ
ಸುಜ್ಞಾನ ಜ್ಯೋತಿಯ ಬಿಡುಗಡೆಯ ಮಾಡಿ
ಭಗ್ನ ಮಾಡಿಯೆ ಶಾಂತ ಬುದ್ಧಿಗಳನೇ ನೋಡಿ
ಪ್ರಾಜ್ಞನಾಗದೆ ಕೆಡುವೆ ನರಕವನು ಕೂಡಿ ೧

ಕಾಲವಿಪರೀತದಿಂದ ಕೇಡುಬರೆ ನೀನದನು
ಕಾಲಲೊದೆಯದೆ ಬಹಳ ಚಿಂತೆಯನು ಮಾಡಿ
ಓಲಗಿಸಿ ಮನದೊಳಗೆ ತಾ ಕೆಟ್ಟೆಯೆನ್ನುವನು
ಪಾಲಿಸುವರಿಲ್ಲೆಂದು ಸೇರುವೆಯ ನರಕವನು ೨

ಬೇಡ ಮನದೆ ಇನ್ನು ಖಿಲ್ಲ ಗುಣಗಳ ಬಿಟ್ಟು
ಖೋಡಿ ಸಂಸಾರವೆಂಬುದನು ಸುಟ್ಟು
ಗೂಢ ಚಿದಾನಂದಾವಧೂತನೊಳು ಅಳವಟ್ಟು
ಕೂಡು ಕೆಲಸಾರದಲೆ ದೃಷ್ಟಿ ಆತ್ಮನಲಿಟ್ಟು ೩

## ೨೦೯

ಸತ್ಕರ್ಮ ತ್ಯಾಗವೇ ನಿಜಬ್ರಹ್ಮವು
ಸತ್ಕರ್ಮ ಬ್ರಹ್ಮಕೆ ಉಪಾಧಿರೂಪವಯ್ಯಾ ಪ

ಹುಟ್ಟಿಗೆ ಶಾಖಗಳ ರುಚಿ ಹತ್ತದಿದ್ದಂತೇ
ಬಿಟ್ಟಿಹನು ಮತ್ತೆಂಬೆ ಸಂಸಾರದಿ ಹುಟ್ಟಿಗೆಯು ವಾಸನೆಯು
ಹತ್ತದಲೆ ಇಹುದೆ ಬಿಟ್ಟು ಕೊಡಬೇಕು ಸತ್ಕರ್ಮ ಪಥವ ೧

ಹೂಡುವೆತ್ತುಗಳೆತ್ತ ನಡೆಪ ಘೋಡವದೆತ್ತ
ಮಾಡ್ವ ಎರಡರಲಿ ಬಿಟ್ಟಿಹ ಯೋಗವನು ಎತ್ತ
ಝಾಡಿಸಿಯೆ ಬಿಡಿರಿ ಸತ್ಕರ್ಮ ಪಥವ ೨

ಎರಡುಕಡೆ ಚಿತ್ತವು ಸಮನಿಸುವುದೇತಕ್ಕೆ
ಗುರು ಗುಟ್ಟಲೇಕೆ ಉರಲಿಕ್ಕಲೇಕೆ
ಕರೆಕರೆಯ ಸತ್ಕರ್ಮ ತ್ಯಾಗವನು ಮಾಡಿ ಬಿಡಿ
ಗುರು ಚಿದಾನಂದ ಸಹಜರಾಗುವಿರಿ ನಿಜದಿ ೩

## ೨೧೦

ಸತ್ಕರ್ಮವೆಂಬುದು ಸಾಧನವಲ್ಲದಲೆ
ಸತ್ಕರ್ಮವೀಗ ಶುದ್ಧಬ್ರಹ್ಮವಲ್ಲವು

ಸತ್ಕರ್ಮ ಭಕ್ತಿಭಾವ ಸುಗುಣವಾದ ಮಾರ್ಗವು
ಸತ್ಕರ್ಮತ್ಯಾಗ ನಿಶ್ಶಬ್ದ ವಸ್ತು ಪ

ಗಾರುಡಿಯನರಿವೆನೆಂದು ಮಹೋರಗನ ಮೇಳವೇ
ಆರು ನಂಬಲು ಬಹುದು ವಿಕಾರ ಮನವನು
ನಾರಿ ಪುತ್ರರೊಳಗೆ ಕೂಡಿ ನಾನು ಮುಕ್ತನು ಎನಲು
ಸೇರುವುದು ಎಂತು ಪೂರ್ಣ ಬ್ರಹ್ಮ ೧

ಬ್ರಹ್ಮನರಿದು ಸಂಸಾರವ ಮಾಡು ಈಗ ಎಂಬನು
ಬ್ರಹ್ಮಘಾತನು ಅವನು ಮಿಥ್ಯವಲ್ಲವು
ನಿಮ್ಮ ಮನಕೆ ತಿಳಿದು ನೋಡಿ ನಿಶ್ಚಿತದ ಮಾತ ಪೇಳ್ವೆ
ಸುಮ್ಮನೆ ಬಿಡಲಿಬೇಕು ಸತಿ ಸುತರನು ೨

ವಾಸನಾಕ್ಷಯವು ವಸ್ತು ಎಂಬ ಮಾತು ದಿಟವದಿರಲು
ವಾಸನಾಕ್ಷಯವು ಎಂತು ಸಂಸಾರದಿ
ಗೋಪನಾರಬೇಡವೆನಲು ನಾರುವುದು ಬಿಡುವುದೇ
ಕಾಸ ವೀಸಿಯಲ್ಲದಲೆ ನಿಶ್ಚಯಿಲ್ಲವು ೩

ಸಾಕ್ಷಿ ತಿಳಿದ ಬಳಿಕ ಸಂಸಾರವನೀಗ ತ್ಯಜಿಸಿದೆ
ಅಕ್ಕಿನೀರುವಗ್ಗಿದಂತೆ ಆಗಬಾರದು
ರಕ್ಷಕನು ಇಲ್ಲದಲೆ ಸಂಸಾರವ ಬ್ರಹ್ಮವೆನಲು
ಭಕ್ಷಣಹುದು ಬ್ರಹ್ಮಜ್ಞಾನ ಬಿಡುವುದಿಲ್ಲವು ೪

ಸಂಸಾರದಿ ಮುಕ್ತ ನಾನು ಎನಲು
ತಿಲಾಂಶ ಮಾತ್ರ ಅನ್ನವಾಸನ ಅಂಟದಿಹುದೇ
ಸಂಸಾರವ ತ್ಯಜಿಸಿದರೆ ಸಾಧ್ಯವಹುದು ವಸ್ತು
ಹಂಸಪರಮ ಚಿದಾನಂದ ತಾನೆಯಾಹನು ೫

## ೨೧೧

ಸರ್ವಂ ಬ್ರಹ್ಮಮಯಂ ತಿಳಿವಡೆ
ಸರ್ವ ಬ್ರಹ್ಮಮಯಂ ಪ

ಮತಿಗತಿ ಬ್ರಹ್ಮಮಯಂ ಮಹಾಕ್ರತು ಜಪ ಬ್ರಹ್ಮಮಯಂ
ಸತಿಸುತ ಬ್ರಹ್ಮಮಯಂ ಶಾಂತವು ಖತಿಯು ಬ್ರಹ್ಮಮಯಂ ೧

ಪಶುಧನ ಬ್ರಹ್ಮಮಯಂ ಪಟ್ಟಣಸುಧೆಯು ಬ್ರಹ್ಮಮಯಂ
ಶಿಶುಗಳು ಬ್ರಹ್ಮಮಯಂ ಸಮಸ್ತದಸೆಗಳು ಬ್ರಹ್ಮಮಯಂ ೨

ಯುಗತಿಥಿ ಬ್ರಹ್ಮಮಯಂ ನಾನಾ ಖಗಮೃಗ ಬ್ರಹ್ಮಮಯಂ
ನವನಧಿ ಬ್ರಹ್ಮಮಯಂ ಚಿದಾನಂದ ಬಗಳೆ ಬ್ರಹ್ಮಮಯಂ ೩

## ೨೧೨

ಸುರತ ಸುಖಕೆ ಅಂಗನೆಯರ ಮೇಳದಲಿ
ಇಹಗೆ ಆಧ್ಯಾತ್ಮದ ಗೊಡವೆ ಏತಕೆ ಪ

ಭಂಗಿ ಮಧ್ಯದಿ ಕೂಡಿ ಇಹಗೆ ಭಜನೆ ಸಾಧನೆಗಳೇತಕೆ
ರಂಗುರಾಗದಿ ಮುಳುಗುವವನಿಗೆ ರೇಚಕ ವಿದ್ಯೆಯಾತಕೆ
ಶೃಂಗಾರದ ಪದವಿಡಿದ ಮನುಜಗೆ ಸುಷುಮ್ನದ ಮಾರ್ಗವಿದೇತಕೆ ೧

ನಲ್ಲೆಯರ ನುಡಿಯಿಂದ ಕೇಳುವಗೆ ನಾದಧ್ವನಿ ತಂಪೇತಕೆ
ಚೆಲ್ವೆಗಣ್ಣರ ಕುಚದಲೊರಗುವಗೆ ಚಿತ್ಕಳ ವಿಷಯವೇತಕೆ
ಜೊಲ್ಲು ಕುಡಿಯುತಲಿಹ ಜಡನಿಗೆ ಜ್ವಲಿಸುತಿಹ ಅಮೃತವದೇತಕೆ
ಹಲ್ಲು ತೆರೆವಹೊತ್ತಿಲಿರುವನಿಗೆ ಹಂಸದ ಕೂಟವದೇತಕೆ ೨

ಭಾಮಿನಿಯರ ಸಭೆಯಲಿದ್ದವನಿಗೆ ಭ್ರೂಮಧ್ಯದ ಸದರೇತಕೆ

ವಾಮಲೋಚನೆಯ ಅಂಗಸಂಗಗೆ ಹ್ಯನ್ಮನ ಚಿಂತನವೇತಕೆ
ಕಾಮಿನಿಯ ಕಣ್ಬಲೆಗೆ ಬಿದ್ದವಗೆ ಕಡೆಹಾಯುವ ಚಿಂತನೆಯೇತಕೆ
ಸ್ವಾಮಿ ಚಿದಾನಂದ ಗುರುವಿನ ಸ್ಮರಣೆಯದು ಅವಗೇತಕೆ ೩

## ೨೧೩

ಸೈಶಬಾಸ ಗಬರು ದರೋಡೆ ಬರತದ
ಅಬಬ್ಬ ನೋಡಿದರೆ ಆರ್ಭಟ
ಸಬಬ ಐತಿದು ಸಾಧುರ ಮಣ್ಯ
ಶುಭ ನುಡಿಯುತದ ಶಕುನದ ಹಕ್ಕಿ ಪ

ಐದು ಮಂದಿ ನೆಲೆಗಳ್ಳರು ಕೂಡಿ
ಊರ ಆತ್ಮದಲಿ ಸೇರುವರು
ಐಕ್ಯದಿಂದ ಶ್ರೀ ಗುರುವಿನ ಕೂಡಿ
ಐದು ಮಂದಿ ಬಿಟ್ಟೋಡುವರು ೧

ಎಂಟು ಹತ್ತು ಮಂದಿ ಬಂಟರು ಕೂಡಿ
ಮುತ್ತಿಗೆ ಹಾಕಿ ನಿನ್ನ ಕೆಡಿಸುವರು
ಸತ್ಯನಾದ ಶ್ರೀ ಗುರುವಿನ ನೆನೆದರೆ
ಹತ್ತು ಮಂದಿ ಬಿಟ್ಟೋಡುವರು ೨

ನೋಡಿ ಬಗೆಯೋ ನಿನ್ನ ಕಾಡವು ಹುಲಿಗಳು
ಬೇಡಿದ ಪದಾರ್ಥ ದೊರಕುವುದು
ಕೂಡಿ ಭಜಿಸೊ ಶ್ರೀ ಚಿದಾನಂದನ
ಮೂಲ ಮಂತ್ರ ಪ್ರಣವ ದೊರಕುವುದು ೩

## ೨೧೪

ಸೊಕ್ಕು ನೋಡಿ ಯೋಗೀಶನ ಸೊಕ್ಕು ನೋಡಿ
ಮಿಕ್ಕು ಮೀರಿ ಮೂರಕ್ಕರಗಳಕಂಡು
ನಕ್ಕು ಪಶ್ಚಿಮಗಿರಿ ಪೊಕ್ಕು ಬೆಳಗಿ ಜನ ಪ

ಮೂರ ಕಟ್ಟಿ ಮೂರನು ಅರಶೀರಗುಟ್ಟಿ
ಆರು ಎಂಟನೆ ಅಟ್ಟಿ ಐದು ಏಳನು ಮೆಟ್ಟಿ
ತೋರುವ ಎರಡು ನಾಲ್ಕನು ತೊಲಗಿಸಿದಾತನ ೧

ಲೋಕದ ಕೂಡ ಕೂಡಿಯೆ ವಿವೇಕ ಬೇಡ
ಏಕವೆಂಬುದು ಬಿಡ ಅನೇಕವೆಂಬುದ ನಾಡ
ಮೂಕ ಪದಗಳೆಂದು ನಿರಾಕರಿಸುತಲಿಹನು ೨

ಅಕ್ಷಯ ಮುಚ್ಚಿ ತೆರದು ತೆರದಕ್ಷಯ ಮುಚ್ಚಿ
ರಕ್ಷಿಸುತಿಪ್ಪ ಭಾಳೇಕ್ಷಣ ತಾನೆಂದು–
ಪೇಕ್ಷೆಮಾಡುತ ಸರ್ವವ ನಿರೀಕ್ಷಿಸುತಿರುವವನ ೩

ಮತಗಳ ನೆನೆದು ಶಾಸ್ತ್ರಗಳ ಗೆಲಿದು
ಪಾತಾಳಕಿಟ್ಟ ಮತಿ ಮೋಕ್ಷಗಳ ಬಿಟ್ಟ ತಿರುಗಿಸಿ ತಿರುಗಿಸಿ ಹುಟ್ಟ
ಸತತ ಕಾಲದಿ ತನ್ನ ಮತಿ ಹಿಡಿಯೆಂಬನ ೪

ಏನುಪಾಯ ಈ ಯೋಗಿಗೆ ಇನ್ನೇನು ನ್ಯಾಯ
ತಾನಾಗದ ಗುರು ಚಿದಾನಂದನ ತಾ ಕಂಡು
ತಾನೆ ತಾನಾಗಿ ತೋರುವ ನಿಜ ಯೋಗಿಯ ೫

## ೨೧೫

ಸ್ಥಳವಲ್ಲದ ಸ್ಥಳದಲ್ಲಿ ಕಸ್ತೂರಿಯನಿಟ್ಟ ಬ್ರಹ್ಮ
ಬಳಿಕ ಬೈದರೆ ವಿವೇಕವಹುದೇ ಎಲೆ ತಮ್ಮ ಪ

ಶೀಲಮೃಗ ನಾಭಿಯಲಿ ಕಸ್ತೂರಿಯನಿಡುವುದು
ಖೂಳರ ಜಿಹ್ವೆಯಲಿ ಅದನಿಡಲು ನೀತಿಯಹುದು
ನಾಲಗೆಯ ಲೋಕೋಪಕಾರವಹುದು
ಮೇಲೆ ಕಸ್ತೂರಿಬಹುದು ಜಗಸಮ್ಮತವಹುದು ೧

ಕಸ್ತೂರಿಗೋಸ್ಕರವೆ ಧರ್ಮ ಮೃಗವಾದುದನು ಬಿಡದೆ
ಕೊಲ್ಲುವವನು ವ್ಯಾಧನೀಗ
ಸಂಚಲ ಚಿತ್ತವುಳ್ಳವನು ವಿಧಿವರವರಿಯನು
ಅಸ್ತವ್ಯಸ್ತದಿ ಪಶುಗೆ ನೀರತಿದ್ದಿದನು ೨

ಧರಿಸಿದನು ದೋಷವನು ತಾನೀಗ ಎರಡನ್ನ
ಹಿರಿಯರನು ನಿಂದಿಪುದು ಮೃಗವ ಕೊಂದವನು
ಕರುಣೆ ಚಿದಾನಂದ ಸದ್ಗುರುವಿಗೆ ಮೆಚ್ಚಿಸು ಅದು
ಮರವಾದ ಮುಪ್ಪಿನಲಿ ವಿಧಾತ್ರನು ೩

## ೨೧೬

ಹಿರಿದು ಸಂಸಾರ ನೆಲೆಯದು ಕಲ್ಪತರು
ಕಾಮಧೇನುವದು ಸುಖವೋ ದುಃಖವೋ
ಹೊನ್ನು ಸತಿಯು ಸುತರೆನ್ನವರೆನ್ನದೆ
ಚಿನ್ಮಯರೂಪೆಂದು ತಿಳಿದು
ಉನ್ನತವಾಗಿಹ ಸಾಧುಗುಣದಿ ತಾ
ಮುನ್ನ ನೋಡುವವನ ನರನೋ ಹರನೋ ೧

ಮನೆಯು ಮಾತಾ ಪಿತ ಮನುಜವರ್ಗವನೆಲ್ಲ
ಘನ ಮಹಿಮನ ವಿನೋದವೆಂದು
ಸನುಮತದಲಿ ತಾನಧಿಕಾರಿಯೆನಿಸಿಯೆ
ಮನದಿ ಸೂಚಿಪುದು ಉರಿಯೋ ಸಿರಿಯೋ ೨

ಬಂಧನದೊಳು ಮಹಾ ನಿಂದನೆಯನು ಕೇಳುತಲಿ
ಕುಂದು ಕೊರತೆಗೆಲ್ಲ ಹಿಗ್ಗುತಲಿ
ಇಂದಿದು ಅತ್ಮನ ಲೀಲಾ ಚರಿತನೆಂದು
ಮುಂದೆ ತೋರುವದಿದು ಭಯವೋ ಜಯವೋ ೩

ಜನನ ಮರಣ ಸುಟ್ಟು
ಮನುಜ ಜೀವನ ಕೆಟ್ಟು
ಕನಸಿನ ತೆರ ಸಂಸಾರ ಮೂಡಿ
ದಿನಕರ ಜ್ಯೋತಿಯಲಿ ಬಹುಬೆಳಗುತಲಿ ತಾ ನಿಹುದು
ಗೆಲುವೋ ಒಲವೋ ೪

ಕರುಣ ಕಟಾಕ್ಷ ಸುಕರುಣ ಶಾಂತತ್ವದಿ
ಸರಸ ಸುಜ್ಞಾನವನಳವಡಿಸಿ
ಗುರು ಚಿದಾನಂದಾವಧೂತನೆ ತಾನಾಗಿ
ಹರುಷಿಸಿ ಸುಖಿಪುದು ದೊರೆಯೋ ಚರಿಯೋ ೫

## ೨೧೭

ಹುಚ್ಚು ಹತ್ತಿತು ಹುಚ್ಚು ಹುಚ್ಚು ಜ್ಞಾನದ ಹುಚ್ಚು
ಹುಚ್ಚು ತಿಳಿವುದಲ್ಲ ಹುಚ್ಚನ ಗುರುವೇ ಬಲ್ಲ ಪ

ನಿರ್ಮಳಾಂಗದ ಹುಚ್ಚು ನಿಗಮ ಶಿರದ ಹುಚ್ಚು
ಕರ್ಮರಹಿತನ ಹುಚ್ಚು ಕಮನೀಯ ಹುಚ್ಚು ೧

ಸಜ್ಜನ ಸಂಗದ ಹುಚ್ಚು ಸಂತೋಷಪೂರಿತ ಹುಚ್ಚು
ವೆಚ್ಚವಿಲ್ಲದ ಹುಚ್ಚು ಎಣಿಸಬಾರದು ಹುಚ್ಚು ೨

ಬ್ರಹ್ಮಾನಂದದ ಹುಚ್ಚು ಭೇದರಹಿತದ ಹುಚ್ಚು
ಹಮ್ಮನಳಿದ ಹುಚ್ಚು ಪರಿಪೂರ್ಣ ಹುಚ್ಚು ೩

ಮತವ ಕಡಿದಾ ಹುಚ್ಚು ಮಹತ್ತೆನಿಪಾ ಹುಚ್ಚು
ಸತತ ಶಾಂತಹ ಹುಚ್ಚು ಸಹಜಾನಂದದ ಹುಚ್ಚು ೪

ಲೋಕ ಸಾಕ್ಷಿಕ ಹುಚ್ಚು ಲೋಕವೃತಾನಾದ ಹುಚ್ಚು
ಏಕವೆಂಬ ಹುಚ್ಚು ಯಮನ ಗೆಲಿದಾ ಹುಚ್ಚು ೫

ಆರರ ಮೇಲಣ ಹುಚ್ಚು ಅನ್ಯಮನಸ್ಕದ ಹುಚ್ಚು
ಚಾರು ತಾಮಸ ಹುಚ್ಚು ಚಲನೆಯಿಲ್ಲದ ಹುಚ್ಚು ೬

ಗುರುಭಕ್ತಿಯ ಹುಚ್ಚು ಗುರೂಪದೇಶದ ಹುಚ್ಚು
ಸ್ಮರಣೆ ಬಲಿದ ಹುಚ್ಚು ಸಮನಿಸಿದ ಹುಚ್ಚು ೭

ಜ್ಯೋತಿರ್ಮಯದ ಹುಚ್ಚು ಜಾತಿ ನಿರ್ಮೂಲದ ಹುಚ್ಚು
ಖ್ಯಾತಿಯಾಗಿಹ ಹುಚ್ಚು ಭೇದರಹಿತದ ಹುಚ್ಚು ೮

ಚಿನ್ಮಯ ಚಿದ್ರೂಪದ ಹುಚ್ಚು ಚಿದಾನಂದನ ಹುಚ್ಚು
ತನ್ಮಯವಾಗಿದೆ ಹುಚ್ಚು ತಿಳಿಯಲರಿಯುವುದು ಹುಚ್ಚು ೯

## ೨೧೮

ಅಜ್ಞಾನಿ ನೀನೀಗ ಕೇಳು ಸುಜ್ಞಾನಿಗಳನು ನೀ ನಿಂದಿಸುವೆ
ಭಗ್ನವಾಗುವೆ ನೀನು ಯಮನ ಕೈಯಿಂದ ಪ

ವಿಷಯದೊಳಗೆ ಹುಟ್ಟಿ ಬೆಳೆದು
ವಿಷಯದೊಳಗೆ ಮುಳುಗಿ ತೇಲಿ
ವಶವಲ್ಲದ ಮಾತುಗಳ ನುಡಿವೆ ನೀನು ಕೇಳೋ ಅಜ್ಞಾನಿ ೧

ಅಸಮ ಗುಣಗಳ ನೋಡೆ
ಋಷಿಗಳ ಅನುಭವಗಳನು ಹಳಿವೆ
ದುಷ್ಕಾನ ನೀನು ಕೇಳೋ ಅಜ್ಞಾನಿ ೨

ಒಂದು ನಿನಗ್ಹೋಗಲಿಲ್ಲ ಒಂದು ನುಡಿನಯವಿಲ್ಲ
ಇಂದು ಅನುಭವಿ ತಾನು ಎಂಬೆಯಲ್ಲೊ ಕೇಳೋ ಅಜ್ಞಾನಿ ೩

ಸುಂದರ ಸಾಕ್ಷಿಯ ನಲಿಯದೆ ನೀನೀಗ
ಇಂದೀಗ ನಾನೆಂದು ಕಂಡೆಯಲ್ಲೋ
ಚಂದ ಚಿದಾನಂದ ನೀನಾಗಿಹೆ ಕೇಳು
ಮಂದ ಮತಿಯ ಬಿಡು ನೀನು ಕೇಳೋ ಅಜ್ಞಾನಿ ೪

## ೨೧೯

ಅಧಿಕಾರಿ ಮೋಕ್ಷಾಧಿಕಾರಿ ಬಲು
ಗುದಿಗೆಯ ಮಾರಿ ಅನಧಿಕಾರಿ ಪ

ಮುರುಕು ಮಾಳಿಗೆಯಲಿರೆ ಮರುಗುತಲ-
ವರಿಗೆ ಮನೆಯ ಕೊಡುವನವನಧಿಕಾರಿ
ಮರಗಳ ಕಡಿವನು ಮುಂದುಗಾಣದಲೆ
ಮನೆ ಹೊಗಗೊಡದವ ಅನಧಿಕಾರಿ ೧

ಕೇಳುತ ತತ್ವವ ಆಲೋಚನೆಮಾಡಿ
ಅಂತೆಯ ನಡೆವವನಧಿಕಾರಿ
ಖೂಳರೊಳಾಡುತ ಕುಂಚಿತನೆ
ಕುರುಡನವನು ಅನಧಿಕಾರಿ ೨

ಪಡೆಯನು ಪಾಪವ ಬಿಡನವ ಸತ್ಯವ
ನುಡಿವ ಸುವಾಕ್ಯವನಧಿಕಾರಿ
ಮಡದಿಯ ಮೋಹಕೆ ಮುಂದುಗಾಣದಲಿಹ
ಮುಡುದಾರನೆನಿಪವ ಅನಧಿಕಾರಿ ೩

ತಿಳಿದರ ಸೇವೆಗೆ ತೇಯುವ ತನುವನು
ತಗಲನು ನಿಂದ್ಯಕೆ ಅಧಿಕಾರಿ
ತಲೆಯನು ಮಣಿಯನು ಮನದಲಿ
ಮೋಸವ ಚಿಂತಿಪನವನು ಅನಧಿಕಾರಿ ೪

ಚಿತ್ ಬಿಂದು ಉಕ್ಕುತ ಚಿತ್ಸುಖ ಸವಿದು
ಚಿದಾನಂದನಾಗುವನಧಿಕಾರಿ
ಎಡಬಲ ನೋಡುತ ಎತ್ತತ್ತ ಒಲೆವುತ
ನಿಂತಿಹನವನು ಅನಧಿಕಾರಿ ೫

## ೨೨೦

ಅರಿತ ಗುರುಗಳನೀಗ ಹುಡುಕಿ ಹೊಂದು ಎಚ್ಚರಿಂದು
ಮರುಳ ಗುರುಗಳನೀಗ ಸೇರೆ ನರಕ ತಪ್ಪದೋ ಪ

ಒಳ್ಳೆ ನಾವೆಯೊಳು ಕಲ್ಲು ಹಾಕಿ ನದಿಯನು ದಾಟಿಪುದು
ಕಲ್ಲಿಗೆ ಕಲ್ಲು ಕಟ್ಟಿ ಮುಂದೆ ನಡೆಯದು ಮುಳುಗಿಹೋಗುವುದೋ ೧

ಜಾರುವವನ ಕಾಲು ಹಿಡಿಯೆ ಜಾರುತ ನೀನು ಬೀಳುವೆ
ಘೋರ ಗುರುವ ನಿಂತು ಸೇರೆ ಕೆಟ್ಟುಹೋಗುವೆ ಭವಕೆ ಸೇರುವೆ ೨

ತಾನು ಮೂರ್ಖ ಮೂರ್ಖನ ಕೂಡಲು ಇಹುದು ಕೇಡು ಮುಂದೆ
ಜ್ಞಾನಿ ಚಿದಾನಂದ ಬಗಳೆ ಚರಣ ಹೊಂದೆ ಮುಕ್ತಿಯ ಅಂದೇ ೩

# ಲೋಕನೀತಿಯ ಪದಗಳು

## ೨೨೧

ಅವಿವೇಕ ಸಂಸಾರ ಸುಖವ ಕೇಳ್ಮಗನೆ
ಭವವ ತಿರುಗುವನಿವನನಂತ ಜನ್ಮವ ಪ

ಬೆಳಗಾಗಲು ನಿತ್ಯಗಂಡಾತರವು ಎಂಬ
ತೊಳಲಾಡುತಿಹ ತಾನು ಹೊಟ್ಟೆಗಾಗಿ ಎಂಬ
ಬಲುಜನಕೆ ನಾನೀಗ ಎಲ್ಲಿತರಲೆಂಬ
ಕಳವುಗಳ ಮಾಡಿ ಕಾಲ್ಕೈಕೊಯಿಸಿಕೊಂಬ ೧

ಅಳಿಯನೊಲ್ಲನು ಮಗಳ ಏನು ಗತಿ ಎನುವ
ಹೊಲೆ ಹೋದಳು ಹ್ಯಾಗೆ ಮಾಡಲಿ ಎನುವ
ಬಲು ದಿವಸವಾಯ್ತು ಸುತರಾಗಲಿಲ್ಲ ಎನುವ
ಹಲವು ದೇವರ ಮುಂದೆ ಕೆಡಹುವನು ತನುವ ೨

ಗಂಡು ಮಕ್ಕಳು ಹುಟ್ಟೆ ಸಕ್ಕರೆಯ ಹಂಚುವನು
ಕೊಂಡೊಯ್ಯೆ ಯಮನು ಹಣೆಯ ಬಡುಕೊಳ್ಳುವನು
ಹೆಂಡತಿಗೆ ರೋಗ ಬರೆ ಮನೆ ಮುಳುಗಿತೆನ್ನುವನು
ಕಂಡ ವಿಷಯಕೆ ಬಾಯಿ ತೆರೆಯುತಿಹನು ೩

ಗುರು ದೇವರ ದ್ರವ್ಯ ವಂಚಿಸುವವನಾಗಿ
ಪರಹಿತವ ದಾನ ತಿಳುವಳಿಕೆ ಎಲ್ಲ ನೀಗಿ
ಜಿರಲೆಯಂದದಿ ಜನಕೆ ಬೇಡದವನಾಗಿ
ಬರಿದೆ ಸಾಯುವೆ ನೀನು ಕಾಲವಶನಾಗಿ ೪

ಜ್ಞಾನಿಗಳು ಮನೆಯನೆ ಹೊಗಬಾರದೆಂದು
ಏನು ನಡತೆಯು ಅವರದೀಗ ಎಂತೆಂದು
ನಾನು ಜಾಣನು ನನಗೆ ಅಧಿಕರಿಲ್ಲೆಂದು
ಜ್ಞಾನಿ ಚಿದಾನಂದನನು ಮರೆತೆ ಎಂದೆಂದು ೫

## ೨೨೨

ಅಸುರ ಪ್ರಕೃತಿಯ ದೈವ ಪ್ರಕೃತಿಯನೆರಡನು ನೀನೀಗ ಕೇಳು
ಅಸುರ ಪ್ರಕೃತಿಯಲಿ ಜನ್ಮವು ದೈವ ಪ್ರಕೃತಿಯಲಿ ಮುಕ್ತಿಯೆ ಎಂಬೆನು ಪ

ಕೃತ್ರಿಮ ಕಾಮವು ಮದಮತ್ಸರವು ತಾನಿವು ಅಸುರ ಪ್ರಕೃತಿ
ಸತ್ಯವು ಶಾಂತವು ಶಮದಮವೆಂಬಿವು ತಾನಿವು ದೈವ ಪ್ರಕೃತಿ ೧

ಬದ್ಧ ಅವಿದ್ಯೆಯು ಭ್ರಾಂತಿಯು ನಾಶವು ತಾನಿವು ಅಸುರ ಪ್ರಕೃತಿ
ಶ್ರದ್ಧೆಯು ಸೌಮ್ಯವು ಸಂತಸ ಸಾಕ್ಷಿಯು ತಾನಿವು ದೈವ ಪ್ರಕೃತಿ ೨

ಕಪಟವು ಕಲ್ಮಷ ಕೃತ್ರಿಮ ಸಂಶಯ ತಾನಿವು ಅಸುರ ಪ್ರಕೃತಿ
ಅಪರೋಕ್ಷಾನುಭವ ಆತ್ಮ ವಿಚಾರವು ತಾನಿವು ದೈವ ಪ್ರಕೃತಿ ೩

ದುಃಖ ದುರ್ಬೀಜವು ಕ್ರೂರ ದೃಷ್ಟಿಯು ತಾನಿವು ಅಸುರ ಪ್ರಕೃತಿ
ಸುಖ ಆನಂದವು ಅಂತರ ದೃಷ್ಟಿಯು ತಾನಿವು ದೈವ ಪ್ರಕೃತಿ ೪

ಮರಣ ಜನನಕೆ ಅಜ್ಞಾನ ಕಾರಣ ತಾನಿದು ಅಸುರ ಪ್ರಕೃತಿ
ಅರಿತು ತನ್ನನು ಚಿದಾನಂದನಾಗುವುದು ತಾನಿದು ದೈವ ಪ್ರಕೃತಿ ೫

## ೨೨೩

ಅಹಂಕಾರದಿ ಮದ ಅಹಂಕಾರದಿ
ಅಹಂಕಾರದಿ ಹಿರಿಯರ ನಿಂದಿಸಿ
ಆವ ನರಕಕೆ ತೆರಳುತಿಹರೋ ಪ

ಕಂಡ ಕಂಡ ಮನೆಯ ತಿರುಗಿ ಕಾಲ್ಮುರಿ ನಾಯಿ ಬೆದಕಿದಂತೆ
ಹೆಂಡೆಯು ಜೊಂಡನು ಹಂದಿಯು ಬೆದಕಿದಂತೆ

ಭಂಡ ಮನುಜರು ತುಂಡು ಗುಲಾಮರು
ಭ್ರಷ್ಟ ಹೊಲೆಯರು ಬಾಳುಗೇಡಿಗಳು
ಪಂಡಿತ ಮಹಾತ್ಮರ ತಪ್ಪು ಹುಡುಕುವವರು ೧

ಯವಲಕಾಡೊಳು ಕತ್ತೆ ಗೊರಕನು ಯತ್ನವಮಾಡಿ ಬೆದಕಿದಂತೆ
ನೆಲೆಯನರಸುತ ಪೊದೆಯೊಳಗನು ನರಿಯು ಬೆದಕಿದಂತೆ
ಕಲುಷಕರ್ಮರು ಕಾಳ ಮೂಳರು ಕಷ್ಟದುಷ್ಟರು
ಬಲು ಮಹಾತ್ಮರ ನಡೆಯ ತಪ್ಪು ಹುಡುಕುವರು ೨

ನಿತ್ಯಾನಂದರ ನಿತ್ಯ ತೃಪ್ತರ ನಿತ್ಯ ಶುದ್ಧರ
ನಿತ್ಯಬುದ್ಧ ನಿತ್ಯ ನಿಶ್ಚಯ ನಿತ್ಯನಿರವಯ ನಿತ್ಯ ಆತ್ಮರ
ಪ್ರತ್ಯಗಾತ್ಮರ ಪರಬ್ರಹ್ಮರ ಪರಮ ಚಿದಾನಂದನ ಬೆರೆದವರ
ನಿತ್ಯ ಜೀವನ್ಮುಕ್ತರ ನಡತೆಯ ತಪ್ಪು ಹುಡುಕುವರು ೩

## ೨೨೪

ಆಡಿದ ನಾಟಕವ ಕಿರಾತ ಮದನ
ಗೂಢ ಚಿದಾನಂದನನರಿಯದ ನರ ಮೃಗವ ಪ

ಸ್ತ್ರೀಯ ದೇಹವು ಎಂಬ ಅಡವಿಯೊಳಗೆ
ಸ್ತ್ರೀಯ ಹುಬ್ಬೆಂಬ ಸಿಂಗಾಡಿ ತೆಗೆದು
ಮುಂಗುರುಳುಗಳು ಎಂಬ ಸಿಂಜನಿಯನೆ ಬಿಗಿದು
ಸ್ತ್ರೀ ದೃಷ್ಟಿಯೆಂದೆಂಬ ಸಿಳೀ ಮುಖವನೆ ಪಿಡಿದು ೧

ಸಿರಿತುಳುಕುವ ಅವಯವದ ಸಿಡಿಬಲೆಯನೊಡ್ಡಿ
ಪರಿಯ ತಿಳಿಯದೆ ಬರುವ ಪುರುಷ ಮೃಗವ
ಕರುಣವಿಲ್ಲದೆ ಮಹಾ ಕೋಪದಿಂದಲಿ
ಎರಡು ಗಿರಿಯ ಸಂದಿಯಲಿರಿದು ಇರಿದು ಕೆಡುತಿಹ ೨

ಇಂತು ಬೇಟೆಯನಾಡಿ ಎಲ್ಲ ಲೋಕವ ಕೆಡಹಿ
ಚಿಂತೆ ಮಾಡುವ ಚಿದಾನಂದ ಭಕ್ತರ ಮುಂದೆ ಸುಳಿಯಲಿಕಂಜಿ
ಮರೆಯದೆ ಶಿವನ ಗುರುತ ಅಂತಹುದು
ಇವರನೀಗ ಮುಟ್ಟಬಾರದು ಎಂದು ೩

## ೨೨೫

ಆಡುವನೀಶ್ವರ ಜೀವಪಗಡೆಯ ಕಾಯ
ಆಡುವನವರವರ ಕರ್ಮಾನುಸಾರ
ಆಡಿಯೆ ತನಗೆ ಬೇಸರವಾಗೆ ಕಟ್ಟುವ
ಆಡುವ ವಿವರವ ಹೇಳುವೆ ಕೇಳಿ ಪ

ಪ್ರಪಂಚ ಹಾಸಂಗಿ ಪ್ರಾರಬ್ಧ ಲತ್ತವು
ಪಾಪ ಅಜ್ಞಾನ ಲಿಂಗತನುವೆಂಬ ಚಿಟ್ಟೆಯು
ರೂಪು ನಾನಾ ಬಗೆಯ ಜೀವಕಾಯನೆ ಮಾಡಿ
ಭಾಪು ಭಳಿರೇ ಎಂದು ಕೊಂದು ಹೂಡಾಡುತ ೧

ಒಂದಕೊಂದರಬಲ ಒಂದಕೆ ಜೋಡು ಬಲ
ಒಂದು ಜೋಡಿಗೆ ಒಂದು ಜೋಡು ಬಲ ಮಾಡಿ
ಒಂದರಿಂದೊಂದು ಕೊಂದು ಜೋಡಿಂದ ಜೋಡು ಕೊಂದು
ಅಂದು ಹುಟ್ಟಿ ಸಾಯುವುದಕ್ಕೆ ಕಡೆಯಿಲ್ಲದೇ ೨

ಈ ಪರಿಯಲಾಡುತ್ತ ತನಗೆ ಬೇಸರ ಹುಟ್ಟೆ
ಪಾಪಿಗಳನೆಲ್ಲ ಪಾಪ ಚೀಲದಿ ಕಟ್ಟಿ
ಭೂಪ ಚಿದಾನಂದನು ಆದ ಈಶ್ವರ ತಾನು
ರೂಪು ವಿರೂಪಾದ ನಿದ್ದೆಯಲಿ ಮಲಗುವ ೩

## ೨೨೬

ಆತ್ಮನನು ತಿಳಿಯದುದೇ ಕೇಡು ಅವನ ಜನ್ಮವ ಸುಡು
ಆತ್ಮನನು ಅರಿಯದುದೆ ಪಾಪ ಅಹುದು ಜನ್ಮನಿರೂಪ ಪ

ಸರ್ವಶಾಸ್ತ್ರವನೋದಿ ಸಕಲರೊಳಗೆ ವಾದಿ
ಸರ್ವವನೇಕವ ಕೂಡಿಟ್ಟು ಘನ ಅಹಂಕಾರದಿ ಕೆಟ್ಟು ೧

ಕೋಪ ತಾಪವ ಗಳಿಸಿ ಕೊನೆಬನೆ ಅನುಗೊಳಿಸಿ
ವ್ಯಾಪಾರ ಸ್ತ್ರೀಯರ ಚಿಂತೆ ಊರ ಶ್ವಾನನು ಎಂಬಂತೆ ೨

ಹಿರಿಯರ ನಿಂದೆಯ ಮಾಡಿ ಹೀನತ್ವದಿ ಹಾಡಿ
ಗುರು ಚಿದಾನಂದ ಕಾಣ ಪಾಪರಾಶಿಯಲಿ ಕೂಡಿ ೩

## ೨೨೭

ಆರಿಗಾರು ಇಲ್ಲವಯ್ಯ ಆರಿಗಾರು ಇಲ್ಲವಯ್ಯ ಪ

ಮಡದಿಯೆಂಬಳು ಯಾಕೆ
ಬಿಡದೆ ಪಂಕ್ತಿಯ ಊಟ ಎಂಬ ಭಾವ ಮೈದುನನೇಕೆ
ಪಡದ ತಂದೆ ತಾಯಿ ಏಕೆ ಪಡಿತತ್ವ ಯಾಕೆ
ಬಡಿಯುತ ಯಮನೀಗ ಒಯ್ಯೆ ಬಿಡಿಸಿಕೊಂಬರಿಲ್ಲ ೧

ಅಣ್ಣತಮ್ಮನು ಯಾಕೆ ಅಳಿಯನು ಯಾಕೆ
ಬಣ್ಣದ ಬಾಳು ತಾನೇಕೆ ಬಂಧುಗಳದೇಕೆ
ಚಿನ್ನಕೊಪ್ಪರಿಗೆ ಯಾಕೆ ಚಿತ್ರಮನೆಯಾಕೆ
ಕಣ್ಣ ಕಟ್ಟಿ ಕಾಲನೆಳೆಯ ಕಾವರಾರು ಇಲ್ಲವಯ್ಯ ೨

ಆರ ನಂಬಿದರು ನಿನ್ನಕಡೆ ಹಾಯಿಪರಿಲ್ಲ
ನೂರು ಬಾರಿ ತಿಳಿದು ನೋಡು ನಿನ್ನೊಳಗೆಲ್ಲ
ಧೀಧೀ ಚಿದಾನಂದ ಹೊಂದೆಯುಕ್ತಿಯಹುದೆಲ್ಲ
ಬಾರೆ ಜನನ ಮರಣಕೆ ಸಂದೇಹವಿಲ್ಲ ೩

## ೨೨೮

ಆಶ್ರಮ ಧರ್ಮ ನಾಲ್ಕು ಉಪದ್ರ
ಆಶ್ರಮ ಧರ್ಮ ಬಿಡೆ ಅವ ಪಟ್ಟ ಬದ್ಧ ಪ

ಬ್ರಹ್ಮಚಾರಿಯು ಆಗೆ ಕರ್ಮದ ಉಪದ್ರ
ಬ್ರಹ್ಮಚರ್ಯವು ಹೋಗೆ ಸ್ತ್ರೀಯ ಉಪದ್ರ
ಸುಮ್ಮಗೆ ವಾನಪ್ರಸ್ಥನಾಗೆ ಬೆಂಕಿ ಉಪದ್ರ
ಹಮ್ಮಳಿದು ಸಂನ್ಯಾಸಿಯಾಗೆ ಸ್ನಾನದುಪದ್ರ ೧

ಗೃಹಸ್ಥನಾಗೆ ವ್ರತಗಳ ಉಪದ್ರ
ಸತತ ಸಂಧ್ಯಾ ಜಪತಪದ ಉಪದ್ರ
ಮಿತಿ ಇಲ್ಲದ ನಾನಾ ಕರ್ಮಗಳ ಉಪದ್ರ
ಸತತ ಶುಚಿ ಅಶುಚಿ ಎಂಬುದರ ಉಪದ್ರ ೨

ಆವ ಆಶ್ರಮದಲಿರೆ ಆವುದೊಂದು ಉಪದ್ರ
ಆವ ಆಶ್ರಮದಿ ಉಪದ್ರವೇ ಅದು ಹೋಗದು
ಆವಾಶ್ರಮಗಳಿಗೆ ಬೇರೆ ಇರೆ ಸುಖಿಯಿಹ
ದೇವ ಚಿದಾನಂದ ಮಹ ಸರ್ವಮಹೋಪದ್ರವ ಪರಿಹಾರವಯ್ಯ ೩

## ೨೨೯

ಆಸೆ ಎಂಬೋ ನದಿ ಆಸೆ ಎಂಬೋ ನದಿ
ಆಸೆ ಎಂಬೋ ನದಿಯಿರೆ ಮಹಾ–
ತೃಷೆಯ ಆರು ದಾಟಲಳವಲ್ಲ ಪ

ಮನೋರಥ ನೀರು ಮನೋರಥ ನೀರು
ಮನೋರಥ ನೀರು ಇರೆ ಮಹಾತೃಷೆ ಅಲೆಗಳಯ್ಯ ೧

ಮೋಹವೆಂಬೋ ಸುಳಿ ಮೋಹವೆಂಬೋ ಸುಳಿ
ಮೋಹವೆಂಬಾ ಸುಳಿಯಿರೆ ಮಹಾತೊರೆ ಹರಿಯಯ್ಯಾ ೨

ಸತಿ ಎಂಬ ಮೊಸಳೆ ಸತಿ ಎಂಬಾ ಮೊಸಳೆ
ಸತಿ ಎಂಬ ಮೊಸಳೆಯಿರೆ ಸುತರೆಂಬರು ಏಡಿಗಳಯ್ಯ ೩

ಬಂಧಗಳು ಗ್ರಹ ಬಂಧುಗಳು ಗ್ರಹ
ಬಂಧಗಳು ಗ್ರಹ ಇರೆ ಬಡಿದಾಟ ನೀರು ಗುಳ್ಳೆಯಯ್ಯ ೪

ಗುರು ದಯವೇ ನಾವೆ ಗುರುದಯವೇ ನಾವೆ
ಗುರುದಯವೆ ನಾವೆಯಿರೆ ಗುರು ಚಿದಾನಂದನ ಸೇರಬೇಕಯ್ಯ ೫

## ೨೩೦

ಐಲು ಬಡ್ಡಿ ಕೇಳೆ ನೀನು ಐಲು ಬಡ್ಡಿ ಪ

ಮನೆಯು ನಿತ್ಯವಲ್ಲ ವಸ್ತಿ ಮುಳಗಿತೆನ್ನು ಐಲುಬಡ್ಡಿ
ತನಯ ಸತಿಯು ವಸ್ತಿ ಸಹವಾಸಿಯವರು ಐಲುಬಡ್ಡಿ
ಇನಿಬರನ್ನು ನಂಬಬೇಡ ಹಾದಿಯವರು ಐಲುಬಡ್ಡಿ
ನಿನಗೆ ಆರು ಇಲ್ಲ ವ್ಯರ್ಥ ಕೆಡುವೆ ಐಲುಬಡ್ಡಿ ೧

ಎಷ್ಟು ತಂದೆ ತಾಯಿ ನಿನಗೆ ಐಲುಬಡ್ಡಿ
ಹುಟ್ಟಿದೆಲ್ಲಿ ಹೋಹರೆತ್ತ ನೀನು ಅರಿಯೆ ಐಲುಬಡ್ಡಿ
ನಷ್ಟವಾಗುವಿ ನನ್ನ ನನ್ನದೆಂದು ಐಲುಬಡ್ಡಿ
ಕುಟ್ಟಿ ಪುಡಿಯ ಮಾಡ್ವ ನಿನ್ನ ಯಮನು ಬಿಡದೆ ಐಲುಬಡ್ಡಿ ೨

ಇಂತು ನುಗ್ಗುತಿರೆ ಬರಿದೆ ಭ್ರಮೆಯಿಂದ ಐಲುಬಡ್ಡಿ
ಮುಂತೆ ಸದ್ಗುರುವ ಹೊಂದು ನಿನ್ನ ತಿಳಿವೆ ಐಲುಬಡ್ಡಿ
ಚಿಂತೆಯ ತನು ಚಿದಾನಂದ ನೀನಾಗೆ ಐಲುಬಡ್ಡಿ
ಅಂತು ಕರ್ಮ ತೊಳೆದು ನಿನ್ನ ನಿಜದಿ ನಿಲುವೆ ಐಲುಬಡ್ಡಿ ೩

## ೨೩೧

ಉದ್ಧರಿಸಿರೋ ನೀವು ನಿಮ್ಮ ತಿಳಿಯಬೇಕು ಪರಬೊಮ್ಮ ಪ

ಮನುಜ ಜನ್ಮಕೆ ಬಂದು ಮರೆತರೆ ಕಷ್ಟವು ಮುಂದು
ಇನಿತು ವಿಚಾರವಿಲ್ಲ ಇದುವೆ ವಿವೇಕವದಲ್ಲ ೧

ಕೊನಬುಗಳೆಲ್ಲವ ಬಿಡಿರೋ ಕೋಪವನೆಲ್ಲವ ಸುಡಿರೋ
ತನು ಸುಖವಾಗಿಹುದಲ್ಲ ತಪ್ಪಿದರೆ ಬಳಿಕೆಲ್ಲ ೨

ಭ್ರಮೆಯೆಲ್ಲವ ಬಿಡಬೇಕು ಬಂಧನ ಹರಿಯಲು ಬೇಕು
ನಮಗಿದು ನೀತಿಯಿದಲ್ಲ ನಾಚಿಕೆ ಕಿಂಚಿತ್ತು ಇಲ್ಲ ೩

ತನ್ನ ತಿಳಿದರೆ ತಾ ಬಂಧು ತನ್ನ ಮರೆತರೆ ಶತ್ರುವಹ
ಸನ್ನುತವಚನವಿದೀಗ ಸಾಧಿಸುವುದು ಬಹುಬೇಗ ೪

ಚೆನ್ನಾಗಿ ಶ್ರವಣದ ಕೇಳಿ ಚಿತ್ತ ಶುದ್ಧಿಯ ತಾಳಿ
ಚಿನ್ಮಯನನು ನೀವು ಧರಿಸಿ ಚಿದಾನಂದ ತಾವೆಂದು ಸ್ಮರಿಸಿ ೫

## ೨೩೨

ಉಪವಾಸ ಬೀಳುವುದ್ಯಾಕೋ ಮನುಜ
ಉಪವಾಸ ಬೀಳುವುದ್ಯಾಕೋ
ಉಪವಾಸ ಬೀಳಲಿಕೆ ನಿನಗೆ ಗ್ರಹಚಾರ ಸಾಲದೆ ಬೇಕೋ ಪ

ಅಂಗದಿ ತತ್ವಾಭಿಮಾನವು ಇರಲಿಕೆ ಆಹಾರವರ್ಜಿಪುದ್ಯಾಕೋ
ಮಂದ ಮತಿಗಳು ಕೂಡಿಯೆ ನೀನು ಮಂದಮತಿಯಾದೆ ಯಾಕೋ ೧

ದೇಹದಿ ವೈಶ್ವಾನರನಿರಲಿಕೆ ದೇಹವ ದಂಡಿಪುದ್ಯಾಕೋ
ಮಹಾವ್ರತವೆಂದು ಮೊಸರ ಬಿಟ್ಟು ಮಣ್ಣನೆ ಮುಕ್ಕುವಿಯಾಕೋ ೨

ನಿತ್ಯಾತ್ಮನು ಚಿದಾನಂದ ತಾನಿರೆ ನಿರಾಹಾರವದ್ಯಾಕೋ
ಮತ್ತೇಕಾದಶಿ ಶಿವರಾತ್ರೆನ್ನುತ ಬಿಣ್ಣನೆ ಬಳಲುವಿಯಾಕೋ ೩

## ೨೩೩

ಎಂತು ಪೇಳ್ವುದು ಇವನಿಗೆ ಎಂತು ಪೇಳ್ವುದು ಜ್ಞಾನ
ಎಂತು ಗಂಗೆಯಲಿ ಮುಳುಗಿದರೇನು ಶುಚಿಯಹುದೇ ಶ್ವಾನ ಪ

ಹೆಂಡತಿ ಉಟ್ಟು ತಿರುಗಾಡುವುದು ಹರಕು ಹರಕು ಚಿಂದಿ
ಮಿಂಡಿತಿ ಉಟ್ಟು ಮೆರೆಯುವುದು ಮಿಸುನಿಯ ಮೇಲ್ವಂದಿ ೧

ಹೆಂಡತಿಯದು ತಾ ಕೊಳೆ ತುಂಬಿದ ಮಂಡೆ
ಮಿಂಡತಿಯದು ಚೌರಿ ರಾಗಟೆ ಗೊಂಡೆ ೨

ಇದ್ದಲಿಯನು ಹಾಲೊಳ್ ತೊಳೆದರೆ ಶುಭ್ರವು ತಾನಹುದೆ
ಶುದ್ಧ ಚಿದಾನಂದನ ಬೋಧೆಯಲಿ ದುರ್ಬುದ್ಧಿಗೆ ಬುದ್ಧಿಯು ಬಹುದೆ ೩

## ೨೩೪

ಎಚ್ಚರ ಹೇಳುವೆ ನಾನೀಗ ನಿನಗೆ ಎಚ್ಚರಿಕೆಚ್ಚರಿಕೆ
ಸಚ್ಚಿದಾನಂದನೆ ನೀನೆಂದು ತಿಳಿ ನಿನ್ನ ಎಚ್ಚರಿಕೆಚ್ಚರಿಕೆ ಪ

ಈಷಣವೆಂದೆಂಬ ಕಾಡಿನೊಳಗೆ ಹೊಕ್ಕಿ ಎಚ್ಚರಿಕೆಚ್ಚರಿಕೆ
ದೋಷಕಾರಿಗಳು ಇಂದ್ರಿಯನಾಯ್ಗಳು ಎಳೆದಾವು ಎಚ್ಚರಿಕೆಚ್ಚರಿಕೆ ೧

ಅಷ್ಟಮದವೆಂಬ ಆನೆ ಕೈಗೆ ಸಿಕ್ಕಿ ಎಚ್ಚರಿಕೆಚ್ಚರಿಕೆ
ದುಷ್ಟ ಪಂಚಕ್ಲೇಶದ ಪೊದೆಗೆ ಸಿಲುಕೀಯೆ ಎಚ್ಚರಿಕೆಚ್ಚರಿಕೆ ೨

ವ್ಯಸನಗಳೆಂಬ ಕುದುರೆಯ ಕಾಲೊಳಾದೀಯೆ ಎಚ್ಚರಿಕೆಚ್ಚರಿಕೆ
ದುಶ್ಮನರಾರ್ವರ ಕಣ್ಣಿಗೆ ಬಿದ್ದೀಯೆ ಎಚ್ಚರಿಕೆಚ್ಚರಿಕೆ ೩

ತಾಪತ್ರಯದ ಹಳ್ಳದಿ ಹರಿದುಹೋದೀಯೆ ಎಚ್ಚರಿಕೆಚ್ಚರಿಕೆ
ಪಾಪವೆಂಟು ಪಾಶವೆಂಬ ಉರುಲಿಗೆ ತಗುಲೀಯೆ ಎಚ್ಚರಿಕೆಚ್ಚರಿಕೆ ೪

ಸಂಸಾರ ನಂಬಲು ಕೆಟ್ಟುಹೋಗುವೆ ಎಚ್ಚರಿಕೆಚ್ಚರಿಕೆ
ಹಂಸ ಚಿದಾನಂದ ಗುರುಹೊಂದೆ ಕಡೆಹಾಯುವೆ ಎಚ್ಚರಿಕೆಚ್ಚರಿಕೆ ।

## ೨೩೫

ಏತರಿಂದ ಬ್ರಾಹ್ಮಣಿಕೆ ಪರಮಾತ್ಮನೆ
ತಾನೆಂದು ತಿಳಿಯದ ನರನಲಿ ಪ

ಜನಿವಾರ ನೋಡಿ ಬ್ರಾಹ್ಮಣ ನೆಂದರೆ ಸು–
ಮ್ಮನೆ ಮರಕೆ ಬಳ್ಳಿ ಸುತ್ತಿಲ್ಲವೆ
ಹಣೆಯ ಬಟ್ಟದ ನೋಡಿ ಬ್ರಾಹ್ಮಣ ನೆಂದರೆ
ಹಾದಿ ಕಲ್ಲಿಗೆ ಸುಣ್ಣ ಬರೆದಿಲ್ಲವೆ ೧

ಜುಟ್ಟು ನೋಡಿ ಇವ ಬ್ರಾಹ್ಮಣ ನೆಂದರೆ
ಜುಟ್ಟಿನ ಗುಬ್ಬಿಯು ತಾನಿಲ್ಲವೆ
ಉಟ್ಟ ಧೋತ್ರವ ನೋಡಿ ಬ್ರಾಹ್ಮಣ ನೆಂದರೆ
ಉಟ್ಟುದಿಲ್ಲವೆ ಮನೆಯ ನಡುಗಂಬ ೨

ಬ್ರಾಹ್ಮಣನಾದರೆ ಬ್ರಹ್ಮ ಸರ್ವವು ಆಗಿ
ಬ್ರಹ್ಮವಖಂಡದಿ ಭೇದವಿಲ್ಲದೆ
ಬ್ರಹ್ಮ ಚಿದಾನಂದ ಗುರುನಾಥನಾಗಿಯೆ
ಬ್ರಹ್ಮವ ಕಂಡವನೀಗ ಬ್ರಾಹ್ಮಣ ೩

## ೨೩೬

ಎನ್ನ ಮಾತನು ಕೇಳೋ ತಂದೆ ಎರವಾಗದಿರು ನೀನೆಂದೆ
ನಿನ್ನ ಕುಲವನುದ್ಧರಿಸೆಂದೆ ನೀನು ಸುಪುತ್ರನಾಗೆಂದೆ ಪ

ಸುಳ್ಳನು ಬಿಡುಎಂದೆ ಶರಗೊಡ್ಡಿ ಕೊಂಬೆನು ಎಂದೆ
ಕಳ್ಳತನವು ಬೇಡವೆಂದು ಕಾಲಿಗೆ ಬೀಳುವೆ ತಂದೆ ೧

ನಾಲಿಗೆ ಸಂಬಾಳಿಸೆಂದೆ ನಾರಿಯ ನೆಚ್ಚದಿರೆಂದೆ
ಜಾಲವನೆ ತಳೆ ಎಂದೆ ಜೋಕೆಯ ಸಾಧಿಸು ಎಂದೆ ೨

ವಂಚನೆ ಬೇಡವು ಎಂದೆ ಭಾಷೆಯ ತಪ್ಪದಿರೆಂದೆ
ಕಿಂಚನು ಆಗದಿರೆಂದೆ ಕುಮಂತ್ರ ನೆನಿಸದಿರೆಂದೆ ೩

ಸಂಸಾರ ನಂಬದಿರೆಂದೆ ಸ್ವಪ್ನದ ತೋರಿಕೆ ಎಂದೆ
ಧ್ವಂಸವು ಎಲ್ಲವು ಎಂದೆ ಯಾವುದು ಸತ್ಯವಲ್ಲೆಂದೆ ೪

ಕನಕದ ಮಾತಲ್ಲವೆಂದೆ ಕಾಲಗೆ ತುತ್ತಾಗದಿರೆಂದೆ
ಚಿದಾನಂದನ ಹೊಂದು ಎಂದೆ ಚಿತ್ತಾರ ಮಶಿನುಂಗಿತೆಂದೆ ೫

## ೨೩೭

ಎನ್ನ ಹಣೆಯ ಬರಹಕೆ ಎಂಥಾ ಗಂಡ ದೊರೆತನೇ
ಎನ್ನ ಮನವೆಂಬ ಗಂಡನ ಪರಿಯ ಪೇಳುವೆನೆ ಪ

ಅಡಕಿಲಿಗಳನೆಲ್ಲವ ಹುಡುಕುವನೇ
ಅಡುಗೆಯ ಮಡಕೆಯನೆಲ್ಲ ಒಡೆದನೇ
ಗುಡುಗುಟ್ಟುತ ಯಾವಾಗಲೂ ಇಹನೇ
ಗುಡ್ಡವನೇರುವನೇ ೧

ಮುನಿಸಿಕೊಂಡು ಮೇಲಟ್ಟದಿ ಕೂರುವನೇ
ಘನ ಹುಟ್ಟನೆ ಮುಂದಿಹನೇ
ಮನೆಯಲೆಲ್ಲರ ಬಡಿವನೇ
ಮತವನು ಕೆಡಿಸಿದನೆ ೨

ದುಡಿವ ಕೋಣನನು ಕೊಂದನೇ
ಕಡಿದುಬಿಟ್ಟನೆ ಕಾಯುವ ನಾಯನು
ಪುಡಿ ಮಾಡಿದ ಕಟ್ಟುವ ಹಗ್ಗವನೇ
ಪಂಕ್ತಿಯ ಸೇರದಿಹನೆ ೩

ಒತ್ತೆಯ ಒಡವೆಯನೆ ತಿಂದನೇ
ಬತ್ತಿಯ ಹಿರಿದಾಗೆ ಚಾಚುವನೇ
ಕಿತ್ತು ಒಗದನೇ ದೇವರನೇ
ಕಡಿದನೇ ಮರವನ್ನೇ ೪

ತ್ಯಜಿಸಿದ ನೆಚ್ಚಿದ ಮಡದಿಯನೇ
ತ್ಯಜಿಸಿದ ಮೋಹದ ಮನೆಯನ್ನೇ
ಭಜಿಸಿದ ಚಿದಾನಂದ ಗುರುವನ್ನೇ
ನಿಜದಲಿ ಬೆರೆತನು ಅವರನ್ನೇ ೫

## ೨೩೮

ಎರಡು ದಿನ ಎರಡು ದಿನ ಸಂಸಾರ ಎರಡು ದಿನ
ಎರಡು ದಿನವೆನ್ನದೇ ಕಡುತಲಿಹೆ ಮನುಜ ಪ

ಪೋರತನದಿ ಕುಣಿಯುವುದು ಎರಡು ದಿನ
ನಾರಿ ಹಿಂದೆ ತಿರುಗುವುದು ತಾನು ಎರಡು ದಿನ
ಸೇರಿ ಮನೆಯಗ್ಗಳಿಕೆ ಮೂಡುವುದು ತಾನು ಎರಡು ದಿನ
ಜಾರಿ ಸತ್ವವು ನಡುಗುವುದು ತಲೆಯು ಎರಡು ದಿನ ೧

ಸಿರಿಯು ಬಂದು ಹಿಂದಕೆ ಸೆಲೆಯುವುದು ತಾನು ಎರಡುದಿನ
ದೊರೆತನವು ದೌಲತ್ತು ತಾನದು ಎರಡು ದಿನ
ಹಿರಿಯ ಆಕೆಯು ಮನೆಯು ಸೇರಿ ಬಳಲುವುದು ಎರಡು ದಿನ
ತೆರಳುವುದು ದೊಡ್ಡ ಯಾತ್ರೆಗೆ ತಾನು ಎರಡು ದಿನ ೨

ಇಂತು ಎನಿತು ವ್ಯರ್ಥವಾಗಿ ಹೋದವೀಗ ದಿನಗಳು
ಇಂತು ಎನಿತು ಜನ್ಮದಲಿ ತಿರುಗುತಿರುವೆ ಯುಗಗಳು
ಚಿಂತೆಯಿಕ ಚಿದಾನಂದ ಬಗಳೆ ಹೊಂದು ನೀನು
ಅರಿತು ನಿನ್ನ ಖೂನ ತಿಳಿದು ಬಹುದು ಬ್ರಹ್ಮಜ್ಞಾನ ೩

## ೨೩೯

ಎಲ್ಲಿ ಗತಿಯು ನಾರಿಯ ಕೂಡಿದವಗೆ
ಎಲ್ಲಿ ಗತಿಯು ತಿಳಿಯೋ
ಬಲ್ಲವನಾದರೆ ಸತಿಯ ಬಿಟ್ಟು ಸದ್ಗುರು
ಹೊಂದಲು ಮನೆಯು ಪ

ಮೊದಲೇ ಕೋತಿಯು ಮದ್ಯವನು
ಕುಡಿಸೆ ಮನೆಗೆ ಬಹುದೇ

ಅದರ ತೆರೆದಿ ಪಾಮರನಿಗೆ ಸ್ತ್ರೀಯ
ಕೂಡಿಸಬಹುದೇ ೧

ಕಣ್ಣೆಯಿಲ್ಲದವನೀಗ
ಕುಣಿಯ ಬೀಳುವನಲ್ಲ
ಕಣ್ಣು ಎರಡು ಇದ್ದವನು
ಬೀಳೆ ಪಾಪವಲ್ಲವೆ ೨

ಮುಕ್ತಿ ಬೇಕಾದರೆ ತನಗೆ ಸು–
ದತಿಯ ಬಿಡಬೇಕು
ಶಕ್ತಿ ಚಿದಾನಂದ ಶುದ್ಧ ಬ್ರಹ್ಮವ
ನೀತ ಕೂಡಲಿಬೇಕು ೩

## ೨೪೦

ಎರಿ ಮುಂಡೆ ಇವನೆರಿ ಮುಂಡೆ ಏನು
ಅರಿಯದೆ ಒದರುವ ಎರಿಮುಂಡೆ ಪ

ತನ್ನ ನಿಜವ ತಾನು ಅರಿಯದೆ ತತ್ವದ
ಕುನ್ನಿಯಂತೆ ಒದರುವ ಎರಿಮುಂಡೆ
ಭಿನ್ನ ಬುದ್ಧಿಯಲಿದ್ದು ನಾ ಬ್ರಹ್ಮವೆಂಬುದನು
ಚೆನ್ನಾಗಿ ಅರಿಯದ ಎರಿಮುಂಡೆ ೧

ಯೋಗವ ತಿಳಿಯದೆ ಯೋಗವ ಹಳಿವನು
ಈಗ ಹೇಳಿವನೀಗ ಎರಿಮುಂಡೆ
ಆನಿಹೆ ಬ್ರಹ್ಮವು ನಾನೆಂದು ಎತ್ತೆತ್ತೆ
ನುಡಿವನು ಎರಿಮುಂಡೆ ೨

ಕೋಟಿ ಸೂರ್ಯರ ತೇಜ ಪಾಟಿಸಿ ಕಾಣದೆ
ಬೂಟಕ ನುಡಿವವ ಎರಿಮುಂಡೆ
ದಾಟಿ ಸಹಸ್ರಾರ ಬ್ರಹ್ಮರಂಧ್ರದ ನಾಳ
ಕೇಳದ ನರನಾಗ ಎರಿಮುಂಡೆ ೩

ಮಾತರಿಯದೆ ಜ್ಞಾನ ನುಡಿಯಿದ್ದುದ
ಕಳೆದು ಮಣ್ಣು ಹೋಯ್ಯೆಂಬುವ ಎರಿಮುಂಡೆ
ಮಾತಿಲಿ ಬ್ರಹ್ಮವು ಆಗಬೇಕಾದರೆ
ಮಹಾಸಾಧನವೇಕೆ ಎರಿಮುಂಡೆ ೪

ಒಂದು ಹೋಗಲಿಲ್ಲ ಒಂದೇ ನಾನೆಂಬಿನು
ಇಂದು ಕೇಳುವನೀಗ ಎರಿಮುಂಡೆ
ಸುಂದರ ಚಿದಾನಂದ ಸ್ವರೂಪ ತಿಳಿ
ಯದೆ ಸುಲಭ ಎಂದೆಂಬುವ ಎರಿಮುಂಡೆ ೫

## ೨೪೧

ಎಲೆ ಕೊರಡೆ ಕೇಳೆಲೆ ಕೊರಡೆ
ಎಳ್ಳಷ್ಟು ತೊಡಕಿಲ್ಲೆಲೆ ಕೊರಡೆ ಪ

ರೋಗಿಗೆ ಔಷಧಿ ಕಹಿ ಕೊರಡೆ
ರೋಗ ನಿವಾರಕ ತಿಳಿ ಕೊರಡೆ
ಎನ್ನ ಮಾತುಗಳು ಕಹಿ ಕೊರಡೆ
ಮನ ಅಮೃತವು ತಿಳಿ ಕೊರಡೆ ೧

ಅಂಗವು ಎಂತಾಯಿತು ಎಲೆ ಕೊರಡೆ
ಅಧಿಪತಿಗಳನರಿನೀ ಎಲೆ ಕೊರಡೆ
ಅಂಗವ ಧರಿಸಿಯೆ ಬೆಳಗುವವನ ತಿಳಿ
ಅಳಬೇಡಲೆ ಮಾನವ ಕೊರಡೆ ೨

ಎಲ್ಲಿಂದ ಬಂದೆಯೋ ಎಲೆ ಕೊರಡೆ
ಎಲ್ಲಿಗೆ ಹೋಗುವೆ ಎಲೆ ಕೊರಡೆ
ಎಲ್ಲಿಯ ಕುಲ ನಿನ್ನ ನಾಮವದಾವುದು
ಎಗರಾಡಲು ಬೇಡಲೆ ಕೊರಡೆ ೩

ಸತಿ ಎಷ್ಟಾದರು ಎಲೆ ಕೊರಡೆ
ಸುತರೆಷ್ಟಾದರು ಎಲೆ ಕೊರಡೆ
ಅತಿ ದೇಹವು ಮನೆ ಎಷ್ಟಾದವು ತಿಳಿ
ಹಿತರೆಲ್ಲಿಹರೋ ಎಲೆ ಕೊರಡೆ ೪

ಕರ್ಮೋಪಾಧಿಲಿ ಎಲೆ ಕೊರಡೆ
ಕರ್ಮವು ಸತ್ತಿತು ಎಲೆ ಕೊರಡೆ
ಓರ್ವ ಚಿದಾನಂದ ನೀನೆಂದು ಕಾಣಲು
ಜಾರುವುದದು ಭವ ತಿಳಿ ಕೊರಡೆ ೫

## ೨೪೨

ಎಲ್ಲಿ ಮತಿಯು ಎಲ್ಲಿ ಗತಿಯು ಎಲ್ಲವೀಗ ಹುಸಿಯು ಕಂಡ್ಯ
ಎಲ್ಲವಿಹುದು ಬಹುದು ಬಹಳ ಸಂಸ್ಕಾರಿಯೊಬ್ಬಗೆ ಪ

ಭಕ್ತಿಯನ್ನು ಮಾಡುವರು ಹಲವು ಮಂದಿ ನೋಡಲಿಕೆ
ಭಕ್ತಿಯಿಹುದು ತಾನೀಗ ಅದರೊಳೊಬ್ಬಗೆ
ಮುಕ್ತಿಮಾತ ಕೇಳುವರು ಮುಗಿದ ಕೈಗಳಿಂದ
ಮುಕ್ತಿ ಮೇಲೆ ಚಿತ್ತವಿಹುದು ಅದರೊಳೊಬ್ಬಗೆ ೧

ಕಣ್ಣುಗಳ ಮುಚ್ಚಿಕೊಂಡು ನೋಡವರು ಆತ್ಮನ
ಕಣ್ಣು ಕುಳಿತು ಕಾಣಬಹುದದರೊಳೊಬ್ಬಗೆ
ಹುಣ್ಣಿಮೆಯ ಬೆಳಕಿನಂತೆ ಹರಹಿಯಿಹುದು ಎಂಬರು
ತಣ್ಣನೆಯ ಕಳೆಯು ತೋರುವುದದರೊಳೊಬ್ಬಗೆ ೨

ಜ್ಞಾನಗಳ ಹೇಳುವರು ಜ್ಞಾನಿಗಳೊ ಎಂಬಂತೆ
ಜ್ಞಾನ ನಿಶ್ಚಯಹುದು ತಾನು ಅದರೊಳೊಬ್ಬಗೆ
ಮಾನನಿಧಿ ಚಿದಾನಂದ ತಾನೀಗ ಎನುತಲಿಹರು
ತಾನೆ ತಾನಾದ ನಿಜವು ಅದರೊಳೊಬ್ಬಗೆ ೩

## ೨೪೩

ಏಕೆ ಕೆಡುವಿರಿ ಸಂಸಾರವು ಸ್ವಪ್ನವೆಂದು ತಿಳಿಯಬಾರದೇ
ಏಕ ಬ್ರಹ್ಮಾಸ್ತ್ರ ದೇವತೆಯ ಹೊಂದಿ ಜನ್ಮ ಕಳೆಯಬಾರದೆ ಪ

ಬಿಸಿಲೊಳು ಬಳಲುವರ ಕಂಡು ನೆರಳಿಗೆ ಕರೆಯಬಾರದೆ
ತೃಷೆಯಿಂದ ನಾಲಗೆ ಒಣಗುತಲಿರೆ ನೀರನೆರೆಯಬಾರದೆ
ಹಸಿದು ಬಂದವರಿಗೆ ಇದ್ದದ್ದರೊಳಗೆ ಅನ್ನವ ನೀಡಬಾರದೆ
ಹುಸಿನುಡಿಯ ಬಿಟ್ಟು ಸತ್ಯವಾಕ್ಯವನೀಗ ಆಡಬಾರದೆ ೧

ಸತಿ ಸುತರು ಸ್ವಾರ್ಥ ಮರೆತು ಮುಕ್ತ ಮನದಿ ಧರ್ಮ ಮಾಡಬಾರದೆ
ಹಿತದವರು ಒಬ್ಬರಾದರೂ ಹಿಂದೆ ಬರುವರೇ ನೀನೇ ನೋಡಬಾರದೆ
ಮತ ಅಭಿಮಾನ ಮರೆತು ಆತ್ಮಾಭಿಮಾನವ ಮರೆಯಬಾರದೆ ೨।

ನಂಟರ ಮೇಲೆ ಚಿಂತೆಯಿದ್ದಂತೆ ಗುರುವಿನ ಮೇಲೆ ಇರಬಾರದೆ
ಕುಂಠಿಣಿ ಮನೆಗೆ ಹೋಗುವಂತೆ ಮಠಕೆ ಹೋಗಬಾರದೆ
ಒಂಟೆಯಂದದ ಮೋರೆಯನೀಗ ಹಿರಿಯರ ಕಂಡು ತಗ್ಗಿಸಬಾರದೆ ೩

ಸಾಧುಗಳು ಕಾಣೆ ಭಕ್ತಿಯಲೆದ್ದು ಚರಣಕೆ ಎರಗಬಾರದೇ
ವ್ಯರ್ಥವಾದದ ಮಾತನು ಬಿಟ್ಟು ಸುಮ್ಮನೆ ತಾನಿರಬಾರದೆ
ಕ್ರೋಧದ ಬೇರನು ಮೊಳಕೆಯಸಹಿತ ಕೀಳಬಾರದೆ
ಮಾರ್ಗದಿ ಕಲ್ಲುಮುಳ್ಳುಗಳಿರೆ ಕಡೆಗೆ ತೆಗೆದೆಸೆಯಬಾರದೆ ೪

ನಾನಾರು ಎಂದು ವೇದಾಂತ ವಾಕ್ಯದಲಿ ನಿನ್ನ ಅರಿಯಬಾರದೆ
ವಾದವ ಬಿಟ್ಟು ಚಿದಾನಂದನ ಚರಣದಿ ಹೊರಳಬಾರದೆ
ಮೇದಿನಿ ಪೂರ್ಣ ಸರ್ವಬ್ರಹ್ಮವೆಂದು ತಾನು ಅರಿಯಬಾರದೆ
ಭೇದಾ ಭೇದಕೆ ಹೊರಗಾದ ಬಗಳೆಯ ಕೂಡಬಾರದೆ ೫

## ೨೪೪

ಏನು ತಿಳಿವುದೋ ಮೂರ್ಖರಿಗೇನು ತಿಳುವುದೋ
ತಾನೇ ತಾನಾದ ತತ್ವವ ಹೇಳಲು ತನ್ನ ತಲೆಯನು ತೂಗುತಿರುವಗೆ ಪ

ಮಂಕರಿ ಹೊರುವ ಕೋಣನ ಮುಂದೇ ಮಹಾವೀಣೆಯನು ಹಿಡಿದು
ಕಿಂಕಿಣಿ ಕಿಣಿ ಕಿಣಿ ಎಂದು ಬಾರಿಸೆ ತಿಳಿಯುವುದೇ
ಓಂಕಾರದ ಮಹಿಮೆಯನು ಒಲಿದು ಹಿರಿಯರು ಹೇಳುತಿರಲು
ತಂಕದಿ ಕೇಳುತ ಹೋ ಹೋ ಎಂದು ತಲೆಯನು ತೂಗುವರಿಗೆ ೧

ಮೂಟೆಯ ಹೊರುವ ಕತ್ತೆಯ ಮೂಗಿಗೆ ಮಘ ಮಘಿಪ ಕಸ್ತೂರಿಯ ಹಚ್ಚಲು
ಗಾಳಿಯ ಪರಿಮಳ ಸುಗಂಧಗಳ ಅದು ತಿಳಿಯುವದೇ
ಲಾಲಿಪ ಬ್ರಹ್ಮಾನಂದದ ಲಕ್ಷಣ ಲಕ್ಷ್ಯವ ಹಿರಿಯರು ಹೇಳುತಿರಲು ಕೇಳಿದಾಗಲೇ
ಹೋ ಹೋ ಎನ್ನುತ ತಲೆಯ ತೂಗುವವರಿಗೆ ೨

ಸತ್ಯಾನಂದರೆ ಅವರೇ ಗುರುಗಳು ಸತ್ಯ ಸಂಧರು ಅವರೇ ಭಕ್ತರು
ಸತ್ಯ ಜ್ಞಾನವ ತಿಳಿಯಲಿಕೆ ಅವರೇ ಯೋಗ್ಯರು
ಸತ್ಯವಸ್ತು ಚಿದಾನಂದ ಸಾಕ್ಷಾತ್ ರೂಪವೇ ಹೇಳುತಿರಲು
ಚಿತ್ತದಿ ಕೇಳು ಹೋ ಹೋ ಎಂದು ತಲೆಯ ತೂಗುವರಿಗೆ ೩

## ೨೪೫

ಏನು ನಡತೆಯೋ ಏಕೆ ಕೆಡುವೆಯೋ
ಮನುಜ ಜನ್ಮವನ್ನು ವ್ಯರ್ಥಮಾಡಿಬಿಟ್ಟೆ ಮೂರ್ಖ ಪ

ಹಂಡತಿ ಕದಪನು ನೀನು ಸವರಿ ನೋಡುವಂತೆ ಮೊನ್ನೆ
ಕೊಂಡ ಸಾಲಗ್ರಾಮವನ್ನು ಮುಟ್ಟಬಾರದೇ ತಡಹಬಾರದೇ
ರಂಡೆಯರ ವಿಷಯವಾಗಿ ಕಾಲಿಗೆರಗಿದಂತೆ ತತ್ತ್ವ
ಪಂಡಿತರ ಚರಣಕ್ಕೆ ಬೀಳಬಾರದೆ ಹೊರಳಬಾರದೆ
ದುಂಡು ಮುತ್ತಿನ ಸರವ ಸತಿಗೆ ಕೊಂಡು ಹಾಕಿದಂತೆ
ಪಿಂಡಾಂಡ ವಿವರಿಪರಿಗೆ ವಂದನೆ ಮಾಡಬಾರದೇ
ಭಂಡ ಮಾತನು ನಾರಿ ಕಿವಿಯ ಖಂಡಿ ಯೊಳು ಪೇಳ್ದ ತೆರದಿ
ಸುವಚನ ಸಾಧುಗಳೊಳು ಉಸುರಬಾರದೇ ಅರುಹಬಾರದೆ ೧

ನನ್ನ ಮಕ್ಕಳೆಂದು ನೀನು ಬನ್ನಬಟ್ಟ ತೆರದಿ ಇತರ
ಸಣ್ಣವರ ಮೇಲೆ ನೀನು ಕರಗಬಾರದೆ ತೋರಬಾರದೆ
ಹೊನ್ನು ಹಣವು ಬಿದ್ದುಯಿರೆ ಹೆಂಟೆಯೆನುತಲಾಗ ಎರಡು
ಕಣ್ಣು ತೆರೆದು ದೃಷ್ಟಿಸಿ ನೋಡಬಾರದೆ ಕಾಣಬಾರದೆ
ಮನ್ನಣೆ ಎಂಬುದನ್ನು ಸೂಕರನ ವಿಷ್ಠೆ ಸಮನು
ಎನ್ನುತಲಿ ಚಿತ್ತದಲ್ಲಿ ಎಣಿಸಬಾರದೆ ಹತ್ತಬಾರದೆ
ಉನ್ನತದ ಜೀವರಾಶಿ ಎಲ್ಲ ಒಬ್ಬ ಶಿವನು ಎಂದು
ಭಿನ್ನ ಕಳೆದು ಆತ್ಮ ಸುಖದಿ ಮುಳುಗಬಾರದೆ ಬೆಳಗಬಾರದೆ ೨

ನಾನಾ ಜನ್ಮ ಜನ್ಮ ತಿರುಗಿ ನರನ ಜನುಮ ಬಂದು
ನಾನಾರೋ ಎಂದು ನಿನ್ನ ತಿಳಿಯಬಾರದೆ ಅರಿಯಬಾರದೆ
ಜ್ಞಾನಿಗಳ ಮುಖಗಳಿಂದ ನಿನ್ನ ಒಳಗೆ ನಿನ್ನ ಕಂಡು
ನಾನೆ ಬ್ರಹ್ಮವೆಂದು ನಿಜವ ಕಾಣಬಾರದೆ ಕೂಡಬಾರದೆ
ನಾನಾಧ್ವನಿಯು ನಾನಾಕಳೆಯು ದೇಹದೊಳು ತೋರುತಿರಲು
ಆನೆಯಂತೆ ನೀನು ಈಗ ತೊನೆಯಬಾರದೆ ತೂಗಬಾರದೆ

ತಾನಾದ ಚಿದಾನಂದ ಗುರುವು ತಾನೆ ತಾನೆಯಾಗಿ
ನಾನು ನೀನು ಎಂಬುದನ್ನು ತಿಳಿಯಬಾರದೆ ಕಳೆಯಬಾರದೆ ೩

## ೨೪೬

ಏನು ವರ್ಣಿಸಿದ ಕವೀಶ್ವರ ನಾರಿಯ
ಜ್ಞಾನಕೆ ಹಾನಿಯ ಮುಕ್ತಿಗೆ ಮೃತ್ಯುವ
ಕಾನನ ರೂಪು ನರಕ ಕುಂಡವೆಂಬಳ
ತಾನು ಕೆಡಲು ಸುಳ್ಳು ಸ್ತುತಿ ಮಾಡಿದ ಪ

ಗುದ್ದಲಿ ಮೂಗನು ಸಂಪಿಗೆ ನನೆ ಎಂದ
ಬುದ್ದಲಿ ಮುಖವನು ಪದ್ಮಮುಖವೆಂದ
ಇದ್ದಲಿ ತನುವನು ಇಂದ್ರನೀಲವೆಂದ
ಹದ್ದಿನ ಕೈಯನು ಹರಿ ಸುಂಡಲೆಂದ ೧

ಬೆಳ್ಳುಳ್ಳಿ ಹಲ್ಲನು ದಾಳಿಂಬ ಬಿತ್ತವೆಂದ
ಹುಲ್ಲೆಗಣ್ಣೆಂದನು ಸುಳಿಗಣ್ಣ
ಮಲ್ಲಿಗೆ ಮೊಳೆಯೆಂದನು ಮುರುಕಿ ಮಾತುಗಳನ್ನು
ಜೊಲ್ಲು ಸುರಿವುದಕೆ ಅಮೃತವೆಂದನು ೨

ಕುಂಭ ಕುಚವೆಂದನು ಮಾಂಸದ ಮುದ್ದೆಯ
ಬಿಂಬಾಧರವೆಂದನು ಹಂದಿಯ ತುಟಿಯ
ಕಂಬ ಬಾಳೆ ಎಂದನು ಕೊರಡು ತೊಡೆಯನು
ಬಿಂಬ ಕನ್ನಡಿ ಎಂದನು ಕುಣಿಗಲ್ಲವ ೩

ಕಲಹಂಸ ನಡಿಗೆಯೆಂದ ಕೋಣನ ನಡಿಗೆಯ
ಅಳಿಕುಂತಳವೆಂದ ಮುರುಟು ಕೂದಲನು
ಬಲು ಸಿಂಹನಡುವೆಂದ ಮೊಸಳೆ ನಡುವನ್ನು
ಹೊಳೆವ ಬೊಂಬೆಯೆಂದ ಕೊಳಕು ಮೈಯನ್ನು ೪

ಹೊಲಸು ಮೂಳಿಗೆ ನಾನಾ ಹೋಲಿಕೆಗಳನಿಟ್ಟು
ತಿಳಿದಂತೆ ಕವಿತಾನು ವರ್ಣಿಸಿದ ಕೊಂಡಾಡಿ
ಸುಲಭ ಚಿದಾನಂದ ಸುಪಥವ ಕಾಣದಲೆ
ಕಳಕೊಂಡ ಕವಿತಾನು ಬಹು ಪುಣ್ಯ ಪಥವ ೫

## ೨೪೭

ಒರೆವೆ ಹಿತವನೆ ಕೇಳು ಎಲೆ ಮರುಳ ಮೂಢಾ
ಒರೆವೆ ಹಿತವನೆ ಕೇಳೊ
ಇರುವೆನು ಎಲ್ಲಿ ಎಂದೆನ್ನುವೆ ಏಕೆ
ತೆರಳುವೆನೆಲ್ಲಿಗೆ ಎನ್ನು ಶಿವನಹೆ ಪ

ಸತಿಸುತರ ನಂಬಬೇಡ ಯಮಧರ್ಮನ
ಮನೆಯ ಸೇವಕರು ನೋಡಾ ಮಕ್ಕಳ ಒಡಗೂಡಾ
ಮಿತಿಯಿಲ್ಲದೆ ಮೋಹವು ಹೆಚ್ಚಿ
ಗತಿಗೆಡಿಸೆ ಒಪ್ಪಿಸುವರು ನಿನ್ನ ೧

ಎಲ್ಲಿ ಎಮ್ಮ ಮನೆಯು ಇಂದು ನಿನಗೆ ವಸತಿ ಸ್ಥಳವು
ಎಲ್ಲಿ ದೇವರು ಬಂದು ತುಳಿದಾಡುವರಿಂದು
ಬಲ್ಲವನಾದರೆ ಸತ್ಯವಿದೆನ್ನುತ
ಎಲ್ಲರ ಆಸೆಯ ಮನದಲಿ ತ್ಯಜಿಸು ೨

ಸುಂಟರಗಾಳಿಯು ರವದಿ ತಿರುಗಿದವೊಲು
ಉಂಟು ಅನಂತಕಾಲದಿ ಜನನ ಮರಣಗಳು
ಅಂಟಿಯೆ ಕಾಲವ ಮರುಳದು ಬೇಡ
ಅಂಟಿಯೆ ಹೊಂದು ಚಿದಾನಂದ ಬ್ರಹ್ಮವ ೩

## ೨೪೮

ಓದು ಬೇಡ ನಿನಗೆ ಶಾಸ್ತ್ರ ಬೇಡ ಸುಶೀಲ
ಬುದ್ಧಿಲಿ ದೃಷ್ಟಿ ನಿಲಿಸಿದರೆ ಸಾಕೋ ಪ

ವೇದ ಎನ್ನಲಿ ಬೇಡ ಯಮುನೆ
ಧುಮುಕಲಿ ಬೇಡ ಕಪ್ಪೆಯಂತೆ ನೀರಲಿ ಮುಳಗ
ಬೇಡ ಬಾಯಿ ಬಿಗಿಯಲಿ ಬೇಡ ಮೂಗ ಹಿಡಿಯಲಿ
ಬೇಡ ಆ ಜಾಗದಲಿ ದೃಷ್ಟಿ ನಿಲಿಸಿದರೆ ಸಾಕೋ ೧

ಆಯಾಸ ಬಡಬೇಡ ಅಡವಿ ಸೇರಲಿ ಬೇಡ
ಕಾವಿ ಕಮಂಡಲ ಧರಿಸಬೇಡ
ಜಪವ ಎಣಿಸಲಿ ಬೇಡ ಉಪವಾಸವಿರಬೇಡ
ಕಾಳಷ್ಟು ದೃಷ್ಟಿ ನಿಲಿಸಿದರೆ ಸಾಕೊ ೨

ಎರಡೂ ಕಣ್ಣಿನಿಂದ ನೋಡಿ ನಿಂತಿರಲಾಗಿ
ಶರೀರ ಬಯಲಾದರೂ ಅಳಿವು ತಪ್ಪುದು
ಅರಿವಿಗೇ ಅರಿವಾಗಿ ಅರಿವಿಗೆ ಕುರುಹಾಗಿ
ಗುರು ಚಿದಾನಂದನ ಗುರುತು ಇಲ್ಲೆನ್ನಬೇಡ ೩

## ೨೪೯

ಕತ್ತಲೆಯೊಳಗಣ ಬಾವಿ ಕಾಲ್ದಪ್ಪಿ ಬೀಳಬೇಡ
ಮೃತ್ಯುವಲ್ಲದೆ ಅದು ನಿತ್ಯವಲ್ಲ ಪ

ರಾವಣನೆಂಬುವ ಬಿದ್ದು ರಂಗಕ್ಕೆ ಈಡಾದ
ಭಾವಿಸೆ ಜಲಂಧರನು ಬದುಕಲಿಲ್ಲ
ಕೇವಲ ಕೀಚಕನೆಂಬುವವ ಕೇಡ ಹೇಳುವುದೇನು
ದೇವ ಇಂದ್ರನೆಂಬವನ ದೇಹ ಕೆಟ್ಟಿತು ೧

ನಹುಷನೆಂಬುವ ಬಿದ್ದು ನಾಚಿಕೆಗೆ ಈಡಾದ
ಬಹು ಹೇಳುವುದೇನು ವಾಲಿಯುಬದುಕನು
ಮಹಾಮಾಯಾವಿ ಎಂಬುವನ ಬಣ್ಣ ಕಂಡವರಿಲ್ಲ
ಊಹಿಸೆ ಭಸ್ಮಾಸುರನು ಉರಿದುಹೋದ ೨

ಕತ್ತಲೆ ಬಾವಿಯಲಿ ಬಿದ್ದು ಕೆಟ್ಟವರು ಹಲವರುಂಟು
ಕತ್ತಿಯ ಧಾರೆಗೆ ಇಕ್ಕಿದಾ ಮಧುವದು
ಚಿತ್ತಶುದ್ಧರು ಚಿದಾನಂದ ಭಕ್ತರು ಕಂಡು
ಕತ್ತಲೆಯ ಬಾವಿಯಲಿ ಬೀಳಲಿಲ್ಲ ೩

## ೨೫೦

ಕತ್ತೆಯು ನೀನಲ್ಲ ಕರುಣಾಕರನಹೆ ಕತ್ತೆಯಾಗಬೇಡ ಕತ್ತೆ
ಸತ್ಯ ಚಿದಾನಂದ ನೀನರೆ ಮರೆತರೆ ಕತ್ತೆನೀನಾಗುವೆ ಕತ್ತೆ ಪ

ಬೊಂಬೆಗೆ ಪ್ರಾಣವನಿಟ್ಟು ದೇವರು ಎಂಬೆ ದೇವರು ಅವು ಕತ್ತೆ
ಬೊಂಬೆಗೆ ಪ್ರಾಣ ಪ್ರತಿಷ್ಠೆಯ ಮಾಡಲು ನೀನಾರು ಹೇಳಲೋ ಕತ್ತೆ
ಬೊಂಬೆ ಸತ್ತವಲ್ಲೊ ಪ್ರಾಣ ತೆಗೆದುಕೊಳ್ಳೆ ನೀರ ಮುಳುಗು ನೀನು ಕತ್ತೆ
ಬೊಂಬೆ ಚೇತನ ಸಾಕ್ಷಾತ್ಕಾರವೆ ಇರೆ ದೇವ ನೀನೆಂತಲ್ಲ ಕತ್ತೆ ೧

ಹಿಂದಣ ಪುರಾಣ ಹೇಳುವೆ ನೀನೀಗ ನಿನ್ನ ಪುರಾಣವೆಲ್ಲೊ ಕತ್ತೆ
ಬಂದವನಾರೋ ಹೋಗುವನಾರೋ ಎಂಬುದು ತಿಳಿಯಲಿಲ್ಲ ಕತ್ತೆ
ಬಂದೆಯೋ ಅವಿದ್ಯೆ ದೆಸೆಯಿಂದ ರೂಪಿಗೆ ಜೀವ ನೀನೆನಿಸಿ ಕತ್ತೆ
ಎಂದು ಎಂದಿಗೂ ನೀ ಬ್ರಹ್ಮವೆ ಸತ್ಯವು ಯೋಚನೆ ಬಿಡು ನೀ ಕತ್ತೆ ೨

ನಮಕ ಚಮಕ ಅಭಿಷೇಕ ಮಾಡುವಿ ಏನಂತ ಮಾಡುವಿ ಕತ್ತೆ
ಸಮನಿಸಲಿಲ್ಲ ವೇದಾಂತದರ್ಥವು ನಿನಗೆ ಸುಡು ನಿನ್ನ ತಿಳಿವಿಗೆ ಕತ್ತೆ
ಕಮಲಮುಖಿಯ ಸುತರನು ನೀನು ನಂಬುವೆ ಪ್ರಪಂಚ ಸತ್ಯವೇನೋ ಕತ್ತೆ
ಭ್ರಮಣಕ್ಕೆ ಸಿಲುಕಿ ನಾನಾ ಭಂಗಪಡುವೆ ಭಾವಿಸಿ ತಿಳಿನೀ ಕತ್ತೆ ೩

ಕನಸಿನನುಭವದಂತೆ ಪ್ರಾರಬ್ಧ ತೋರುವುದು ದೇಹದಾರಿಗಳಿಗೆ ಕತ್ತೆ
ಚಿನುಮಯಾತ್ಮಕನಲ್ಲಿ ಪ್ರಾರಬ್ಧ ತೋರಿಯೆ ತನಗೆ ತಾನಡಗುವುದು ಕತ್ತೆ
ನಿನಗದು ಏನಿಲ್ಲ ಮನಸಿನ ಭ್ರಾಂತಿಯೆನಲನುಭವಿಸುವೆ ಕತ್ತೆ ೪

ಹಿಂದಾದುದನು ಬಿಡು ಹೊಂದು ಸದ್ಗುರು ಪಾದ ತಿಳಿ ತತ್ತ್ವಮಸಿಯನ ಕತ್ತೆ
ಬಂಧಿಸಿ ಆಧಾರ ಚಕ್ರವನೇರು ಏರಿ ನಿಂತು ಭ್ರೂಮಧ್ಯದಿ ಕತ್ತೆ
ಮುಂದೆ ಹರಿಯ ನೋಡು ಸಹಸ್ರಾರದ ಪೀಠ ಛಂದದಿ ಅಡರ್ಮೇಲೆ ಕತ್ತೆ
ಸುಂದರ ಚಿದಾನಂದ ನಾಗಿಯ ಥಳಥಳ ಬೆಳಕಲ್ಲಿ ಬೆಳಕಾಗೊ ಕತ್ತೆ ೫

## ೨೫೧

ಕಥೆಕಾರ ದೇವಿಯೆಂದು ಕಥೆಯ ಹೇಳಿದ ತೆರದಲಿ
ಮಿತಿಯಿಲ್ಲದ ಮೃಷೆ ಸಂಸಾರವದು ಇರುತಿಹುದು ಆಪರಿಯಲ್ಲಿ ಪ

ಸತಿಯಂಬುವಳಾರು ತಾವಾರು
ಸುತರಿಂದ ಗತಿಯಾಗುವುದೆಲ್ಲಿ
ಮಿತಿಯಿಲ್ಲದ ಬಹುಬಂಧು ಬಳಗಗಳು
ಬಹರೆ ತನ್ನ ಹಿಂದಲ್ಲಿ ೧

ಹಗೇವಿನ ಬತ್ತವು ಬಣಬೆಯ ಸೊಪ್ಪೆಯು
ಬಗೆ ಬಗೆವಸ್ತುವು ತಾನೆಲ್ಲಿ
ಬಿಗುಮಿಗೆಯಾದ ದನಕರುವುಗಳು
ಬರಲಿಲ್ಲವು ತಾವಂದದಲ್ಲಿ ೨

ತಳ್ಳಿಗೆ ತಳ್ಳಿ ಸುಳ್ಳು ಸಂಸಾರವು
ತೆಗೆಲೀಯದು ಈ ಬಗೆಯೆಲ್ಲಿ
ಎಲ್ಲಕೆ ಮಂತ್ರವು ತಾ ಚಿದಾನಂದನು
ಎನಲಿಕೆ ಪಾಪವು ಇನ್ನೆಲ್ಲಿ ೩

## ೨೫೨

ಕಾಲ ತಪ್ಪದು ನಿನಗೆಂದಿಗು ಮರುಳೆ
ಒಳ್ಳಿತಾಗಿ ಕೇಳಿಕೋ ಹಿರಿಯರನು ಮರುಳೆ
ನಾಳೆ ನಾಡದೋ ಆವಾಗಲೋ ತನು ನಿತ್ಯವಲ್ಲ
ಕಾಲಕೆ ಸಿಕ್ಕಬೇಡ ಮರುಳೆ ಪ

ಆಳುವ ಮಠಪತಿ ಊರಲ್ಲಿ ತನ್ನನ್ನು
ಹೂಳ್ಯಾರು ಎನಬಾರದೆ ಮರುಳೆ
ಮೂಳ ಸಂಸಾರ ನೆಚ್ಚಲು ಕೆಡುವೆ
ಆಲೋಚನೆ ಮಾಡಿಕೋ ಮರುಳೆ ೧

ಮನವುಳ್ಳವರು ಇಹರೆ ಸಂಸಾರ
ವೇನೆಂಬೆ ನೀನು ಸಂಗವ ಮರೆವೆ ಮರುಳೆ
ಮಾನಿನಿ ಸುತರ ಮೋಹಕೆ ಬಿದ್ದು
ನಿನಗಾಗುವ ಮಾನಹಾನಿಯ ಕಾಣೆ ಮರುಳೆ ೨

ಸಂಸಾರಕಾಂಕ್ಷೆಯ ಮನದಿ ತ್ಯಾಗವ ಮಾಡು
ಸಂಸಾರವಿದು ಮಾರಿಯು ಮರುಳೆ
ಹಂಸ ಚಿದಾನಂದ ಸದ್ಗುರು ಹೊಂದಿಯೇ
ನೀ ಸದಾಸುಖಿಯಾಗು ಮರುಳೆ ೩

## ೨೫೩

ಕಿವಿ ಮಾತು ಹೇಳುವೆನು ಎನ್ನ ಮಾತ ಕೇಳಿರೋ
ಶಿವನು ನೀನಾಗುವಂಥ ಸಿದ್ಧಿಯನ್ನು ಹೇಳಿಕೊಡವೆ ಪ

ಅನಂತ ಯೋನಿಯೊಳಗೆ ಅನಂತ ಜನ್ಮತಿರುಗಿ
ಅನಂತ ಯುಗಯುಗಂಗಳಲಿ ಸತ್ತು ಹುಟ್ಟೆ

ಅನಂತನಾಟವೆಯೆಂದು ಅರಿವು ಇಲ್ಲದೆ ಹೋಗಿ
ಅನಂತ ದುಃಖಸಾಗರದಿ ಹಿರಿದು ಬಳಲುವಿರಿ ೧

ವಿಶ್ವತೈಜಸ ಪ್ರಾಜ್ಞ ಮೂವರೆಂದೆನಿಸಿ
ವಿಶ್ವದೊಳು ನಾನಾ ರೂಪಗಳ ತಾಳಿ
ವಿಶ್ವದೊಳ ಹೊರಗೆಲ್ಲ ಪೂರ್ಣ ತಾನೆಂದೆನಲು
ವಿಶ್ವಾತ್ಮಕನು ನೀವು ಮತ್ತಾರು ತಿಳಿಯಿರೋ ೨

ಮೂರವಸ್ಥೆಗಳಲ್ಲಿ ಮೂರು ಮೂರ್ತಿಗಳಾಗಿ
ತೋರುತಿಹ ನಾನಾ ಬಗೆ ಲೀಲೆಗಳನು
ಭೂರಿ ಸಂಸಾರಗಳ ದುಃಖ ಸುಖವೆಂದೆನಿಸಿ
ತೋರಿ ನೋಡಿಪನವನು ಮತ್ತಾರು ತಿಳಿಯಿರೋ ೩

ಸತಿ ಪುರುಷರಾಗಿಹನು ಸುತನು ತಾನಾಗಿಹನು
ಖತಿಯು ಶಾಂತಿಯು ಕಾಮವಾಗಿ ತಾನಿಹನು
ಅತಿ ಕುಲಗಳಾಗಿಹನು ಅತಿ ಜಂತುವಾಗಿಹನು
ಮಿತಿಯಿಲ್ಲದಾಗಿಹನು ನೀವಾರು ತಿಳಿಯಿರೋ ೪

ಈ ವಾಕ್ಯಗಳನೇ ನೀವಾರಮುಂದುಸುರದಲೆ
ಸಾವದಾನದಿ ತಿಳಿದು ನೋಡಿ
ದೇವ ಚಿದಾನಂದ ಗುರು ತಾನೀಗ ನಿಜವೆಂದು
ಸಾವದಾನದಿ ಕಂಡು ಕಡೆಹಾಯಿರೋ ೫

## ೨೫೪

ಕುಲದ ಮೇಲೆಯೇ ಹೊಂದಲಿಬೇಡ ಕೇಳಿದನೋ ಕತ್ತೆ
ಕುಲವು ಬೇರೆ ಜ್ಞಾನದ ಹಾದಿಗೆ ನಿನಗೆ ತಿಳಿಯಿತೆ ಪ

ಸಣ್ಣವನಾಗಲಿ ಸ್ತ್ರೀಯು ಆಗಲಿ ಆರು ಆದರೆ ಏನು
ತನ್ನನ್ನು ತಿಳಿದು ತಾನೆಯು ಆದರೆ ಅವನೆ ನಿಜ ಮುಕ್ತಾ ೧

ಹಿರಿಯನು ಇಲ್ಲವು ಕಿರಿಯನು ಇಲ್ಲವು
ತನ್ನನು ತಿಳಿದವ ಹಿರಿಯ ಕರೆಕರೆ
ಸಂಸಾರ ಕೇವಲ ಸುತ್ತಲು ಅರಿತವ ಎಂದಿಗೆ ಮನೆಯೂ ೨

ಆವ ಕುಲವು ಆದರೆ ಏನು ತನ್ನ ತಿಳಿಯೆ ಜ್ಞಾನ
ದೇವ ಚಿದಾನಂದನವನನು ಇಲ್ಲವನೆಂದವ ನಲಿವನಾ ೩

## ೨೫೫

ಕೆಟ್ಟ ಕೇಡನೇನ ಹೇಳಲಿ ಎನ್ನ-
ದೃಷ್ಟದಿ ಪಡೆದಿದ್ದ ಫಲವಷ್ಟೇ ಅಮ್ಮ ಪ

ಸತಿಯ ಸಂಗ ಕೆಟ್ಟೆ ಸಕಲ ವರ್ತನೆಗೆಟ್ಟೆ
ಸುತರು ಬೇಕೆಂಬ ಸಂತಸಗೆಟ್ಟೆ
ಮತಿಯ ವಿಚಾರಗೆಟ್ಟೆ ಮನದ ವಾಸನೆಗೆಟ್ಟೆ
ಖತಿಯು ಎಂಬುದ ಕೆಟ್ಟೆ ಕಾಮಗೆ ಮೊದಲು ಕೆಟ್ಟೆ ೧

ಮನೆವಾರ ನೇಮಗೆಟ್ಟೆ ಮನೆ ತಾಪತ್ರಯ ಕೆಟ್ಟೆ
ಘನಭೋಗ್ಯ ಭಾಗ್ಯ ಕೆಟ್ಟೆ ಸರ್ವವ ಕೆಟ್ಟೆ
ತನು ತಾನೆಂಬುದು ಕೆಟ್ಟೆ ತಳ್ಳಿ ತಗಾದೆ ಕೆಟ್ಟೆ
ಜನರ ಕೂಡಿ ಕೆಟ್ಟೆ ಜಡ ಜೀವ ಕೆಟ್ಟೆ ೨

ಕುಲದಭಿಮಾನ ಕೆಟ್ಟೆ ಕುಹಕರ ಮಾತು ಕೆಟ್ಟೆ
ಕಲಹವೆಂಬುದ ಕೆಟ್ಟೆ ಕಠಿಣ ಗೆಟ್ಟೆ
ಹಲವು ಎಂಬುದ ಕೆಟ್ಟೆ ವಿಧಿ ನಿಷೇಧ ಕೆಟ್ಟೆ
ಫಲದ ತೋರಿಕೆಗೆಟ್ಟೆ ಪರರ ನಿಂದ್ಯ ಕೆಟ್ಟೆ ೩

ಇಹ ಪರವನು ಕೆಟ್ಟೆ ಇಷ್ಟು ಎಲ್ಲವ ಕೆಟ್ಟೆ
ಬಹಿರಂಗವನು ಕೆಟ್ಟೆ ಭಂಗ ಕೆಟ್ಟೆ
ಅಹಿತತ್ವವನು ಕೆಟ್ಟೆ ಅಂಗಡಿಯನು ಕೆಟ್ಟೆ
ಮಹಿಮೆ ಎಂಬುದ ಕೆಟ್ಟೆ ಮಹಾ ಸುಖ ದುಃಖ ಕೆಟ್ಟೆ ೪

ನ್ಯಾಯ ಅನ್ಯಾಯ ಕೆಟ್ಟೆ ನಿತ್ಯ ಕರ್ಮವ ಕೆಟ್ಟೆ
ಬಾಯಿ ಪಿಟಪಿಟ ಬೆರಳೆಣಿಕೆ ಕೆಟ್ಟೆ
ಪ್ರಿಯವೆಂಬುದ ಕೆಟ್ಟೆ ಪಿಂಡ ಪ್ರಧಾನ ಕೆಟ್ಟೆ
ಜೀಯ ಚಿದಾನಂದನಾಗಿ ಜನ್ಮಗೆಟ್ಟೆ ೫

## ೨೫೬

ಕೆಟ್ಟದು ಮೋಹ ಕೆಟ್ಟದು ಈ
ನಷ್ಟ ವಿಷಯಕೆ ಬಿದ್ದು ನಾರಿ ಪಾಲಾಗೋದು ಪ

ಕರುಳ ಭಾವಕೆ ಸೋತು ಕುಚದ ಭಾರಕೆ ಸೋತು
ಸಿರಿಮುಡಿ ವೇಣಿ ಶಿಸ್ತಿಗೆ ಸೋತು
ಕಿರುನಗೆಗೆ ತಾ ಸೋತು
ಉರಿಯ ಮೋಹಕೆ ಬಿದ್ದ ಚಿಟ್ಟೆಯಂತೊರಲುವುದು ೧

ಕಣ್ಣ ಭಾವಕೆ ಸೋತು ಕದಪುಗಳಿಗೆ ಸೋತು
ನುಣ್ಣನೆಯ ಮೋರೆಯ ನುಣುಪಿಗೆ ಸೋತು
ಸಣ್ಣ ಹಲ್ಲಿಗೆ ಸೋತು ಸುಮನಾಸಿಕಕೆ ಸೋತು
ಸುಣ್ಣ ನೀರಲಿ ಕೂಡಿ ಕುದಿವಂತೆ ಕುದಿವುದು ೨

ಬಳಲು ನಡೆಗೆ ಸೋತು ಬಡ ನಡುವಿಗೆ ಸೋತು
ಸುಳಿನಾಭಿಗೆ ಮೆರೆವ ಸುತ್ರಿವಳಿಗೆ ಸೋತು
ಸುಲಭ ಚಿದಾನಂದ ಸುಪಥವ ಕಾಣದೆ
ತಲೆ ಕೆಳಕಾಗಿ ನರಕಕ್ಕೆ ತೆರಳುವುದು ೩

## ೨೫೭

ಕೆಡಬೇಡವೋ ಎಲೆ ಕರ್ಮಿ ಮನುಜ ನೀ
ಕೆಡದಿಹ ಪಥವ ಕೇಳಿನ್ನು ಪ

ಹೆಂಡತಿ ಮೋರೆಯ ಮೋಡಿಯ ನೋಡಿ ಹೆಂಡತಿ ಥೂ ಎನ್ನು
ಗಂಡಸು ಮಕ್ಕಳು ಗತಿಯೇನೆಂಬರು ಗಂಡು ಮಕ್ಕಳ ಛಿ ಎನ್ನು
ಕಂಡೆವು ಕಾಣೆವು ಎಂಬ ಬಂಧುಗಳ ಕಣ್ಣಮುಂದಿರಬೇಡಿನ್ನು
ಹಿಂಡು ಹಿಂಡು ನೆರೆದಿಹ ಪರಿಜನರ ಹಿಂಡು ಸಂದಳಿಯ ಬಿಡು ಇನ್ನು ೧

ಬಹುಗೃಹ ಕಟ್ಟಿದೆ ದಿಕ್ಕಿಲ್ಲವೆಂಬೆ ಬಹು ಗೃಹವನು ಸುಡಲೆನ್ನು
ಇಹುದಿದು ದ್ರವ್ಯವು ಇದಕೇನೆಂಬೆಯ ಇಹುದನು ಧರ್ಮವ ಮಾಡಿನ್ನು
ದಾಹದಿ ಗಳಿಸಿದೆ ಆಸ್ತಿಯನೆಂಬೆಯ ಸಜ್ಜನರಿಗೆ ಕೊಳ್ಳೆನ್ನು
ಇಹೆ ನಾಲಕು ದಿನ ಎಂಬ ಭ್ರಮೆಯನು ಇಡು ಪಾದರಕ್ಷೆಯೊಳಿನ್ನು ೨

ಮತಿವಂತರು ಆರಿಲ್ಲವೆಂಬೆಯ ಮತಿಗೆ ಶಿವ ತಾನಿಹನೆನ್ನು
ಗತಿಯೇನಿನ್ನು ಈ ಕುಟುಂಬಕೆಂಬೆಯ ಗತಿಯಿದ್ದಾಗುವುದೆನ್ನು
ಅತಿ ಋಣ ಭಾರವು ಆಗಿಹುದೆಂಬೆಯ ಆರಿಗೆ ಋಣ ಎಂದೆನ್ನು
ಸುತರಿಲ್ಲ ತನಗೆ ಗತಿಯಿಲ್ಲವೆಂಬೆಯ ಸುತರಿಂದ ಗತಿಯು ಸಾಕಿನ್ನು ೩

ಪಾಪಹರರ ಪುಣ್ಯಪುರುಷರ ನೋಡಿ ಪಾಪಿಯ ಕಡೆಹಾಯ್ಸಿನ್ನು
ದೀಪಿಸುತಿಹ ಬ್ರಹ್ಮ ಬೋಧೆಯ ನುಡಿಗಳ ದೀಪ್ಯಮಾನದಿ ಕೇಳಿನ್ನು
ಕೋಪದಿ ಹಿಡಿ ಕಟ್ಟೆನ್ನುವ ಯಮದೂತರ ಕಾಲಲಿ ಒದೆಯವರನ್ನು
ಆ ಪರ ಬ್ರಹ್ಮವ ನೋಡುತ ಸುಖದಲಿ ಆನಂದದಿ ಮಲಗಿನ್ನು ೪

ನಿತ್ಯ ನಿರಾಳ ನಿರಂಜನ ನಿರವಯ ನಿತ್ಯನು ಬೇರಿಲ್ಲೆನ್ನು
ಪ್ರತ್ಯಗಾತ್ಮ ಪರಾತ್ಪರ ಪರತರ ಪ್ರತ್ಯಗೆ ತಾನಹುದೆನ್ನು
ಚಿತ್ತಿನ ಪ್ರಭೆಯದು ಥಾಳಿಸುತಿರುತಿರೆ ಚಿತ್ತವಲಯ ಮಾಡಿನ್ನು
ಪ್ರತ್ಯಗಾತ್ಮ ಚಿದಾನಂದನ ನೆನೆಯುತ ಪ್ರಾಣವ ಕಳೆಯಿನ್ನು ೫

## ೨೫೮

ಕೊಡವನು ಹೊರಲಾರೆನೆ ಅಕ್ಕ
ಕೊಡುವನು ಹೊರಲಾರೆನೆ
ಕೊಡವನು ಹೊರಲಾರೆನೆ ಕಷ್ಟಪಡಲಾರೆ
ಕೊಡವನು ಒಡೆದರೆ ಕಡೆಹಾಯ್ವೆನೆ ಪ

ತಿಳಿಯಲು ಒಂಬತ್ತು ತೂತಿನ ಕೊಡನೆ
ಕೊಳೆಯದು ನಿತ್ಯವು ತುಂಬಿಹ ಕೊಡನೆ
ಹೊಲಸಿನ ಹೊದ್ದಿಕೆಯ ಹೊದ್ದಿಹ ಕೊಡನೆ
ತೊಳೆದರು ನಿತ್ಯವು ಶುಚಿಯಾಗದ ಕೊಡನೆ ೧

ರೂಪವು ದಿನದಲಿ ಮೂರಿಹ ಕೊಡನೆ
ಆಪತ್ತಿನಿಂದಲಿ ನರಳುವ ಕೊಡನೆ
ಪಾಪದ ಪುಂಜದ ಪಡಿಶಂಟು ಕೊಡನೆ
ಜೋಪಾನ ಮಾಡಲು ಜರಿವಾ ಕೊಡನೆ ೨

ಎಲ್ಲಿಂದ ಬಂದಿತೋ ಎನಗೀ ಕೊಡವು
ಎಲ್ಲಿಯ ಪಾಪಿಯು ಮಾಡಿದ ಕೊಡನೆ
ಬಲ್ಲ ಚಿದಾನಂದ ಮರೆಸುವ ಕೊಡನೆ
ಬಾಳನು ಕೆಡಿಸುವ ಸತಿ ಎಂಬ ಕೊಡವು ೩

## ೨೫೯

ಕೊರಡು ಎಂಬೆನು ಇಂಥವನ ಕಂಡು
ಕೊರಡು ಎಂಬೆಹುಸಿಯದೆ
ಕೊರಡು ಅಲ್ಲದೆ ಶಿವನಿರೆ
ಜೀವನೆಂಬುವನ ಕೊರಡು ಎಂಬೆ ಪ

ಹಿರಿಯರು ಬರಲು ಏಳದವನನು ಕಂಡು ಕೊರಡು ಎಂಬೆ
ಮರೆತು ತನ್ನನು ಕಲ್ಲ ಪೂಜಿಪ ಕಂಡು ಕೊರಡು ಎಂಬೆ
ಅರಿತು ತನ್ನನು ಅಹುದಲ್ಲವೋ ಎಂಬುವನ ಕೊರಡು ಎಂಬೆ
ಗುರುಪಾದ ಹೊಂದಿ ತನ್ನನು ತಿಳಿಯದವನು ಕೊರಡು ಎಂಬೆ ೧

ತನ್ನೊಳು ಪರಮಾತ್ಮನಿರಲು ಕಾಣದವನನು ಕೊರಡು ಎಂಬೆ
ಅನ್ನವ ಬಿಟ್ಟು ತೊಪ್ಪಲ ತಿಂಬನ ಕಂಡು ಕೊರಡು ಎಂಬೆ
ತಿನ್ನುವನಿರುಲು ಉಪವಾಸ ಬೀಳ್ವನ ಕಂಡು ಕೊರಡು ಎಂಬೆ
ಚೆನ್ನಾಗಿ ಹಮ್ಮಳಿಯದೆ ಶ್ರೇಷ್ಠನೆಂಬುವನ ಕೊರಡು ಎಂಬೆ ೨

ನೀನಾರು ಎಂಬುವನ ಅದಾರೆನ್ನದನ ಕಂಡು ಕೊರಡು ಎಂಬೆ
ವೇದಶಿರವನೋದಿನರ ತನ್ನನೆಂಬನ ಕೊರಡು ಎಂಬೆ
ವಾದಕ್ಕೆ ಠಾವಿಲ್ಲ ಖೇದ ಮಾಡುವನ ಕಂಡು ಕೊರಡು ಎಂಬೆ
ಬೋಧ ಚಿದಾನಂದನಿರೆ ಕಾಣದವನನು ಕೊರಡು ಎಂಬೆ ೩

## ೨೬೦

ಕೋಣ ಕೇಳಲೋ ಕೋಣ ನೀನು
ಕೋಣನಲ್ಲವು ಬ್ರಹ್ಮ ಕೋಣ ಪ

ಶಾಸ್ತ್ರ ಪುರಾಣವ ಕೋಣ ನೀನು ವಿಸ್ತರವೋದಿದೆ ಕೋಣ
ವಸ್ತು ತಿಳಿಯಲಿಲ್ಲ ಕೋಣ ನಿನ್ನ ಪುಸ್ತಕ ಬಟ್ಟೆಯಲ್ಲೋ ಕೋಣ ೧

ಎಲ್ಲವನೋದಿದೆ ಕೋಣ ನಾನು ಬಲ್ಲೆನೆನುತಿಹೆ ಕೋಣ
ಬಲ್ಲೆನು ನಿನ್ನ ಕೋಣ ನೀನು ಬಲ್ಲಿಡೆ ಬಲ್ಲೆಯೋ ಕೋಣ ೨

ಹೆಂಡಿರು ಮಕ್ಕಳು ಕೋಣ ಪ್ರಪಂಚ ಯಮನಾಳು ಕೋಣ
ಖಂಡಿಸಿ ತಿಳಿ ನೀನು ಕೋಣ ಪ್ರಾಣ ಕೊಂಡವರವರೀಗ ಕೋಣ ೩

ಎಲ್ಲಿಂದ ಬಂದೆಯೋ ಕೋಣ ನೀನೆಲ್ಲಿಗೆ ಹೋಗುವೆ ಕೋಣ
ಬಲ್ಲವಿಕೆ ನಿನಗಿಲ್ಲ ಕೋಣ ನೀ ಎಲ್ಲರ ಹೊಡೆಗೆಡೆ ಕೋಣ ೪

ನನ್ನ ನುಡಿ ಕೇಳೋ ಕೋಣ ನಿನಗಿನ್ನ ಬುದ್ಧಿಯಿಲ್ಲವೋ ಕೋಣ
ನಿನ್ನನೆ ನೀ ಅರಿ ಕೋಣ ಇನ್ನು ಚಿದಾನಂದನರಿಯದಿದ್ದಡೆ ಕೋಣ ೫

## ೨೬೧

ಗುಣವಂತರ ಗುಣವ ಗುಣವಂತನರಿವನು
ಗುಣಹೀನ ಗುಣವಂತನ ಗುಣವೇನ ಬಲ್ಲನೋ ಪ

ಕಮಲಗಳ ಹೃದಯ ಭ್ರಮರಕ್ಕೆ ತಿಳಿಯುವುದು
ಕಮಲಗಳ ಗುಣ ಕಪ್ಪೆಗೇನು ತಿಳಿವುದೋ
ವಿಮಲರಾ ಹೃದಯ ವ್ಯುತ್ಪನ್ನರಿಗೆ ಹೊಳೆಯುವುದು
ಕುಮತಿಗಳಿಗೆ ಕೋಮಲರ ಘನತೆಯೆಂತರಿವುದೋ ೧

ಕೆಚ್ಚಲೊಳಿರುತಿಹುದು ಕರುವಿಗೆ ದೊರಕುವುದು
ಕೆಚ್ಚಲ ಕಚ್ಚಿರುವ ಉಣ್ಣೆಗದು ದೊರೆವುದೋ
ಸಚ್ಚರಿತ್ರರ ಬೋಧೆ ಸತ್ಪುರುಷಗಂಟುವುದು
ಹುಚ್ಚ ತಾ ಬದಿಯಿದ್ದರೆ ಪರಿಣಾಮವೇನಹುದೋ ೨

ಸಾಧುಗಳ ಮಹಿಮೆಯ ಸಾಧುಗಳ ಹೃದಯವು
ಸಾಧುಗಳ ಬೋಧೆಯ ಸಾಧು ಸಹವಾಸ
ಬೋಧ ಚಿದಾನಂದ ಬಗಳೆಯಾದವರಿಗರಿವು
ವಾದಿಯಾಗಿಹ ಮೂರ್ಖರಿಗೆ ಗುಣವೇನು ತಿಳಿಯುವುದೋ ೩

## ೨೬೨

ಗುರುವಿಗೆ ಒಂದು ಶರಣಾರ್ಥಿ ಗುರು
ಭಕ್ತರಿಗೊಂದು ಶರಣಾರ್ಥಿ ಪ

ಸಾಧನ ನಾಲ್ಕನು ಸಾಧಿಸುತಿರುತಿಹ
ಸಾಧಕರಿಗೆ ಒಂದು ಶರಣಾರ್ಥಿ
ವಾದವ ವರ್ಜಿಸಿ ವಸ್ತುವ ಧ್ಯಾನಿಪ
ಉತ್ತಮರಿಗೆ ಒಂದು ಶರಣಾರ್ಥಿ ೧

ಯೋಗಗಳಿಂದಲೆ ಯೋಗ್ಯರಾಗಿಹ
ಯೋಗೀಶರಿಗೊಂದು ಶರಣಾರ್ಥಿ
ರಾಗ ಪೋಗಿ ರಂಜಿಸುತಿರುತಿಹ
ರಂಜಕರಿಗೆ ಒಂದು ಶರಣಾರ್ಥಿ ೨

ದೂಷಣ ಭೂಷಣ ದೂರ ಮಾಡಿಹ
ದೃಢವಂತರಿಗೆ ಒಂದು ಶರಣಾರ್ಥಿ
ಆಸೆಗಳೆಂಬ ಅಳಿದು ಇರುತಿಹ
ಆನಂದರಿಗೊಂದು ಶರಣಾರ್ಥಿ ೩

ಪ್ರಪಂಚವೆಲ್ಲವ ಪರಮಾರ್ಥ ಮಾಡಿಹ
ಪಂಡಿತರಿಗೆ ಒಂದು ಶರಣಾರ್ಥಿ
ತಾಪವನೀಗಿ ತಮ್ಮನೆ ಮರೆತಿಹ
ತಾಪಸರಿಗೆ ಒಂದು ಶರಣಾರ್ಥಿ ೪

ಜನನ ಮರಣಗಳ ಜಡರನೆ ಕಳೆದಿಹ
ಜನಪತಿಗಳಿಗೊಂದು ಶರಣಾರ್ಥಿ
ಚಿನುಮಯಾತ್ಮಕ ಚಿದಾನಂದನ ಬೆರೆದಿಹ
ಚಿದ್ರೂಪರಿಗೆ ಒಂದು ಶರಣಾರ್ಥಿ ೫

## ೨೬೩

ಛಿ ಛಿ ಮನುಜನೆ ನಿನ್ನನೆ ತಿಳಿಯೋ
ಚಿಕ್ಕ ಬುದ್ಧಿಯ ನೀನೀಗ ಮಾಡಬೇಡ ಪ

ಎಲ್ಲ ದಿನಗಳು ಆಗಲೋ ಈಗಲೋ
ಒಳ್ಳಿತಾಗಿ ಬಿಡು ಸಂಸಾರವನು
ಸರ್ವರನು ನಿನಗೊಪ್ಪಿಸೆಯೋ ಸತಿಸುತ ರೆಂಬರು
ಏನಾದರೆಂದು ತಿರುಗಿ ಪರಾಮರಿಸಿ ಕೊಂಬೆಯಾ ೧

ತುದಿಗಟ್ಟೆಯಲಿ ತಂಬಿಗೆ ಇಟ್ಟರೆ
ತೆಗೆಯಿರಿ ಒಳಯಿಕೆ ನೀವೆಂಬಿ
ತುದಿಗಟ್ಟೆಯಲಿಹ ತುಂಬಿಗೆಯಿಂದಲಿ
ತಿರುಗಿ ಕುಡಿಯುವೆಯೋ ನೀನೀರ ೨

ಮನೆ ಮಾತಿಗೆ ನೀ ಬಡಿದು ಆಡಿದ
ಮನೆ ತಕ್ಕೊಂಡೆಲ್ಲದರ
ಮನೆಯಲಿ ಆರಿಗೆ ಹೇಳಿ ಹೋಗುವೆಯೋ
ಮನೆ ಪರಾಮರಿಗೆ ತಿರುಗಿ ಕೊಂಬೆಯೋ ೩

ದೇಹವ ಸಾರ್ಥಕ ಮಾಡಿರಿ ಎಂದು
ದೈನ್ಯದಿ ಎಲ್ಲರಿಗೂ ಹೇಳುವೆ
ದೇಹವ ಸಾರ್ಥಕ ಮಾಡಿದರಿಲ್ಲವೋ
ದೇಹ ಪರಾಮರಿಕೆಯ ಕೊಂಬೆಯೋ ೪

ನಿನ್ನ ದೇಹವೇ ನಿನಗೆ ಇಲ್ಲವೋ
ನಿನಗಲ್ಲಿಯ ಸತಿಸುತ ಭ್ರಾಂತಿ
ನಿನ್ನ ಚಿದಾನಂದ ಗುರುವೆಂದು ಕಂಡರೆ
ನಿನಗೇನಿಲ್ಲವೋ ಗುರುವಾಗುವೆ ನೀ ೫

## ೨೬೪

ಜೀವ ನಾನೆನ್ನಬೇಡ ಮುಕ್ತಾ ಜೀವ
ನಾನೆನ್ನ ಬೇಡ ಮುಕ್ತಾ ನೀನೆ
ದೇವ ಚಿದಾನಂದನು ನೀನೆ ಸತ್ಯ ಅವಶ್ಯಕ್ತಾ ಪ

ಇಲ್ಲ ನಿನಗೆ ಸತಿ ಇಲ್ಲಿ ಸುತರು ಎಂಬುದಿಲ್ಲ
ಭಾಗ್ಯವು ಎಂಬುದಿಲ್ಲ ಮನೆ
ಇಲ್ಲವು ಇಲ್ಲವು ದೇಹವು ನಿನಗೆ
ಎಲ್ಲವು ಭ್ರಾಂತಿಯು ನೀ ಪರಮಾತ್ಮ ೧

ಆರು ನಿನಗೆ ತಾಯಿಯು ಯಾರು ತಂದೆಯ ತಾ
ನಾರು ಹಿತರುಯೆಂಬರಾರು ಮೊದಲು ನೀನಾರು
ಆರಾರಿಲ್ಲವು ಕೆಡಬೇಡ ವ್ಯರ್ಥವು
ಪೂರಣ ತಿಳಿ ನಾ ಸಾಕ್ಷಾತ್ತೆಂದು ೨

ಒಳಗೆ ದೃಷ್ಟಿಯಿಡು ದೃಷ್ಟಿಯೊಳಗೆ ಉಕ್ಕುವ ಕಳೆ
ಯೊಳಗೆ ಉಕ್ಕುವ ತೇಜದೊಳಗೆ ಆ ಬೆಳಗಿನ್ನೊಳಗೆ
ಥಳಥಳಿಸುತ ಕಲೆ ತಾ ಬಂಡದಿ
ನಳನಳಿಸುವ ಚಿದಾನಂದನೆ ಆಗೋ ೩

## ೨೬೫

ಜ್ಞಾನಿಯ ಕಾಣಲು ಧಗದಲ್ಯನಾಗುವ ಶಾಸ್ತ್ರಿ
ಜ್ಞಾನಿಗಳು ಶಾಸ್ತ್ರಿಗೇನ ಮಾಡಿದರೋ
ಏನಾದರೂ ಪೂರ್ವದ್ವೇಷವಿತ್ತಾದರೂ
ತಾನು ನಿಂದಿಸಿ ಕುಲಸಹ ಕೆಡಿಸುವನು ಶಾಸ್ತ್ರಿ ಪ

ದಿನವ ಕಾಣುವ ವದನವರಿಹುತಲಿಹ
ದನವ ಕಾಯ್ದುವಗಿಂತ ಅತ್ತಿತ್ತ ಕಡೆ ಶಾಸ್ತ್ರಿ
ಘನ ವೇದಾಂತವನೋದಿ ಜ್ಞಾನಿಗಳ ನರರೆಂಬ
ಎನಿತುಗರ್ವ ಅಹಮ್ಮಲಿ ತನ್ನ ತಿಳಿಯ ಶಾಸ್ತ್ರಿ ೧

ಓದೋದು ವೇದಾಂತ ಓದುವನಾರೆಂದು ಅರಿಯ
ಓದಿಹೆನೆಂಬ ಗರ್ವವು ತಲೆಗೆ ಹತ್ತಿ
ಓದಿಯೇ ಅಲ್ಲಿ ಗೆದ್ದೆ, ಇಲ್ಲಿ ಗೆದ್ದೆ ನೆಂಬ
ಅದನೊಬ್ಬನೆಲ್ಲೋ ಇರೆ ಆರಗೆದ್ದನು ಶಾಸ್ತ್ರಿ ೨

ಸಾಧುಗಳಿಗೆ ವಂದಿಸಲಿಲ್ಲ ಸಾಧುಗಳ ಮನೆ ಹೋಗಲಿಲ್ಲ
ಸಾಧುವು ಮುಂದೆ ಹಾಯಲು ಕುಳಿತು ಏಳದಲಿಹನು
ಸಾಧುವ ಕಂಡು ನಡೆಯೇನು ನುಡಿಯೇನು ಎಂಬ
ಸಾಧುವ ಭಜಿಪಗೆ ಬಹಿಷ್ಕಾರೆಂದನು ಶಾಸ್ತ್ರಿ ೩

ನಾನು ಅರಿಯೆ ನಿನಗೆ ಗತಿಯೇನು ಮತಿಯೇನು
ನಾನು ಎಲ್ಲಿಂದ ಬಂದೆ ಎಲ್ಲಿಗೆ ಹೋಗುವೆ
ನಾನು ನನ್ಹೆಸರೇನು ಆರು ತಿಳಿಸುವರೆಂಬ
ಜ್ಞಾನವಿಲ್ಲದೆ ಘಟಪದಿ ಮೆರೆದಿಹ ಶಾಸ್ತ್ರಿ ೪

ನಾನೇ ಶ್ರೇಷ್ಠನೆಂದೂ ನಾನೇ ದೊಡ್ಡವನೆಂದೂ
ನಾನು ಅರಿಹೆನೆಂಬ ಎಚ್ಚರವದು ಹೋಗಿ
ತಾನಾದ ಚಿದಾನಂದರಾದ ಸತ್ಪುರುಷ
ಏನೇನೋ ನಿಂದೆಯ ಮಾಡಿ ನರಕಕ್ಕಿಳಿಸುವ ಶಾಸ್ತ್ರಿ ೫

## ೨೬೬

ಜ್ಞಾನವನ್ನೇ ತಿಳಿದುಕೋ ಮನುಜ ಜ್ಞಾನವನ್ನೇ ತಿಳಿದುಕೋ ಪ

ಸತ್ತು ಹುಟ್ಟಿಯೇ ಸತ್ತು ಮುಂದಣ ಜನ್ಮಕು ಮತ್ತು
ಮತ್ತು ಗಳಿಸಿಕೊಂಡು ವಿಪತ್ತು ಮತ್ತೆ ಬಂದಿದೆ ಮೃತ್ಯು ೧

ಹಾದಿಯಿದೆ ಸಾಪು ಕಾಣದೆ ಬಿಡುವೆ ಆಪು
ಬಯಕೆ ಯೋನಿಯ ಕೂಪು ಹಾಕಿ ಹಾಕಿ ಭಾಪು ೨

ಹಸಿವು ಬಿಡೋ ಹಸಿವು ಯಾಕೆ ಆದಿ ಪಶುವು
ಬಗುಳ ಬೇಡ ಹುಸಿಯು ನಾಚುತಿದೆ ಬಸಿರು ೩

ಹೆಚ್ಚ ಬೇಡ ಹೆಚ್ಚು ಅಹಂಕಾರ ಮುಚ್ಚು
ಓದಿಗೆ ಬೆಂಕಿಯ ಹಚ್ಚು ಮಾಡಿಕೊಂಡೆಯ ಕಿಚ್ಚು ೪

ಜ್ಞಾನವ ತಿಳಿಯಿನ್ನು ಯಮಗೆ ಕೊಡಬೇಡ ಬೆನ್ನು
ಆರುತಾನಿಹನೆನ್ನು ಚಿದಾನಂದನೆ ಎನ್ನ ೫

## ೨೬೭

ತನ್ನ ತಿಳಿಯದವನೇಕೆ ಇನ್ನವನನು ಸುಡಬೇಕು ಪ

ವೇದಾರ್ಥಿಯು ತಾನಾಗಿ ವಾದಿಸುತಿಹನೀ ಗೂಗೆ
ಓದಿದ ಓದದು ವ್ಯರ್ಥ ಒಳ್ಳಿತಾಗಿ ಗಳಿಸಿದನರ್ಥ ೧

ಆಚಾರದಿ ಒದ್ದಾಡಿ ಅಡವಿಯ ಹಿಡಿದನು ಖೋಡಿ
ಕುಚಾಳಿಯೆ ವ್ಯವಹಾರ ಕುಮಂತ್ರಕೆ ಬಲು ಧೀರ ೨

ಮಾನ್ಯರ ಕೋಪದಿ ಝಡಿವಾ ಅವಮಾನ್ಯರ ಕೊಂಡಾಡಿ ನುಡಿವಾ
ಜ್ಞಾನದ ಹಾದಿಯ ಕಾಣ ಗೋಣಿಯ ಹೊರುವ ಕೋಣ ೩

ಮುಕ್ತಿಯ ತಿಳಿಯಲು ಬಾರ ಮುಂದಿನ ಭವಿತವ ನೋಡ
ಭಕ್ತಿಯೆಂಬುದಿಲ್ಲ ಈ ಕತ್ತೆಗೇನು ಸಲ್ಲ ೪

ಕಲ್ಲನೆ ದೇವರು ಎಂಬ ಕಡಮೆಯಲಿಲ್ಲವು ಎಂಬ
ಒಳ್ಳಿತಲ್ಲವು ಅವನಿರವು ಒಲಿದವನೇ ಚಿದಾನಂದ ಗುರುವು ೫

## ೨೬೮

ತಿಳಿದು ನೋಡಲೆ ಮನವೆ ತೀವ್ರ ತಾಮಸವೇಕೆ ತಿಳಿದುಕೋ
ನಿನ್ನ ನೀನು ತಿಳಿಯೆ ಮಾಯೆಗಳಿಲ್ಲ ತಿಳಿಯೆ ಶಿವನಾಗುತಿಹೆ
ಬಲುಮರವೆ ಯಾಕೆ ಪಾಪಿ ಮನವೆ ಪ

ಮಂಗಳ ಮಹಾ ಶೂನ್ಯ ಮಹಾ ಪುರುಷ
ನಿಸ್ಸಂಗ ನಿರ್ಗುಣ ನಿರಾಶಾ
ಸಂಗದೂರ ಉದಾರ ಸಕಲ ಜಗದಾಧಾರ
ಮಂಗಳಕಾರ ಮಹಿಮ
ತುಂಗ ವೇದಾಂಗಗಳ ಗಣಿತಕಪಾರ
ದುರಿತ ಭಂಗತರ ತರಂಗ ಮೂರ್ತಿ
ಜಂಗಮನೆ ನೆಲೆಸಿಹನು ಜನಿಸಿ
ನೀ ನಿನ್ನೊಳಗೆ ಕಣ್ಣಾಗಿಣದಿಪ್ಪೆ ಗುರುವ ಮನವೆ ೧

ಮಾಯೆ ಮೋಹಕೆ ಸಿಲುಕಿ ಮಗ್ನನಾಗಿರುತಿಹೆ
ಕಾಯವಿದು ನಿನಗೆ ಸ್ಥಿರವೇ
ಆಯಾಸಂಬಡಬಹುದೆ ಅಲ್ಪ ಮತಿಗಳ
ಕೂಡಿ ನ್ಯಾಯವೆ ನಿನಗೆ
ರಾಯ ನಾನೆಂಬ ಹೆಮ್ಮೆಯ ತಾಳ್ದು ರತಿ
ಬಹಳ ಸ್ತ್ರೀಯರಲಿ ಸೊಗಸಬಹುದೇ
ಮಾಯಕಿಂತಕಟ ನೀ ಶಿಲ್ಕಿ ಒಳಗಾಗುವುದು
ಮಾಯವೋ ಇದು ಮಹಿಮೆಯೋ ಮನವೇ ೨

ಎನ್ನ ಸತಿಸುತ ಬಂಧು ಎನ್ನ ಗೃಹವು
ಇದೆಂದು ಬನ್ನಬಡುತಿಹೆ ಯಾತಕೆ
ನಿನ್ನೊಳಗೆ ಇಹ ವಸ್ತು ನೀನೆ ಕಾಣದಲಿರೆ
ಮನ್ನಿಸಾ ಗುರುಹಿರಿಯರ
ಉನ್ನತ ಕಟಾಕ್ಷದಲಿ ಒಳಗೆ ದೃಷ್ಟಿಸಿ ಕಂಡು
ನಿನ್ನೊಳಗೆ ಪುಳಕನಾಗು
ಚಿನ್ಮಯ ಚಿದಾನಂದ ಚಿದ್ರೂಪ ತಾನೆಂದು
ನಿನ್ನ ಸಂಶಯ ಕಳೆಯೋ ಮನವೇ ೩

## ೨೬೯

ತಿಳಿಯಲೋ ರನ್ನಾ ನಿನ್ನೊಳು ನಿನ್ನ ಪ

ಅನ್ನವ ನೀಡು ತುಪ್ಪವ ಕೊಡು
ಚೆನ್ನಾಗಿ ಉಣ್ಣುವವನಾರೋ ಅವನಾರೋ ೧

ಹೋಳಿಗೆ ಹಿಸುಕಿ ಹಾಲೊಳು ಕುಸುಕಿ
ಹೋಳಿಗೆ ಉಂಬವನ್ಹೆಸರೇನೋ ಹೆಸರೇನೋ ೨

ಜಡಕೆಯು ಇಲ್ಲಾ ಇದೆಲ್ಲಾ
ಮೃಢ ಚಿದಾನಂದ ನೀನೆನ್ನು ನೀನೆನ್ನು ೩

## ೨೭೦

ತಿಳಿಯಿರೋ ಸಮ್ಮಂದ ಹೇಳುವೆ ಸುಧಾನಂದ ಪ

ಉಂಬವ ತಾನಾರು ಉಣಬಲ್ಲವನಾರು
ಸಂಭವಿಸುವನಾರು ಸಮನಿಸಿ ಇಂಬಾಗಿಹನಾರು ೧

ಕಣ್ಣಿಂದಲೆ ನೋಡಿ ನೋಡುವ ಕಣ್ಣು ಕಾಂಬುದೆ ಖೋಡಿ
ಕಣ್ಣೊಳಗದೆ ನೋಡಿ ಕಂಡಾ ಕಣ್ಣಹುದೆಂದಾಡಿ ೨

ಕಿವಿಯಿಂದಲೆ ಕೇಳಿ ಕಿವಿಯನು ಕಿವಿಯೆ ಗಯ್ಯಾಳಿ
ಕಿವಿಯೆ ದಿವಾಳಿ ಕಿವಿಗಾ ಕಿವಿಗರಿವಹುದ್ದೇಳಿ ೩

ನಾಲಗೆ ನುಡಿಯಿರಲಿ ನುಡಿವುದೆ ನಾಲಗೆ ಬರಿ ತೊಗಲು
ನಾಲಗೆಯೊಳಗಿರಲು ಮೂಲದ ನಾಲಗೆಯಲಿ ಬರಲು ೪

ಮೂಗಿನ ಮೂಲಕ ಪ್ರಾಣ ಅರಿವಡೆ ಮೂಗು ಬಲ್ಲುದೆ ಕೋಣ
ಮೂಗರಿದವ ಜಾಣ ಮೂಗದು ನಿರ್ವಾಣ ೫

ತನುವಿನ ಒಳಗಿರ್ದು ಚೇತನ ಜನಿಸುತಲಿರುತಿರ್ದು
ಇನಿತಾದಲಿರ್ದು ಬೆಳಗುವ ತಾನೆ ತಾನಿರ್ದು ೬

ರೂಪಕೆ ವಿರಹಿತನೆ ತೋರ್ಪಾ ರೂಪವೇ ತಾನಿಹನಾ
ಲೇಪಕೆ ದೂರಿಹನಾ ಚಿದಾನಂದಪತಿ ಗುರುವವನಾ ೭

## ೨೭೧

ತುಪಾಕಿ ಸಾಧನವನು ತ್ವರಿಯ ಬಿದ್ದು ಮಾಡುತಿರುವೆ
ಶಾಬಾಸು ಶಿವನೇ ನೀನಣ್ಣ ಪೇಳುವೆನಣ್ಣ ಪ

ಮೌನವೆಂದೆನಿಪ ಮುಸ್ಕೈದೆ ಸಹಿತಾಗಿ
ಜ್ಞಾನ ಪಡೆದಳವ ಬಗಿಯಣ್ಣಾ ಸಾಧಿಸು ಅಣ್ಣ
ಧ್ಯಾನವೆಂದೆನಿಪ ತಲೆಕಟ್ಟನೆ ಕಟ್ಟಿ
ಆನಂದವನೆ ಆಡಣ್ಣ ಸಾಧಿಸು ಅಣ್ಣ ೧

ಆರು ಚಕ್ರವೆಂಬ ಆರು ಕಟ್ಟಿನ ತುಪಾಕಿ
ಧೀರತನದಿಂದ ಪಿಡಿಯಣ್ಣಾ ಸಾಧಿಸು ಅಣ್ಣ
ಮೂರಾವಸ್ಥೆಯೆಂಬ ಮೂವೆರಳ ಮದ್ದ ಹೊಯ್ದು
ಪೂರಾಯದವನ ಮಾಡಣ್ಣ ಸಾಧಿಸು ಅಣ್ಣ ೨

ಇಡಾಪಿಂಗಳವೆಂಬ ಎರಡು ಗುಂಡನೆ ಹಾಕಿ
ರೂಢಿ ಎಂಬ ಗಜವ ಜಡಿಯಣ್ಣ ಸಾಧಿಸು ಅಣ್ಣ
ಕೂಡಿಹ ಸತ್ವನೆಂಬ ಕೂರಿ ರಂಜಕವರೆದು
ಗೂಡು ಗುರು ಜಾವಿಗೆ ಒತ್ತಣ್ಣ ಸಾಧಿಸು ಅಣ್ಣ ೩

ಆಸನ ನಳಿಕೆಯೆಂಬ ಆಧಾರವನೆ ಆಂತು
ವಾಸರ ಹೊಗ್ಗೊಡಬೇಡಣ್ಣ ಸಾಧಿಸು ಅಣ್ಣ
ನಾಸಿಕಾಗ್ರವು ಎಂಬ ನೊಣನ ದಿಟ್ಟಿಸಿ ನೋಡಿ
ಸೂಸದೆ ಏರಿಸಿ ನಿಲ್ಲಣ್ಣ ಸಾಧಿಸು ಅಣ್ಣ ೪

ಬರಿಯ ಪ್ರಣವವೆ ಎಂಬ ಬೆರಳ ಬೊಬ್ಬೆಯನಿಟ್ಟು
ಭರದಿ ಭೀತಿಯನಳಿಯಣ್ಣಾ ಸಾಧಿಸು ಅಣ್ಣ
ಗುರು ಚಿದಾನಂದನು ಎಂಬ ಗುರಿ ಭ್ರೂಮಧ್ಯವೆ ಇರೆ
ಗುರಿಯ ತಾಗುವಂತೆ ಇಡಣ್ಣ ಸಾಧಿಸು ಅಣ್ಣ ೫

## ೨೬೨

ತ್ಯಜಿಸಬಾರದೋ ನೀವು ಸಜ್ಜನರ ಸಂಗ
ತ್ಯಜಿಸಬಾರದೋ ನೀವು ಪ

ದರುಶನ ಮಾಡೆ ದುರ್ದೋಷವು ಹರಿವುದು
ಸ್ಪರ್ಶವ ಮಾಡೆ ಪ್ರಪಂಚವು ಹರಿವುದು ೧

ಮಾತು ಆಡುತಲಿರೆ ಮೈಯದು ಮರೆವುದು
ಪ್ರೀತಿಯಿಂ ಶರಣೆನೆ ಪರಿಣಾಮ ತೋರ್ಪುದು ೨

ವಾಸನೆ ಇರೆ ನಿರ್ವಾಸನೆಯಹುದು
ಸೂಸುತಲಿಹ ಮನ ನಿಶ್ಚಿತವಹುದು ೩

ಸಂಶಯವಿರೆ ನಿಃಸಂಶಯವಹುದು
ಹಂಸೋಹಂ ಭಾವ ಸಹಜವಾಗಿ ನಿಲ್ಲುವುದು ೪

ಸುದತಿ ಇಹಪರ ತಾ ಬಿಡಲು ಬಹುದು
ಸುಧಾ ಚಿದಾನಂದನ ಬೆರೆತರೆ ತ್ಯಾಗ ಮಾಡಲು ಬಾರದು ೫

## ೨೭೩

ಥೂ ಥೂ ಚತುಷ್ಪಾದಿ ನಿನಗೇತಕೋ ಗುರುಹಾದಿ
ಮಾತು ತತ್ವದ ಬೋಧ ನಡತೆಯಲಿ ಕತ್ತೆಯಾದೆ ಪ

ನೀರಲಿ ನೆರಳನೆ ನೋಡುವೆ ಹಣೆಗೆ ಗಂಧವ ತೀಡುವೆ
ಹಾರ ತುರಾಯ್ಗಳ ಸೂಡುವೆ ಮೋರೆಯನೆತ್ತೆತ್ತ ಮಾಡುವೆ ೧

ಜಾರೆಯರೊಡನೆ ಬೆರವೆ ಕಿಸಿ ಕಿಸಿ ಹಲ್ಲನೆ ಕಿರಿವೆ
ಬಾರದ ಪದವ ಒದರುವೆ ಹಮ್ಮಿನಿಂದೆಲ್ಲೆಲ್ಲಿ ಮೆರೆವೆ ೨

ಬಿಡುವೆನು ಗುರುಪಾದವೆಂಬೆ ಬೇಡಿತಿಯ ಕೂಡುವೆನೆಂಬೆ
ಸುಡುವೆನು ಕಪನಿಯನೆಂಬೆ ಲಿಂಗವ ಕಟ್ಟಿರಿ ಎಂಬೆ ೩

ವಿಧ ವಿಧ ವೇಷವ ಧರಿಸಿ ಬಹು ಜಾತಿಯಲಿ ಕೈ ಬೆರಳಿರಿ
ಚಿದಾನಂದ ನೀ ಮೆರೆಸಿ ಬಾಳುವೆ ದೊಡ್ಡವನೆನಿಸಿ ೪

## ೨೭೪

ದುಃಖವನೆಷ್ಟೆಂದು ಹೇಳಲಿ ಸಂಸಾರ ಶರಧಿಯಿದು
ದುಃಖದ ಶರಧಿಯಿಂದ ಪರಮಾತ್ಮನ ಸ್ಮರಣೆಗೆ ವಿಘ್ನವಹುದು ಪ

ಮಗ ಬುದ್ಧಿವಂತನಾಗಲಿಲ್ಲವೆಂದೆಂಬ
ಮಗಳಿಗೊದಗಲಿಲ್ಲ ಅಳಿಯ ಎಂದೆಂಬ
ಹಗರಣವಾಯಿತು ಮನೆಯೀಗ ಎಂದೆಂಬ ದುಃಖವೊಂದು
ಜಗಳಗಂಟಿಯು ಎನ್ನ ಹಿರಿಯ ಸೊಸೆ ಎಂದೆಂಬ ದುಃಖವೊಂದು ೧

ಹೆಂಡತಿ ವ್ಯಭಿಚಾರಿಯಾದಳು ಎಂದೆಂಬ ದುಃಖವೊಂದು
ಉಂಡೆನೆಂದರೆ ಅನ್ನವಿಲ್ಲ ಎಂದೆಂಬ ದುಃಖವೊಂದು
ಕಂಡಕಡೆಗೆ ಹೋಗೆ ಕೈ ಹತ್ತದೆಂದೆಂಬ ದುಃಖವೊಂದು
ಮುಂಡೆಯಾದಳು ಎನ್ನ ಮೊಮ್ಮಗಳು ಎಂದೆಂಬ ದುಃಖವೊಂದು ೨

ನೆಂಟರಿಗೆ ಮಾಡಲೆನ್ನೊಳಿಲ್ಲವೆಂದೆಂಬ ದುಃಖವೊಂದು
ಒಂಟಿ ಬಯಲಿನ ಹೊಲವು ಬೆಳೆಯದು ಎಂದೆಂಬ ದುಃಖವೊಂದು
ಕಂಟಕಿ ನಾದಿನಿ ಹಡೆಯಲಾರಳು ಎಂದೆಂಬ ದುಃಖವೊಂದು
ಎಂಟು ವರಹ ಎಮ್ಮೆ ಸತ್ತಿತು ಎಂದೆಂಬ ದುಃಖವೊಂದು ೩

ಎದೆ ಮೇಲೆ ಕುಳಿತಿಹರು ದಾಯಾದಿಗಳೆಂದೆಂಬ ದುಃಖವೊಂದು
ಮುದುಕಿಗೆ ಗೆಲುವು ತಾನಿಲ್ಲವೆಂದೆಂಬ ದುಃಖವೊಂದು
ಮದುವೆಗೆ ಹಾದಿಲ್ಲ ಹಾವಳಿ ಎಂದೆಂಬ ದುಃಖವೊಂದು
ಸದನ ಒಳ್ಳೇದಲ್ಲ ಏಳು ಮಕ್ಕಳ ತಾಯಿ ಎಂಬ ದುಃಖವೊಂದು ೪।

ಜೋಡಿಪೆ ಧೈರ್ಯವೆಂದರೆ ನಿಶ್ಚಯಾಗಲಿಕೆ ಕೊಡದು ಒಂದು
ನೋಡುವೆ ಚಿಂತಿಸಿ ಎನೆ ಚಿಂತೆ ಹರಿಯಲು ಕೊಡದು ಒಂದು
ಮಾಡುವೆ ಮಂತ್ರ ಪೂಜನ ಪೂಜೆ ಮಾಡಲು ಕೊಡದು ಒಂದು
ಕೊಡುವೆ ಗುರು ಚಿದಾನಂದನೆನೆ ಕೂಡಗೊಡದು ಎಂದು ೫

## ೨೭೫

ದೇಹ ಪ್ರಾರಬ್ಧವು ದೇಹಕೆ ಸ್ತ್ರೀ
ದೇಹ ಬಿಟ್ಟಾತಗೆ ಹ್ಯಾಗೆ
ದೇಹ ಪ್ರಾರಬ್ಧವು ಕಡೆಯಲ್ಲಿ ಬೀಳ್ವುದು
ದಯ ಮಾಡುವೆನು ಒಳಿತಾಗೆ ಪ

ಶರೀರದಿ ವ್ಯವಹಾರವೆಲ್ಲವ ಮಾಡುತ
ಸಾಕ್ಷಿಯಾಗಿಹರದು ಹ್ಯಾಗೆ
ತಿರುತಿರುಗಿ ಬಿಡೆ ಸತ್ವವೆಂತೋ ಅಂತಿರ್ದು
ಒರಗುವ ಪರಿ ಹಾಗೆ ೧

ಎಂಬನೇನು ನಾನಾ ವಿಷಯಂಗಳೊಳಿರ್ದು
ಎರಡು ಆಗಿಹರದು ಹ್ಯಾಗೆ
ಅಂಬ ಸೇಡಿಯಂಬಿಡೆ ಸತ್ವಂತೋ ಅಂತ್ಹೋಗಿ
ಅಂಬು ತಿಲಕೆ ಬಿದ್ದ ಹಾಗೆ ೨

ಭೂಪ ಚಿದಾನಂದ ಸದ್ಗುರುವಾಗಿ
ಭೂಮಿ ಮೇಲಿಹರದು ಹ್ಯಾಗೆ
ದೀಪದ ತೈಲವು ತೀರುವನಕ ಇರ್ದು
ದೀಪವು ನಂದಿದ ಹಾಗೆ ೩

## ೨೭೬

ನನ್ನ ಮಗನೆಂಬರು ನಾಯಿ ಮಕ್ಕಳು
ತನ್ನ ತಾನೆ ಬ್ರಹ್ಮವದು ತಾನೆ ವೇಷ ಹಾಕಿ ಬರೆ ಪ

ಸತಿಪತಿ ತಾವು ಆಗ ಸಂಯೋಗದ ಕಾಲದಲ್ಲಿ
ಸುತನ ಕಿವಿ ಮೂಗ ಏನ ತಿದ್ದಿದರೇನೋ

ಅತಿ ಆಶ್ಚರ್ಯವಲ್ಲದೆ ಅವಯವ ತಾಳಿಕೊಂಡು
ಕ್ಷಿತಿಗೆ ಮೈದೋರುತ ತಾನೆ ಬಂದರೆ ೧

ಗಂಧ ಕಸ್ತೂರಿಯ ಪೂವು ಗಮಕದಲಿ ಧರಿಸುವಾಗ
ಒಂದನ್ನ ಸುತೆಗೆ ಗುರುತು ಮಾಡಿದರೇನೋ
ಇಂದು ಇದೆನೆವವೆಂದು ಇಳಿದು ಸಪ್ತಧಾತು ತಾಳಿ
ಛಂದದಿ ವಿನೋದಕಾಗಿ ತಾನೆ ಬಂದರೆ ೨

ಮಂಚವೇನು ಸಂಪತ್ತಿಗೆ ಮಡಿಹಾಸಿಗೆಯೊಳಿರ್ದು
ಮಂಚದಲಿರುತ ಸುತಗೆ ಚೇತನ ತುಂಬಿದರೇನೋ
ಹೊಂಚಿನೋಡಿ ಚಿದಾನಂದ ಹೊರೆಯೇರಿ ಹರುಷದಿ
ಪಂಚವಿಂಶತಿ ತತ್ವ ಕೂಡಿ ತಾನೆ ಬಂದರೆ ೩

## ೨೭೭

ನಾಯಿ ನಿನಗೇತಕೆ ಯೋಗಿ ವೇಷ ನೀಚ
ನಾಯಿ ನಿನಗ್ಯಾತಕೆ ತತ್ವ ಭಾಷಾ ಹುಚ್ಚ
ನಾಯಿ ನಿನಗೇತಕೆ ವಸ್ತ್ರ ಕಾಷಾ ಮುರುಕು
ನಾಯಿ ನಿನಗೇತಕೆ ಗುರುಪಾದವಾಸ ಹೊಲಸ ಪ

ಕೊರಳಿಗೆ ಕಪನಿ ತೊಟ್ಟು ಜಪ
ಸರವನೆ ಮುಂಗೈಯಲಿಟ್ಟು ತತ್ವ
ಬರಿನುಡಿ ಸಾಲು ಸಾಲಿಟ್ಟು ಕಾಲ
ಕೆರವನೆ ಇವನ ಬಾಯೊಳಗೆ ವಷಟ್ಟು ಭ್ರಷ್ಟಾ ೧

ನೀರೊಳಗೆ ನೆರಳನೆ ನೋಡಿ ಹಣೆಗೆ
ಗೀರುವೆ ಗಂಧವ ತೀಡಿ ಪೋರ
ಪೋರರ ಜೋಡನೆ ಕೂಡಿ ನಿನ್ನ
ಮೋರೆಯ ಮೇಲೆ ಹುಯ್ಯಬೇಕು ಕಸ ಪುಡಿಕೆ ಕಡುಗ ೨

ಅತ್ತ ಸಂಸಾರ ಕೆಟ್ಟು
ಮತ್ತಿತ್ತ ಗುರುಪಾದವ ಬಿಟ್ಟು ನೀ
ನತ್ತತ್ತ ಉಭಯ ಭ್ರಷ್ಟಾ ನಿನಗೆ
ಸತ್ತಿಹರು ಅರಮನೆಯ ಗೌಡೆಯರೆಷ್ಟು ಜಾಣ

ಕಂಡ ಕಂಡಲ್ಲಿಯೇ ಉಂಡು
ದೊಡ್ಡ ಹೊಟ್ಟೆಯ ಬೆಳೆಸಿಕೊಂಡು
ಬಾಡದಂಡೆಯ ಮನೆಗಂಟಿಕೊಂಡು ನಿನ್ನ
ಮಂಡೆಯ ಹೊಡಿಬೇಕು ಪಾಪಾರಿಕೊಂಡು ಹೊಲೆಯ ೪

ಅಂದವಾಗುವಿ ಗಳಿಗೆಗೊಂಡು ಹೂವ
ಚೆಂಡಾಡಿ ಜುಂಗ ಬಿಟ್ಟುಕೊಂಡು ಯಮ
ಮಂದಿರ ಮನೆ ಮಾಡೆಂದು
ಚಿದಾನಂದನ ಪಾದಕ್ಕೆ ದೂರಾದೆ ಇಂದು ಕೆಟ್ಟಾ ೫

## ೨೭೮

ನಿಂದಕರು ಎಂದವರ ತುಚ್ಛಿಸಲಾಗದು
ಸಂದೇಹವಿಲ್ಲವು ಅವರು ಅತಿಹಿತರು ಪ

ಸಂಚಿಸಿದ ಕರ್ಮದಿಂ ಸತ್ಪುರುಷರುದಿಸಿರಲು
ಹಂಚಿಕೊಂಬರು ತಾವು ಎಲ್ಲರದನು
ವಂಚಕರು ಎಂದವರ ನೀಚಸಲಿಕಾಗದು
ಮುಂಚೆವಂದಿಸಬೇಕು ಅವರ ಪದಕೆ ೧

ತಾಯಿ ಶಿಶುವಿನ ಮಲವ ತಾ ತೃಣದಿ ತೆಗೆಯುವಳು
ಮಾಯಹರ ಮಹಾಪುರುಷರ ಮಲವನು
ಆಯಾಸವಿಲ್ಲದಲೆ ತಮ್ಮ ನಾಲಿಗೆಯಲಿ ತೆಗೆಯುವರು
ಪ್ರಿಯರಿಂತವರಿಗಿಂತ ಹಿತವರುಂಟೆ ೨

ಉದಯ ಮಧ್ಯಾಹ್ನ ಮುಹೂರ್ತಗಳ ನೋಡದಲೆ
ವಿಧವಿಧದ ಪಾಪಗಳ ತಮ್ಮ ಮುಖದಿ
ಮುದದಲುಚ್ಚರಿಸಿ ಚಿದಾನಂದ ಗುರುಭಕ್ತರನು
ಸುಧೆಯ ಸುಖಮುಕ್ತಿಯೊಳು ಹೊಂದಿಸುವವರು ೩

## ೨೭೯

ನಿನ್ನನೆ ನೀ ಕಾಣಣ್ಣ
ನಿನ್ನ ಕಾಣುವುದರಿಯಣ್ಣ
ನಿನ್ನಯ ದೇಹದೊಳಣ್ಣ
ನಿನಗೆ ಹೇಳುವೆನಣ್ಣ ಪ

ಕಣ್ಣನೆ ಮುಚ್ಚಣ್ಣ ಕಪ್ಪನು ಲಕ್ಷಿಸೋ ಅಣ್ಣ
ಹೊನ್ನು ಕಳೆಗಳಣ್ಣ ಹುಟ್ಟುವುದು ಮುಂದಣ ೧

ಕಪ್ಪದು ಅಡಗಲಿ ಅಣ್ಣ ಕಪ್ಪಿನ ಸ್ಥಳ ಹಿಡಿಯಣ್ಣ
ಕುಪ್ಪಳಿಸುವುದು ಬೆಳಗಣ್ಣ ಕಾಡು ಕಿಚ್ಚಿನಂತಣ್ಣ ೨

ದೃಷ್ಟಿಯಲಿ ದ್ರಷ್ಟಿವಣ್ಣ ದೃಷ್ಟಿಯ ನೆಲೆಯಾಗಲಣ್ಣ
ಶಿಷ್ಟ ಚಿದಾನಂದನಣ್ಣ ಸಾಕ್ಷಾತ್ ನೀನಹೆಯಣ್ಣ ೩

## ೨೮೦

ನೆನೆಯಿರೋ ಪಾಪಿಗಳಿರ ನೆನೆಯಿರೋ ಪಾಪಿಗಳಿರ
ನೆನೆಯಿರೋ ದ್ರೋಹಿಗಳಿರ ನೆನೆಯಿರೋ ಆತ್ಮನನು ಪ

ಘಳಿಗೊಂದು ಮರೆಯಾಗಲಾಗಿ ಮೇರು ಕೊಟ್ಟರು ತಿರುಗದು
ಘಳಿಗೆರಡು ಪೋಗೆ ಕಡೆಯಿಲ್ಲ ಕೇಡು

ಸುಲಭವೆನಲಿಕ್ಕಿಲ್ಲ ದೇಹ ನಿತ್ಯವದಲ್ಲ
ಕಲಹದ ಮಾತಲ್ಲ ಕಡೆ ಹಾಯ್ವ ಪಥವು ೧

ಮಲಗಿದಾಗಲೆ ಏನೋ ಕುಳಿತಾಗಲೇನೋ
ತಿಳಿದು ನೋಡಲು ನಡೆವಾಗ ನುಡಿವಾಗಲೇನೋ
ಬಲವು ಕಾರಣವಲ್ಲ ಆಗೇನೋ ಈಗೇನೋ
ಮಲ ಮೂತ್ರ ಮಾಂಸಗಳ ಮುರಿಕೆ ಮಜ್ಜೆಯಿದು ೨

ತನ್ನ ದೇಹದೊಳಿರುವ ಆತ್ಮನನು ಮರೆತಾಗ
ತಾನೆ ಆತ್ಮ ದ್ರೋಹಿ ತಾನೆ ಗುರು ದ್ರೋಹಿ
ತನ್ನ ದೇಹವ ಹೊತ್ತು ಚಿದಾನಂದ ಬೆಳಗುತಿರೆ
ತನ್ನ ಮರೆತು ಭವ ಪಾಲಹ ಪಾಪಿ ೩

## ೨೮೧

ನೋಡಿರೆ ಅಡ್ಡ ಬಂದ ಗ್ರಹಚಾರ
ಮಾಡೆ ಪಾಪವ ಮನ ಆತ್ಮಂಗೆಂಬುದು ಪ

ಕಳ್ಳ ಕನ್ನದಿ ಸಾಯೆ ಡೊಳ್ಳುಕೋಮಟಿಗನ
ತಳ್ಳಿ ಶೂಲಕೆ ಏರಿಸು ಎಂಬ ಗಾದೆ
ಜಳ್ಳು ಮನವಿದು ನಿಲದೆ ಪಾಪವನು ಮಾಡಿದರೆ
ಆ ಪಾಪ ಆತ್ಮಗೆ ಎಂದು ಊಹಿಸುವರು ೧

ಏಡಿ ಹಾದರವಾಡೆ ಗೊದರಕಪ್ಪೆಯ ಕೂಡಿ
ಎಲ್ಲರಿಗು ಕೋಳ ಹಾಕೆಂಬ ಗಾದೆ
ಮೂಢ ಮನವಿದು ತಾನು ಪಾಪವನು ಮಾಡಿದರೆ
ಆಡಲೇನದ ಆತ್ಮಗೆಂದು ಊಹಿಸುವರು ೨

ಮನವು ಎಂಬುದು ಆತ್ಮನಿಂದ ಸಂಚರಿಪುದು
ಮನವು ಆತ್ಮನೊಳು ಲಯವು ಅಹುದು
ಮನವು ಮೊದಲಿಗೆ ಸುಳ್ಳು ಪಾಪಗಳಿಹವೆಲ್ಲಿ
ಮನಕುಗೋಚರ ಚಿದಾನಂದ ಶುದ್ಧಾತ್ಮನು ೩

## ೨೮೨

ಪತ್ರ ಜಲದಂತೆ ಇಹ ಮಹಾತ್ಮರು ಬುದ್ಧಿ
ಶಿಷ್ಯಂಗೆ ಹೇಳ್ವುದು ಹ್ಯಾಗೆ
ಪತ್ರ ಜಲದಂತೆ ಇರುವವರ ವಿವರವ
ಕಂಡದ್ದಪೇಳುವೆ ತಿಳಿದ್ಹಾಗೆ ಪ

ಪರಮ ಶಿಷ್ಯರಿಗೆ ತತ್ವದ ಬೋಧೆ ಬೋಧಿಸಿ
ಪರವಾಗಿಹರದು ಹ್ಯಾಗೆ
ಹುರಿದ ಚಣಕ ತಿನಲಿಕೆ ಬಹುದಲ್ಲದೆ
ಹುಟ್ಟುವಣಿಲ್ಲದ ಹಾಗೆ ೧

ವೆಗ್ಗಳವಾಗಿಹ ತತ್ವಗ್ರಂಥವ ಹೇಳಿ
ವಸ್ತುವಾಗಿರದು ಹ್ಯಾಗೆ
ಬೊಗ್ಗೂವಡೆದ ಮಾಡಬಾಹಣವಲ್ಲದೆ
ಬೊಗ್ಗೂ ಕಟ್ಟಿಗೆಯಾದ್ಹಾಗೆ ೨

ಶಬ್ದಡಗಿದ ಚಿದಾನಂದ ಮಹಾತ್ಮರು
ಶಬ್ದವಾಡುವರದು ಹ್ಯಾಗೆ
ಶಬ್ದವು ಗವಿಯಲ್ಲಿ ಮಾಡಲು ಮಾಡುವುದು
ಶಬ್ದವೀ ಗವಿಗಿಲ್ಲದ ಹಾಗೆ ೩

## ೨೮೩

ಪಾಪ ಹತ್ತಿದೆ ಜಗಕೆ ಪಾಪ ಹತ್ತಿದೆ
ಪಾಪದೊಳಗೆ ಮಹಾಪಾಪ ಪುರುಷ
ಬೀಜಕೆ ಬಂದಿದೆ ಮೃತ್ಯು ಪ

ಅಂದು ಕೃತಯುಗದಿ ಪಾರ್ವತಿಯಾಯಿತು ಭಸ್ಮಾಸುರಗೆ
ಮುಂದೆ ತ್ರೇತಾಯುಗದಿ ಸೀತೆಯಾಗಿ ಹಿಡಿಯಿತು
ರಾವಣಂಗೆ ಮೃತ್ಯು ೧

ಹಿಂದೆ ದ್ವಾಪರಯುಗದಿ ದ್ರೌಪದಿಯಾಗಿ
ದುರ್ಯೋಧನನ ಮುರಿಯಿತು ಮೃತ್ಯು
ಇಂದು ಕಲಿಯುಗದಿ ನೋಡಲು ಇದಕೋ
ಮನೆಮನೆಗೆ ಮೃತ್ಯು ೨

ಹೆಡಕತ್ತಲಿ ಕೂತು ಹಗಲು ಇರುಳು ಕಾಯಿತಿದೆ ಮೃತ್ಯು
ಬಿಡಿಸಿಕೊಂಡು ಸ್ವರ್ಗಕೆ ಹೋದರೆ ಬೆನ್ನ
ಬಿಡದು ಅಲ್ಲಿ ಮೃತ್ಯು
ಅಡ ಶಿರೋಶಿ ಇಲ್ಲಿಗೆ ಬಂದರೆ
ಅಡರಿ ಕೊಂಬುದು ಮೃತ್ಯು ೩

ಮೃತ್ಯುಭಯವ ಬಿಡಿಸಿ ಮುಂದೆ ಕಾವರಿಲ್ಲವೋ
ಮೃತ್ಯುಂಜಯರು ಚಿದಾನಂದ ಭಕ್ತರುಂಟು
ನಂಬಿದರೆ ಮೃತ್ಯು ಮಗ್ಗುಲಲಿದ್ದರೇನು
ಮೋಹವಿಲ್ಲದಂತೆ ಮಾಡುವುದು ೪

## ೨೮೪

ಪಾಪಿಯ ನೋಡೆ ಬಡಿಸುವ ಪಾಪಿಯ ನೋಡೆ
ಪಾಪಿಯ ನೋಡೆ ಪಾಪದ ಪಿಶಾಚಿ
ಪಾಪಿಯ ಮೋರೆಯ ನೋಡಬಾರದಕ್ಕೆ ಪ

ಅನ್ನವನೀಗ ಇಷ್ಟಿಷ್ಟು ಹಾಕುವಳು ಅತ್ತಲಾಗಿ ಇಡುವಳು
ಏನು ಇಷ್ಟೆಂದು ಕೇಳಲು ಅರಿಯಿರಿ ಹೊಟ್ಟೆಯೆಂದು
ಎದುರಿಗೆ ನಿಂತೆ ಮುಸಿ ಮುಸಿ ನಗುವಳು ೧

ಆಜ್ಯವ ಹಾಕೆನೆ ಅಲ್ಲಾಡುತಲಿ ಅರಿಯಿರಿ
ಬೇಸಗೆ ಸೆಖೆ ಎಂತೆಂಬಳು
ಮಜ್ಜಿಗೆ ಹಾಕೆನೆ ಮಂದಮತಿಗಳ
ಮಹಾಶೈತ್ಯವು ಬೇಡವು ಎಂತೆಂಬಳು ೨

ಉತ್ತಮರೆಂದರೆ ಒಳ್ಳೆಯದಿಕ್ಕಳು
ಉಬ್ಬಿಸಹೋದರೆ ಉಬ್ಬದಿಹಳು
ನಿತ್ಯ ಚಿದಾನಂದ ಸತ್ಪುರುಷರಿಗೆ
ನಿಶ್ಚಯವಾಗಿ ಉಣಬಡಿಸುವಳು ೩

## ೨೮೫

ಪುಣ್ಯದ ಹಾದಿಯ ಪೇಳ್ವೆ ಪೇಳಿದಂದದಲಿರೆ
ಪುಣ್ಯಲೋಕವು ನಿನಗಣ್ಣ
ಪುಣ್ಯವ ಕೆಡುಗೊಡದಲೆ ನೀನು ನಡೆದರೆ
ಪುಣ್ಯ ಪುರುಷನಹೆಯಣ್ಣ ಪ

ಬಿಸಿಲೊಳಗಿದ್ದವರ ನೀನು ನೆರಳಿಗೆ ಕರೆದರೆ
ಬಹಳ ಸುಖವು ನಿನಗಣ್ಣ

ಹಸಿದು ಬಂದವರಿಗೆ ತುತ್ತನಿಕ್ಕಲು ನಿನಗೆ
ಅರಕೆಯಿಲ್ಲದ ಅನ್ನವಣ್ಣ ೧

ನೀರಡಸಿದವರಿಗೆ ನೀರನ್ನು ಎರೆದರೆ
ನಿನಗೆಂದು ಕಷ್ಟವಿಲ್ಲಣ್ಣ
ದಾರಿ ತಪ್ಪಿದವರಿಗೆ ದಾರಿಯ ತೋರಿಸೆ
ಧಾವತಿ ನಿನಗಿಲ್ಲವಣ್ಣ ೨

ಮನೆಯಿಲ್ಲದವರಿಗೆ ಮನೆಯ ಕೊಟ್ಟೊಡೆ
ನಿನಗೆ ಮುಂದಿಹುದು ಮನೆಯಣ್ಣ
ಇನಿತು ವಸ್ತ್ರವಿಲ್ಲದವಗೆ ವಸ್ತ್ರವನು ಕೊಡೆ
ಏನು ವಿಪತ್ತು ನಿನಗಾಗದಣ್ಣ ೩

ಬಡವರನು ಮುಂದಂತೆ ತಂದರು
ನೀನೀಗ ಬಲವಂತನಾಗುವೆಯಣ್ಣ
ನುಡಿಯಲು ಒಳ್ಳೆಯ ವಾಕ್ಯವ ನೀನೀಗ
ನೋಯದಂತಿರುವೆ ಮುಂದಣ್ಣ ೪

ವನಗುಡಿ ಕೆರೆಬಾವಿ ಧರ್ಮ ಮಳಿಗೆ ಹಾಕೆ
ಒಲಿವನು ಶಿವನು ನಿನಗಣ್ಣ
ಘನ ಚಿದಾನಂದ ಸತ್ಪುರುಷರ ಸೇರಲು
ಘಟ್ಟಿ ಮುಕ್ತಿಯು ನಿನಗಣ್ಣ ೫

## ೨೮೬

ಪುರುಷ ಪ್ರಕೃತಿಯಲ್ಲಿಹನು ಎಂತೆನೆ
ಇರುವನೀ ತೆರದಿ ಉಭಯದಲಿ ಪುರುಷ ಪ

ತಿಲದೊಳಗೆ ತೈಲ ಕಾಷ್ಟದೊಳಗೆ ಅಗ್ನಿ
ಫಲದಲಿ ರುಚಿಯು ಇದ್ದಂತೆ ಪುರುಷ ೧

ಸ್ತನದೊಳಗೆ ಕ್ಷೀರ ಕ್ಷೀರದೊಳಗೆ ಘೃತ
ಘನ ಭೇರಿಯಲಿ ನಾದ ಇದ್ದಂತೆ ಪುರುಷ ೨

ಮಣಿಗಣದಲಿಸೂತ್ರ ಮಾಲಿಕೆಯಲಿ ತಂತು
ಘನವಾದ ಘಟದಲ್ಲಿ ಬಯಲಂತೆ ಪುರುಷ ೩

ಘನದಲ್ಲಿ ಉದಕ ಗಗನದಲಿ ಮಿಂಚು
ಅನಿತು ಔಷಧಿಯಲ್ಲಿ ರಸದಂತೆ ಪುರುಷ ೪

ತೈಲಬಿಂದುವು ಉದಕದಲ್ಲಿ ವ್ಯಾಪಿಸಿದಂತೆ
ಲೋಲ ಚಿದಾನಂದ ತಾನಿಹ ಪುರುಷ ೫

## ೨೮೭

ಪ್ರತಿಮೆ ಪೂಜೆಗಳವು ಪರ–
ಮಾರ್ಥವಲ್ಲವು ಪಾಮರರಿಗೆ ಅದು ಸಾಧನವು
ಪ್ರತಿಮೆ ಪೂಜೆಯು ತಿಳಿದವರಿಗೆ
ಉತ್ತಮವಲ್ಲದ ಪರಮಾತ್ಮ ಪ್ರತ್ಯಕ್ಷ ನೀವೆನ್ನಿ ಪ

ಕಳ್ಳನು ಮನೆದೇವರನೊಯ್ಯೆ ಪ್ರತಿಮೆಯಲಿ
ಎಳ್ಳಷ್ಟು ಕರುಣ ಹಿಡಿಯಲಿಲ್ಲ
ಹುಲ್ಲು ಶುನಕ ಮನೆ ಮುಂದಿತ್ತು ಆದರೆ
ಬಲ್ಲತೊದರಿ ಮನೆಯ ಉಳುಹುವುದು ೧

ದಂಡು ಬರಲು ದೇವರನು ಹೊರು ಎಂಬರು
ಮುಂದೆ ಏನು ಕೆಲಸವಿಲ್ಲವು

ಮುಂದೆ ಉರಿಯುವುದು ಹೊತ್ತರೆ ಹಗುರವಿಲ್ಲ
ಚಂಡ ಚೈತನ್ಯಾತ್ಮ ನೀವೆನ್ನಿರಿ ೨

ಬೆಕ್ಕನೆ ಹಿಡಿದೊಯ್ಯೆ ಇಲಿಗಳ ಹಿಡಿಯುವುದು
ಬಟ್ಟೆ ಬರಿಯ ಜೋಪಾನ ಮಾಡುವುದು
ಬೆಕ್ಕು ಪ್ರಯೋಜನ ದೇವರಪ್ರಯೋಜನ
ತಕ್ಕವು ಪರಮಾತ್ಮ ನೀವೆನ್ನಿರಿ ೩

ಪ್ರತಿಮೆಗಳ ಯೋಗ್ಯವಲ್ಲ ಬ್ರಹ್ಮವಾದೀ
ಪ್ರತಿಮೆ ಎಂತು ಯೋಗ್ಯ ಪಂಚಾಳನವು
ಪ್ರತಿಮೆ ಎಂಬುವು ಜಡಬೊಂಬೆ
ಸಂಶಯವಿಲ್ಲ ಪರವಿಲ್ಲ ಪರವಸ್ತು ನೀವೆನ್ನಿರಿ ೪

ಹೊಟ್ಟೆಗಿಲ್ಲದ ಕಾಲ ತಮಗೆ ಬಂದರೆ
ಘಟ್ಟಾಗಿ ದೇವರೆ ಗತಿ ಎಂಬರು
ಶಿಷ್ಟ ಚಿದಾನಂದ ಸದ್ಗುರು ನೀವೀಗ
ಬಿಟ್ಟಿರಿ ನಾನಾ ಪರಿ ದೇವರ ೫

## ೨೮೮

ಬಹು ಚಿಂತೆಯೊಳಗಾಗಿ ನೀನು ದುಃಖಿಸಬೇಡ
ಬಹು ಕ್ಲೇಶ ಕಷ್ಟದಿ ಮುಳುಗಿ ಬಳಲಬೇಡ ಪ

ಹಿಂದೆ ನಾನಾ ಯೋನಿಯಲ್ಲಿ ಹಡಿಕೆಯೊಳು ಜನಿಸಿ ಜನಿಸಿ
ತಂದೆ ತಾಯಿ ಹೆಂಡಿರೇಸು ಲೆಕ್ಕವಾಯ್ತು ನೋಡ
ಮುಂದೆ ಬಹ ದುಃಖಕೆ ಮುಳುಗಿ ಮುಳುಗಿ ಧೈರ್ಯ ಪಡೆದು
ಮಂದ ಮತಿಯಾಗಿ ಗುರುವ ಮರೆಯಲಿ ಬೇಡ ೧

ದುರ್ಜನರ ಸಂಗ ಮಾಡಿ ದುಷ್ಟ ನಡತೆಯಲ್ಲಿ ನಡೆದು
ಸಜ್ಜನರ ಸಂಗ ನೀ ಮರೆಯಲಿ ಬೇಡ
ಜಜ್ಜುಗಟ್ಟಿ ಪಾಪಕರ್ಮ ಜರಿದು ಜರಿದು
ಜೋಕೆಯಲ್ಲಿ ಸದ್ಗುರುನಾಥ ಸ್ಮರಣೆ ಮಾಡು ೨

ಮನೆಯು ಮಕ್ಕಳೆಂಬ ಧನವು ಪಶುಗಳಲ್ಲಿ ಆಸೆಯಿಟ್ಟು
ನೆನೆಸಿ ನೆನೆಸಿ ಬಿಕ್ಕಿ ಬಿಕ್ಕಿ ಅಳಲು ಬೇಡ
ಚಿನ್ಮಯ ಚಿದಾನಂದಾವಧೂತನೊಳು ಬೆರೆತು
ಘನವನ್ನೈದಿ ಸದ್ಗುಣಾದಿ ತಿಳಿದು ನೋಡ ೩

## ೨೮೯

ಬುದ್ಧಿಯ ನಾನೇ ಹೇಳುವೆ ಎಲೆ ಎಂಗರವಟ್ಟೆ
ಬುದ್ಧಿಯ ನಾನು ಹೇಳುವೆ
ಬುದ್ಧಿಯ ನಾನು ಹೇಳುವೆ ಶುದ್ಧ ಬ್ರಹ್ಮನು ನೀನು ಎಲೆ ಎಂಗರವಟ್ಟೆ ಪ

ಹಿಂದಣ ಕುಲವು ಎಲ್ಲಿ ಎಲೆ ಎಂಗರವಟ್ಟೆ
ಹಿಂದಣ ಮತವು ಎಲ್ಲಿ ಹಿಂದಣ ಸತಿ ಎಲ್ಲಿ ಹಿಂದಣ ಸುತರೆಲ್ಲಿ
ಹಿಂದಾದುದನು ಬಿಟ್ಟು ಇಂದಿದು ನನ್ನದೆಂಬೆ ಎಲೆ ಎಂಗರವಟ್ಟೆ ೧

ಮುಂದಾವ ಜನ್ಮ ಭೋಗಿಪೆಯೋ ಎಲೆ ಎಂಗರವಟ್ಟೆ
ಮುಂದಾರ ಮದುವೆಯಹೆ ಎಲೆ ಎಂಗರವಟ್ಟೆ
ಮುಂದಣ ತಾಯಿ ಯಾರು ಮುಂದಣ ತಂದೆ ಯಾರು
ಮುಂದಣ ಹಿಂದಣದರಿಯೆ ಇಂದಿನದು ಎನ್ನದೆಂಬೆ ಎಲೆ ಎಂಗರವಟ್ಟೆ ೨

ಭಿಕ್ಷವ ಹಾಕಲಾರಿ ಎಲೆ ಎಂಗರವಟ್ಟೆ ಕುಕ್ಷಿಗೆ ತಿನ್ನಲಾರಿ
ಲಕ್ಷ ಹೊನ್ನುಗಳನ್ನು ನೆತ್ತಿಗೆ ಇಟ್ಟುಕೊಂಬೆಯಾ ಎಲೆ ಎಂಗರವಟ್ಟೆ ೩

ತನುವಿದು ತನ್ನದೆಂಬೆ ಎಲೆ ಎಂಗರವಟ್ಟೆ ತನುವನು ನೋಡಿಕೊಂಬೆ
ನಿನ್ನ ಮುಂದೆಯೇ ತನು ತಾನು ಹೋಗುವುದು
ತನುವದು ನಿನಗಿಲ್ಲ ತನು ಸಂಬಂಧವೆಂತೋ ಎಲೆ ಎಂಗರವಟ್ಟೆ ೪

ಹಿಡಿಯೋ ಗುರುಪಾದವನು ಎಲೆ ಎಂಗರವಟ್ಟೆ ಪಡೆಯೋ ಕಟಾಕ್ಷವನು
ಸಡಿಲದೇ ದೃಷ್ಟಿಯನು ತಿರುಹಿ ನಿನ್ನೊಳಗಿಟ್ಟು
ಒಡೆಯ ಚಿದಾನಂದನು ನೀನಾಗಿ ನೀನಿರು ೫

## ೨೯೦

ಬೇಗ ಮಾಡೋ ಭಕುತಿ ಆಗುವುದು ಮುಕುತಿ
ಆಗ ಈಗ ಎನ್ನದಿರು ಇದೆ ನಿನಗೆ ಮುಕುತಿ ಪ

ಧ್ಯಾನ ಹಲವ ಬಿಡು ಧ್ಯಾನ ಆತ್ಮನ ಮಾಡು
ಧ್ಯಾನ ಧಾರಣ ಸಮಾಧಿಯಂಗಳ ನೋಡು ನಿಜವ ಕೂಡು ೧

ಎಚ್ಚರ ಬಾಹಿರ ಮರೆತು ಎಚ್ಚರ ಅಂತರವರಿತು
ಎಚ್ಚರ ಬಾಹಿರ ಅಂತರ ಮರೆತು ಎಚ್ಚರ ಬೇರರಿತು ೨

ಸಾಧಿಸು ನಿತ್ಯ ಬಿಡದೆ ವಾದಕೆ ಮಯ್ಯ ಕೊಡದೆ
ಸಾಧಿಸು ನಿತ್ಯಾನಿತ್ಯಾ ವಸ್ತುವ ಸಾಧಿಸು ಗುರುವ ಹಿಡಿದೇ ೩

ಬೇರೆ ಎಂಬುದ ಮಾಣು ಎಲ್ಲವ ನಿನ್ನಲೆ ಕಾಣು ನಾ
ಬೇರೆಯೆಂಬ ಮತಿಯ ಮಾಣು ಬಳಿಕ ಜಾಣ ೪

ಬೋಧವನ್ನೇ ಹಿಡಿಯೋ ಬೋಧ ತುರೀಯ ಪಡೆಯೋ
ಬೋಧವೆನಿಪ ಚಿದಾನಂದ ಬೋಧ ಗುರಿವಿಡಿಯೋ ೫

## ೨೯೧

ಬೇಡವೀಗ ಬಾಲೆ ಸಂಗ ಕೆಟ್ಟುಹೋಗುವೆ ಇದು
ಪಾಡಲ್ಲ ಭಂಗವನು ಅನುಭವಿಸುತ
ಕಾಡ ಹಿಡಿಯುವೇ ಹುಟ್ಟುಗೆಡುವೆಯಲ್ಲೊ ಪ

ಸತ್ಯವದು ನಾರಿದೋಷ ಮೃತ್ಯುವಲ್ಲೋ ಯಮ
ನಿತ್ಯದಲಿ ಎತ್ತಿರುವ ಕತ್ತಿಯಲ್ಲೋ ಆತ್ಮ–
ಹತ್ಯವಲ್ಲೋ ಅಪಥ್ಯವಲ್ಲೋ ೧

ನಾರಿ ಮುಖವು ತಿಳಿದವಗೆ ನರಕವಲ್ಲೋ ಇಷ್ಟು
ಮರುಕವಂತು ಕಾಲಗೆ ದೊರಕದಲ್ಲೋ ದೊಡ್ಡ
ಫರಕು ಎಲ್ಲೊ ಕೆಟ್ಟ ಸರಕು ಎಲ್ಲೋ ೨

ಶಿಷ್ಟಾಶಿಷ್ಟರೆಂಬವರು ಕೆಟ್ಟರಲ್ಲೋ ಬಲು
ಗಟ್ಟಿ ತವಸಿಗಳು ಮತಿಗೆಟ್ಟರಲ್ಲೊ ಕಂ–
ಗೆಟ್ಟರಲ್ಲೋ ಘಾಸಿಪಟ್ಟರಲ್ಲೋ ೩

ಧಾರಣೆಯು ಧ್ಯಾನಮೌನ ಹಾರಿತಲ್ಲೋ ಕಾಮ
ಕೂರ್ಗಣೆಗಳು ಮೊನೆದೋರಿತಲ್ಲೋ ಮನೆ
ಹಾರಿತಲ್ಲೋ ಧೈರ್ಯತೂರಿತಲ್ಲೋ ೪

ನಾರಿಯವಳು ನಿನ್ನ ಗತಿಗೆ ಮಾರಿಯಲ್ಲೋ ಗುರು
ವೀರ ಚಿದಾನಂದನನ್ನು ಸೇರು ಎಲ್ಲೋ
ಪರಿಹಾರವೆಲ್ಲೊಲ್ಲೋ ಮುಕ್ತಿ ಸಾರೆ ಎಲ್ಲೋ ೫

## ೨೯೨

ಬೇಡವ್ವೋ ಸ್ತ್ರೀಯರ ವಶದಲಿ
ಬಿದ್ದು ಭವಕೆ ಬೀಳಲಿ ಬೇಡ ಪ

ಒನಪುಗಳ ಸುಳ್ಳು ವಾಲಿಗಲು ಸಟೆ
ವೈಯ್ಯಾರ ನಚ್ಚಲಿ ಬೇಡ ೧

ಮೋರೆ ಮುರುಕಿ ಪದಮೂಗ
ನೇರಿಸುವುದು ಮುಸುಕನು ನೀ ನಚ್ಚಬೇಡ
ಸೀರೆಯನೊಲೆಯುವುದು ಸೆರಗನು ಸಡಿಲಿಪ
ನಾರಿಯ ನಂಬಲು ಬೇಡ ೨

ನರಕದ ಕುಂಡವು ನಾರಿಯೆಂಬವಳು
ಸತ್ಯ ನೋಡುತ ನೀ ಬೀಳಬೇಡ
ಕರುಣಿ ಚಿದಾನಂದ ಕಟಾಕ್ಷವನು ಪಡೆ
ಕಾಲಗೆ ನೀ ಸಿಕ್ಕಬೇಡ ೩

## ೨೯೩

ಬ್ರಹ್ಮಜ್ಞಾನಿಗಳ ನೋಡಿರೊ ಇಹ್ಹಿಹ್ಹಿ
ಬ್ರಹ್ಮಜ್ಞಾನಿಗಳ ನೋಡಿರೋ ಪ

ಜ್ಞಾನಿಗಳು ತಾವು ಅಂತೆ ತಾವೇ ಪರಬ್ರಹ್ಮರಂತೆ
ಏನೋನೋ ಹುಚ್ಚುಮಾತು ಕೇಳಿರಯ್ಯ ಅಹ್ಹಹ್ಹ ೧

ಜೊಂಡು ಹುಲ್ಲಿನಂತೆ ಮಂಡೆಗಳ ಬೆಳೆಸಿಕೊಂಡು
ಕಂಡ ಕಂಡಂತೆ ತಿರುಗುವವರ ನೋಡಿರಯ್ಯ ಅಹ್ಹಹ್ಹ ೨

ಸಂಧ್ಯವಿಲ್ಲ ಸ್ನಾನವಿಲ್ಲ ಮುಂದೆ ಹೋಮ ತರ್ಪಣವಿಲ್ಲ
ಅಂದು ತಾವೇ ಬ್ರಹ್ಮವಂತೆ ಕಂಡಿರೇನೋ ಅಹ್ಹಹ್ಹ ೩

ಕಾವಿ ಕೌಪವುಟ್ಟುಕೊಂಡು ಕಮಂಡಲು ಹಿಡಿದುಕೊಂಡು
ದೈವ ತಾನೇ ಎಂಬ ದೈವಗಳ ನೋಡಿರೋ ಅಹ್ಹಹ್ಹ ೪

ಇಂತು ಚಿದಾನಂದ ಗುರು ಭಕ್ತರಗಳ ನಿಂದ್ಯಮಾಡಿ
ಅಂತು ಕಾಲನ ಅರಮನೆಯ ಕುರಿಗಳಾದರಹ್ಹಹ್ಹ ೫

## ೨೯೪

ಬ್ರಹ್ಮವೆತ್ತಲು ಪರಬ್ರಹ್ಮವೆತ್ತಲು
ಬ್ರಹ್ಮ ತಾವೆಯೆಂದು ವಾಚಾ
ಬ್ರಹ್ಮವನೆ ಬಗಳುತಿಹರಿಗೆ ಪ

ಆಸೆಯೆಂಬದು ಅಳಿಯಲಿಲ್ಲ ಆಕಾಂಕ್ಷೆತಾ ಕಳೆಯಲಿಲ್ಲ
ಪಾಶವೆಂಬುದು ಬಿಗಿದು ಉರುಲು ಬಿದ್ದಿಹುದು
ದೋಷವೆಂಬುದು ಅಡಗಲಿಲ್ಲ ದುಷ್ಕೃತವೆಂಬುದು ಒಣಗಲಿಲ್ಲ
ಕ್ಲೇಶ ಪಂಚಕದ ವಿಷಯದಿ ಕೆಡೆದಿಹ ಮನುಜರಿಗೆ ೧

ಕಾಮವೆಂಬುದು ಕಡಿಯಲಿಲ್ಲ ಕ್ರೋಧವೆಂಬುದು ಅಳಿಯಲಿಲ್ಲ
ತಾಮಸವೆಂಬುದು ಶರೀರ ತುಂಬಿಕೊಂಡಿಹುದು
ಕಾಮಿತವೆಂಬುದು ಹೋಗಲಿಲ್ಲ ಕಷ್ಟವೆಂಬುದು ನೀಗಲಿಲ್ಲ
ಪಾಮರರಾಗಿ ದಾಹಕೆ ಸಿಕ್ಕುಬಿದ್ದಿಹ ಮನುಜರಿಗೆ ೨

ಮೋಹವೆಂಬುದು ಹರಿಯಲಿಲ್ಲ ಮೂರ್ಖತೆಯೆಂಬುದು ಕರಗಲಿಲ್ಲ
ಊಹೆ ಎಂಬ ಕುಬುದ್ಧಿಯು ಉಡುಗಲಿಲ್ಲ
ದೇಹ ಶೋಧನೆ ತಿಳಿಯಲಿಲ್ಲ ದೇಹಿ ಚಿದಾನಂದ ಅರಿಯಲಿಲ್ಲ
ಕಾಹುರ ಮದದಲಿ ಮರೆತಿಹ ಮಂಕುವನು ಮನುಜರಿಗೆ ೩

## ೨೯೫

ಭಕ್ತಿಯು ಸುಲಭ ತಾನಲ್ಲ ನಿಜ
ಭಕ್ತಿ ದೊರಕಲವಗಾಗುವುದು ಎಲ್ಲ ಪ

ಎಲ್ಲ ಸಂಗವ ಬಿಡಬೇಕು ತಾನು
ಬಲ್ಲ ಗುರುವ ಸೇವೆ ಮಾಡಬೇಕು
ಎಲ್ಲಕೆ ತಾನಿರಬೇಕು ಭಕ್ತಿ
ಬಲ್ಲವನಿಂದ ನಿತ್ಯದಿ ಹೆಚ್ಚಬೇಕು ೧

ಹೇಳಿದಲ್ಲಿಗೆ ಹೋಗಬೇಕು ಮನ
ಕೇಳದಿರಲು ಬುದ್ಧಿಯ ಹೇಳಬೇಕು
ಕಾಳರಾತ್ರೆಯೆನ್ನದಿರಬೇಕು ನಿತ್ಯ
ಬಾಲಕನಂತೆ ತೋರುತಲಿರಬೇಕು ೨

ಹಸಿವು ತೃಷೆಯ ಬಿಡಬೇಕು ತಾನು
ಎಸಗಿ ಗುರುಸೇವೆ ಮಾಡಬೇಕು
ಬಿಸಿಲು ಮಳೆ ಎನ್ನದಿರಬೇಕು ಧೈರ್ಯ
ವೆಸಗಿ ಭಯಕೆ ಬೆಚ್ಚದಲಿರಬೇಕು ೩

ಗುರುವಿನನಡೆ ನೋಡಬೇಕು ಆ
ಗುರುವಿನ ನಡೆಯ ಕಂಡಂತಿರಬೇಕು
ಕರಣ ವಿಷಯ ಹೋಗಬೇಕು ನಿತ್ಯ
ಭರಿತವಾನಂದವಾಗಿರಬೇಕು ೪

ಇಂತು ಎಲ್ಲ ಕಾಂಬವನು ಗುರು
ಚಿಂತಾಯಕನು ಚಿದಾನಂದನು ತಾನು
ಸಂತೈಸಿ ಕರವ ನೀಡುವನು ಏ–
ನೆಂತು ಪೇಳಲಿ ತನ್ನೊಳೆರಕ ಮಾಡುವನು ೫

## ೨೯೬

ಭರಬರನೆ ಬಾಜಾರಕೆ ನಾ ಬಂದೆನಯ್ಯ
ಚಿದಾನಂದನ ಮರೆಯಲಿಕೆ ಪ

ಐವರು ಗೌಡರು ಕಟ್ಟಿದ ಪೇಟೆ ಆ ಪೇಟೆಗೆ
ಐದು ನಾಲ್ಕು ಬಾಗಿಲುಗಳು
ಐದು ಮಂದಿ ಸೆಟ್ಟರು ಸೇರಿಹರು ಆವರಲ್ಲಿಯೆ
ಐದು ಮಂದಿ ಚಲವಾದಿಗಳು ೧

ಸೂರ್ಯನ ಬೀದಿ ಚಂದ್ರನ ಬೀದಿ ಬಾಜಾರವಿದೆ
ಸಾರೆ ಸಾರೆ ಮಳಿಗೆ ಇದ್ದಾವೆ
ಬಾರದ ಗಿರಾಕಿ ಬರುತಿಹನು ಈ
ನೆರೆವುದಕ್ಕೆ ವಾರದ ಭಾರ ನೇಮಲ್ಲಿದೆ ೨

ತಡುಗರೆಂಬವಾಲೆ ಶೆಟ್ಟಿಗಳೆ ಅಲ್ಲಿಗಲ್ಲಿಗೆ
ಪಡುವಲ ಕೋರಿ ಶೆಟ್ಟಿಗಳೇ
ಕಡುಕರ್ಮಿ ಕೋಮಟಿ ಶೆಟ್ಟಿಗಳೇ ಬಾಯಿ ಘನವಾಗೆ
ಬಡಬಡಿಪ ಪಟ್ಟಣ ಶೆಟ್ಟಿ ೩

ಪಾಪವೆಂಬ ವಸ್ತ್ರದಂಗಡಿಯೇ ನಾ ನೋಡಲಾಗಿ
ತಾಪವೆಂಬ ಜವಳಿ ಅಂಗಡಿಯೆ
ಕೋಪವೆಂಬ ಕುಪ್ಪಸ ದಂಗಡಿಯೇ
ಒಪ್ಪುತಲಿರೆ ಕಾಪಥವೆಂಬ ಸಕಲಾತ್ಮಂಗಡಿಯೇ ೪

ಚಿ, ಛೀ ಎಂಬ ಚಿಕ್ಕ ತಕ್ಕಡ ಗಂಡಿಯೆ ನಾ ಬರುತಿರೆ
ನಾಚಿಕೆಯಿಲ್ಲದ ಕಂಚಿನಂಗಡಿಯೇ
ಚು ಛೂ ಎಂಬ ಚೀನಿಯಂಗಡಿಯೇ ಯಡಬಲದಲ್ಲಿ
ಕೋಚು ಮಾಡೋ ಉದ್ದಿನಂಗಡಿಯೇ ೫

ತನು ವ್ಯಸನವೆಂಬ ತಾಡಪತ್ರಿ ತೋರಲಾಗಿ
ಮನವ್ಯಸನವೆಂಬ ಕಿಂಕಾಪು
ಧನವ್ಯಸನವೆಂಬೋ ಮಖಮಲ್ಲು ನಾ ಬೆರಗಾಗೆ
ಜನ ವ್ಯಸನವೆಂಬೋ ಜರತಾರಿಯೇ ៦

ನಾನಾ ವಿಷಯ ವೆಂಬೋ ಉತ್ತತ್ತಿ ಅಲ್ಲಿದ್ದಾವೆ
ಜ್ಞಾನಶೂನ್ಯ ಜಾಜಿಕಾಯಿ
ಮಾನ ಹಾನಿಯೆಂಬೋ ಜಾಪತ್ರಿ
ನಾನು ನನ್ನದು ಎಂಬ ಭಂಗಿ ಸೊಪ್ಪು ೭

ಜೀವನೆಂಬ ಹೊಗೆಯ ತೊಪ್ಪಲೇ ಹಿರಿಯವಾದ
ನೋವು ಕಷ್ಟಗಳೆಂಬ ಗಾಂಜಿಯೇ
ಸಾವು ಬದುಕು ಎಂದೆಂಬ ಮಾಲೆಗಳೇ ಮಾರುತಲಿತ್ತೋ
ನಾನು ನೀನು ಎಂಬ ಚಿಲುಮೆಗಳೋ ೮

ಭೇದವೆಂಬ ನಿಲುವುಗನ್ನಡಿಯೆ ಒಳಗಿದ್ದಾವೆ ವಾದವೆಂಬ
ವಜ್ರದಹರಳೇ ಹಾದಿ ಕಾಣೆನೆಂಬ ಹವಳದ
ರಾಶಿಯೇ ಹರಡಿದ್ದಾವೆ
ಗಾದೆ ಎಂಬ ಸೂಜಿದಬ್ಬಣವೇ ೯

ಪ್ರಾರಬ್ಧವೆಂಬೋ ಉಂಬತಳಿಗೆಯೇ ಪಸರಿಸುತಿರುವ
ಘೋರ ತಾಪತ್ರಯದ ತಟ್ಟೆಯೇ
ನಾರಿ ನೋಟೆಂಬ ಕಠಾರಿಯೇ ನಿಲಿಸಿದ್ದಾವೆ
ಸೂರಿಯ ಸುಕೃತವೆಂಬೋ ತುಬಾಕಿಯೇ ೧೦

ಪರಿಣಾಮಿಲ್ಲದ ಪಡವಲಕಾಯಿ ದಾರಿಯಲಿ
ದಾರಿಯಿಲ್ಲದ ದೊಡ್ಡಿಲಕಾಯಿ
ಅರಿವಿಲ್ಲದ ಕುಂಬಳಕಾಯಿ ಹಾಗಿದ್ದಾವೆ
ಮರುಳು ಎಂಬ ಮಾವಿನಕಾಯಿ ೧೧

ಮಂಠ ಎಂಬೋ ಮೆಂತ್ಯ ಪಲ್ಲಯೇ ಮಾಸಲವಿತ್ತೆ
ಕಂಟಕ ಎಂಬೋ ಹರಿವೆ ಪಲ್ಲೆಯೇ
ಕೊಂಟೆಯೆಂಬೊ ಬಸಲೆ ಪಲ್ಲೆಯೇ ತೀವ್ರದಲಿತ್ತೆ
ಶುಂಠವೆಂಬೋ ಬೆರಕೆ ಪಲ್ಲೆಯೇ ೧೨

ಬಂಗಾರವೆಂಬೋ ಬಿಳಿಯ ಜೋಳವೇ ಬೆಡಗಿಲಿರೇ
ರಂಗು ಎಂಬೋ ರಾಗಿ ರಾಶಿಯೇ
ಸಂಗವೆಂಬೋ ಸಣ್ಣಕ್ಕಿಯೇ ಸಾರಿದ್ದಾವೆ
ಹಿಂಗದೀಪರಿ ದಿವಾರಾತ್ರಿಯೇ ೧೩

ಸಂಕಲ್ಪೆಂಬೋ ಧಾರಣೆ ಹಚ್ಚಿರೋ ಸಂಗಾತಲೆ
ವಿಕಲ್ಪೆಂಬೋ ಧಾರಣೆಯಿಳಿವುದೇ
ಸುಖದುಃಖವೆಂಬೋ ಮಾರಾಟವೇ ಸಾಗಿರಲಾಗಿ
ಕಾಕಧಾವಂತರ ಸಂಧಾನವೇ ೧೪

ಕಾಮಕ್ರೋಧಗಳೆಂಬ ಕಳ್ಳರೇ ಕಾವಲಿರ್ದು
ರಾಮನೆಂಬ ಸ್ಮರಣೆ ಕದ್ದಿಹರೋ
ಕಾಮುಕರೆ ತಿರುಗಾಡುವರೆಲ್ಲ ಕಾಣದ ಹಾಗೆ
ಆ ಮಹಾಜ್ಞಾನವ ಸುಲಿದಿಹರೋ ೧೫

ಬರಬಾರದ ನಾನು ಬಂದೆನೇ ಬಾಜಾರ ಬಿಟ್ಟು
ಹೊರಡುವ ತೆರನ ಕಾಣೆನೇ
ಕರುಣೆಯಾಗಿ ಕೈ ವಿಡಿವರಾರೋ
ಕರುಣಾಕರ ಹರ ವಿಶ್ವೇಶನೇ ಬಲ್ಲ ೧೬

ಚಿಂತೆ ನಾನು ಮಾಡುತಿರಲಾಗಿ ಚಿದಾನಂದ
ಚಿಂತೆ ಬೇಡೆಂದು ಮುಂದೆ ನಿಂದಿಹನು
ಚಿಂತೆ ಬಿಡು ಕಾವಲಿಹೆನೆಂದು ಚಿದ್ರೂಪ ತೋರಿ
ಎಂತು ಪೇಳಲಿ ಎನ್ನೆದುರು ನಿಂದಿಹನೆ ೧೭

## ೨೯೭

ಮಕ್ಕಳಿಂದಲೆ ಗತಿಯು ಎಂಬುದೇನಿರಯ್ಯ
ಮಕ್ಕಳಿಲ್ಲದವರಿಗೆ ಗತಿಯಿಲ್ಲವೇ ಪ

ಸತ್ಯ ಶೌಚಾಚಾರ ಶಮೆದಮೆಗಳಳವಟ್ಟು
ನಿತ್ಯ ಕಾಲದಿ ಹರಿಯ ಮನದಿ ನೆನೆದು
ಅತ್ಯಂತ ಸಂತುಷ್ಟನಾದರಿಂದಲ್ಲದಲೆ
ಹೆತ್ತವರಿಂದ ಗತಿಯು ಎಂಬುದು ನಗೆಯಲ್ಲವೇ ೧

ಅಣುಮಹತ್ತಿಲಿ ಶುಚಿಯು ಅಶುಚಿಯಾಗಿಪ್ಪಂಥ
ಎಣಿಕೆ ಎಲ್ಲವನು ತಾಯೆನಿಸಿ ತಿಳಿದು
ತ್ರಿಣಯನಾಗಿಹೆನೆಂದು ತಾನೆ ತಾನಾಗದಲೆ
ಕ್ಷಣಿಕ ಸುತರಿಂ ಗತಿಯು ಎಂಬುದು ನಗೆಯಲ್ಲವೆ ೨

ಸ್ನಾನ ಜಪತಪ ತಿಲೋದಕ ಶ್ರಾದ್ಧ ತರ್ಪಣದ
ಕ್ಷೀಣ ಕರ್ಮಗಳಿಂದ ಮುಕುತಿಯಹುದೇ
ಮಾನನಿಧಿ ಚಿದಾನಂದ ಗುರುಪಾದ ಪದ್ಮವನು
ನ್ಯೂನವಿಲ್ಲದೆ ನಂಬಿ ಸುಖಿಯಾದರಲ್ಲವೆ ೩

## ೨೯೮

ಮಗನೇ ಅವನೀಗ ತಾನೇಕೆ ಸುಡಲಿ ಮಾತ್ರುವ ಬಳಲಿಪ
ಮಗನೇ ಅವನೀಗ ತಾನೇಕೆ ಸುಡಲಿ
ಮಗನಿಗೆಂತೆಂದು ಹೇಳಿಯೆ ಕೊಂಬ ಮ–
ಲಗುವಳ ಮರಳೆಗೆ ನಾನೇನೆಂಬೆ ಪ

ಮಡದಿಯ ಎತ್ತರಕೇರಿಸಿಹ ಹಡದ ತಾಯಿಗೆ
ಝಡಿವ ಗಂಟುಗಳನೇ ಹೊರಿಸಿಹ ಹುಡುಗರ ಕೊಟ್ಟಿಹ

ತುಡುಗ ರಂಡೆಮಗಳೋಡೋಡಿ ಬಾಯೆಂದು
ಬಿಡು ಮಾತುಗಳಿಂದ ಬೈಯುತಲಿ ೧

ಒಳ್ಳೆಯದನು ತಾನುಣುತಲಂದು ನುಚ್ಚನು ನುರಿಯನು
ಕಲ್ಲಗಡಿಗೆಯೊಳು ಕುದಿಸಿಕೋ ಎಂದು ಕೆಕ್ಕರಿಸು-
ತಲಂದು ಹಲ್ಲ ಕಿಸುವಳಿಗೆ ಜರಿಯ ಸೀರೆಯನುಡಿಸಿ
ಝಲಕ ಬಟ್ಟೆಯ ಹಚ್ಚಿಕೋ ಎಂಬ ೨

ಮಂಚವು ಲೇಪುಗಳು ತಮಗೆ ತಮ್ಮಮ್ಮನಿಗೆ
ಕಿಂಚಿತು ದುಪ್ಪಟಿ ಕೆಳಗೆ ಹೊರಬರಕಲ್ಲೊಳಗೆ
ಮಿಂಚುವ ಚಿದಾನಂದ ಸದ್ಗುರುನಾಥನು
ಪಂಚಮ ಪಾತಕಿ ನಿನಗೆಂತೊಲಿವನು ೩

## ೨೯೯

ಛೀ ಛೀ ಛೀ ಛೀ ಮೂಳಿ ನಾಚಿಕೆ ಇಲ್ಲದ ಹಾಳಿ
ನೀಚ ಮನುಜರೊಡನೆ ಆಡಲುಬಂತು ಮೂರ್ಖ ಮೂಳಿ ಪ

ಸಜ್ಜನ ಸಂಗವ ಬಿಟ್ಟೆ ನೀದುರ್ಜನಕೆ ಮನವಿಟ್ಟೆ
ಜಜ್ಜಿಗುಟ್ಟಿದೆ ಪೂರ್ಣ ಆಯುಷ್ಯ ಸುಕೃತ ಮಾರ್ಗವ ಸುಟ್ಟೆ ೧

ಎಲ್ಲಿ ಸತಿಯು ಸುತರು, ಮತ್ತೆಲ್ಲಿ ಪತಿಯು ಪಿತರು
ಯಮನು ವೈಯ್ಯುವಾಗ ಬಹರೆ ಸರ್ವಹಿತರು
ಗುರುವಿನ ಪಾದವ ಹೊಂದು ನೀ ೨

ಮರೆಯದಿರು ಮಾತೆಂಬೂ
ಗುರು ಚಿದಾನಂದನು ತಾನೆ ಎನಲು ಹೋಹುದು ಭವವುಹಿಂದು ೩

## ೩೦೦

ಮದನನಗೇಹ ಸುಖ ಮರಣ ಸುಖ
ಮದನನ ತೊತ್ತಿನ ಮಕ್ಕಳಾಗ ಬೇಡಿರೋ ಪ

ಸ್ತ್ರೀಯರೂಪವ ಕಂಡು ಸೈರಿಸದೆ ಕಳಕಳಿಸಿ
ಸುಯ್ಗರೆದು ಶರೀರವು ಬೆವರೇರುತ
ಕೈಕಾಲ್ಗಳಿಗೆ ನಡುಕ ಹುಟ್ಟಿ ಕಾಮ ಶರಕೆ ಮೈಯನಿತ್ತು
ಕೊಯಿಸಿಕೊಳ್ಳುವ ಕೊರಳ ನಿತ್ಯದಿ ಕಷ್ಟದಿ ಸುಖವು ೧

ಮುಖ ಕಾಂತಿಯ ನೋಡಿ ಮೋಹದಲಿ ಮುಳುಗಾಡಿ
ಸುಖವೆಂದು ಬಗೆಯುತ ಸಂಗಯೋಗದ
ಕಕುಲಾತಿಪಡುತಲಿ ಕೆಡೆದುತಾಪದಿ ಹೊರಳಿ
ಬಕಧ್ಯಾನದಲಿ ತನ್ನ ನಿಜಸುಖವ ಮರೆವ ೨

ಅವಯವಗಳ ನೋಡಿ ಆಶ್ಚರ್ಯವನೆ ಪಟ್ಟು
ತವಿಸಿ ಇಂದ್ರಿಯ ದ್ವಾರತವಿಸುತಲಿ
ಖವಿಖವಿಸಿ ನಗುತಲಿ ನಿಜದಾರಿಯನು ಬಿಟ್ಟು
ಭುವನ ಪತಿ ಚಿದಾನಂದ ಕಾಣದ ಸುಖವು ೩

## ೩೦೧

ಮನುಜ ಕೇಳೋ ಮನುಜ ಕೇಳೋ
ಮನುಜ ಕೇಳೆನ್ನ ಮಾತನು ಮುಕ್ತನಾಗುವಿ ಪ

ವೇಸಿಯ ಮೇಲಿಹ ವಾಸನೆ ತೊಲಗಿಸು
ಮೀಸಲ ಮನವಿಡು ಈಶ ನೀನಾಗುವಿ ೧

ವಿಷಯಂಗಳಲಿ ನೀ ಬಯಸಿ ಬಿದ್ದ ತೆರ
ಹುಸಿಯದೆನ್ನನು ಹೊಂಧುಹರನು ನೀನಾಗುವಿ ೨

ಸುದತಿಯ ಸುತರನು ನಿತ್ಯ ನೀ ನೀ ನಂಬದೆ
ಚಿದಾನಂದನ ಹೊಂದು ಮುಕ್ತ ನೀನಾಗುವಿ ೩

## ೩೦೨

ಮಹಾಪುರುಷನೆತ್ತ ತಾನೆತ್ತ
ಮಹಾಪುರುಷರ ಶ್ರೇಷ್ಠವೇನೆಂದು ಅರಿಯನು ಪ

ಕುದುರೆ ತಾನಹೆನೆಂದು ಕತ್ತೆ ಬೀದಿಯೊಳು ನಿಂತು
ಕುದುರೆ ಕುಣಿತವನು ಕುಣಿದ ತೆರದಿ
ವಿಧವಿಧದ ಓದುವೋದಿ ಮಹಾಪುರುಷನಹೆನೆಂದರೆ
ಸದಮಲಾನಂದರ ಸರಿತಾನು ಬಹನೇ ೧

ಹುಲಿಯು ತಾನಹೆನೆಂದು ಹುರುಡಿರಿಗೆ ನರಿ ಮೈಯ್ಯ
ಬಲವಂತದಿ ಸುಟ್ಟುಕೊಂಡ ತೆರದಿ
ಹಲವು ಶಾಸ್ತ್ರವನೋದಿ ಮಹಾಪುರುಷನಹೆನೆಂದರೆ
ಬಲು ಮಹಾತ್ಮರ ಸರಿತಾನು ಬಹನೇ ೨

ಮಹಾಪುರುಷನೆಂಬಾತ ಮಹಾಸಮಾಧಿಯಲಿ ಮುಳುಗಿ
ಮಹಾ ಚಿದಾನಂದ ಗುರು ತಾನಾಗಿ ಇಹನು
ಮಹಾಪುರುಷತಾನೆಂದು ಕಾಪುರುಷ ಪೇಳಿದಡೆ
ಮಹಾಪುರುಷ ಸರಿತಾನು ಬಹನೇ ೩

## ೩೦೩

ಮಾಡುಸಂಸಾರ ಅಂಟದಂದದಿ ಮನುಜ
ಮಾಡಿದರೆ ಸತ್ಪುರುಷರೊಳಗೆ ನೀ ಕುಲಜ ಪ

ಜಾರೆ ಹೆಂಡತಿಯಾಗೆ ಮನಸಿಗೆ ತರಬೇಡ
ಆರಾದರಭಿಮಾನ ಹಚ್ಚಿಕೊಳಬೇಡ
ಶರೀರ ನಿನ್ನದು ಈಗ ಎಂದು ಎನಬೇಡ
ನೂರು ದೂಷಣವಾಡೆ ನೋಯಬೇಡ ೧

ಎನ್ನ ಮನೆ ಪಶು ಬಂಧು ಇಂದೀಗ ಬೇಡ
ಅನ್ಯರನು ಬೇರೆಯವರೆಂದು ನುಡಿಬೇಡ
ಭಿನ್ನ ಪರಮಾತ್ಮನೆಂದು ಜಗವ ಕಾಣಲು ಬೇಡ
ನೀ ಬ್ರಹ್ಮೆಂಬುದನು ಮರೆಯಬೇಡ ೨

ಮಾಡಬೇಕೆನಿಸಿದರೆ ಸಂಸಾರವನು ಮಾಡು
ಕೂಡಿದರೆ ಹತ್ತುವುದು ನಿನಗೆ ಭವಕೇಡು
ಪೀಡೆಯಿದು ಮಮತೆಯ ಬಿಟ್ಟು ಬೆರದಾಡು
ಗೂಢ ಚಿದಾನಂದ ನೀನಹುದಲ್ಲವೇ ನೋಡು ೩

## ೩೦೪

ಮಾಯೆಯ ಮಹಾ ಸರೋವರದೊಳಗೆ ಕಡೆ
ಹಾಯ್ದವರೊಬ್ಬರನು ಕಾಣೆ ಪ

ಹರಿ ತಾ ಮುಳುಗಿದ ಹರ ತಾ ಮುಳುಗಿದ
ಹಂಸವಾಹನನು ಮುಳುಗಿದನು
ಸುರಪತಿ ಮುಳುಗಿದ ಶಿಖಿ ತಾ ಮುಳುಗಿದ
ಸುರಾಸುರರು ತಾ ಮುಳುಗಿದರು ೧

ಸೂರ್ಯನು ಸುಧಾಂಶುಮುಳುಗಿದ ನವಗ್ರ
ಹರೆಲ್ಲ ಮುಳುಗಿದರು
ಶೂರನು ಮುಳುಗಿದ ಷಂಡನು ಮುಳುಗಿದ ಸ-
ಚರಾಚರರೆಲ್ಲ ಮುಳುಗಿದರು ೨

ಭಾಗ್ಯನು ಮುಳುಗಿದ ಬಡವನು ಮುಳುಗಿದ
ಬಹುದರಿದ್ರನೂ ಮುಳುಗಿದನು
ಯೋಗ್ಯರು ಚಿದಾನಂದ ಭಕ್ತರು
ತಾವು ಕಂಡು ಮಾತ್ರ ಮುಳಗಲಿಲ್ಲ ೩

## ೩೦೫

ಮಾಯೆಯು ಎಂತಿಹುದೆಂಬೆಯ ಮಗನೆ
ಮಾಯೆಯು ಸ್ತ್ರೀಯೇ ಮಾಯೆ
ಮಾಯೆಯ ಗುರು ಕರುಣದಿ ತಾಗೆ ಅದರೆ
ಮಾಯೆಯೆಲ್ಲವೂ ನಿರ್ಮಾಯೆ ಪ

ಎಸಳಿನ ಕಂಗಳ ಓರೆನೋಟಕೆ
ಎದೆಗುಂದುವುದೇ ಮಾಯೆ
ಮುಸುಕನೇ ಹಾಕಿ ಹಲ್ಲನು ತೆರೆಯಲು
ಮುಂದುಗೆಡಿದುವುದೇ ಮಾಯೆ
ಕುಸುಮದ ಸೂಡಿದ ಮುಡಿಯಾಭಾವಕೆ
ಕುಸಿಯುತಲಿಹುದೇ ಮಾಯೆ
ಮುಸಿ ಮುಸಿ ನಗುತ ಮುದ್ದು ಮಾತಾಡಲು
ಮರುಳಾಗುವುದೇ ಮಾಯೆ ೧

ಚೆಳ್ಳು ಪುಳ್ಳು ಎಂದೆಂಬ ಅಂದುಗೆಗೆ
ಚಿತ್ತುಡುಗುವುದದೇ ಮಾಯೆ
ಬಳ್ಳಿಯ ತೆರದಲಿ ಬಳುಕುವ ತನುವಿಗೆ

ಬಾಯಿ ಬಿಡುವುದೇ ಮಾಯೆ
ಮೆಲ್ಲನೆ ಹೆಜ್ಜೆಗೆ ಜಗ್ಗುವ ನಡಿಗೆಗೆ
ಮರುಗುತಲಿಹುದೇ ಮಾಯೆ
ಗಲ್ಲದ ನುಣುಪಿಗೆ ಚಿಬುಕದ ಸಿರಿಗೆ
ವಶವಾಗುವುದೇ ಮಾಯೆ ೨

ಮೋರೆಯ ಮುರುಕಿಸೆ ಹುಬ್ಬನು ಏರಿಸೆ
ಮುಳುಗಿಹೋಗುವುದೇ ಮಾಯೆ
ತೋರ ಹರಡಿಯ ತಿರುಹುವ ಬಗೆಗೆ
ದೃಢಗೆಡುವುದೆ ಮಾಯೆ
ಸೀರೆ ಸಿಂಗಾರಕೆ ಒಲವು ಒಯ್ಯಾರಕೆ
ಸಿಕ್ಕಿಹೋಗುವುದೇ ಮಾಯೆ
ಹಾರವ ಎತ್ತಿ ಎದೆ ಬದಿ ತೋರಿಸೆ
ಹುಚ್ಚನಾಗುವುದೇ ಮಾಯೆ ೩

ಕಂಚುಕಿ ತೆರೆದು ನಡುವನು ಸಡಿಲಿಸೆ
ಕಾಲುಡುಗುವುದೇ ಮಾಯೆ
ಚಂಚಲ ದೃಷ್ಟಿಯ ಆಲಿಯ ಹೊರಳಿಸೆ
ಚೇತನಗುಂದುವುದು ಮಾಯೆ
ಗೊಂಚಲ ನಾಗೋತ್ತರ ಚಳತುಂಬಿಗೆ ಮಾರು
ಹೋಗುವುನೇ ಮಾಯೆ
ಮಿಂಚುವ ಮೋರೆಯ ಮೀಟಿನ ಬಣ್ಣಕೆ
ಮುಳುಗಿಯಾಡುವುದೇ ಮಾಯೆ ೪

ಸತಿಯಿಂದಲಿಸುತ ಸುತನಿಂದಲಿ ಸೊಸೆ
ಸರಗೊಳಿಸುವುದೇ ಮಾಯೆ
ಮಿತಿಯಿಲ್ಲದೆ ವಾಸನೆಯಲಿ ಜನ್ಮವ
ಮುಂದುವರಿಸುವುದೇ ಮಾಯೆ
ಪಥಗಾಣದೆ ಅನಂತ ಯೋನಿಯಲಿ
ಪುಡಿಯಾಗುವುದೇ ಮಾಯೆ

ಚಿದಾನಂದನ ತಿಳುವಿಗೆ ಮುಳುಗಿಸಿ
ಪಸರಿಸಿ ಇಹುದೆ ಮಾಯೆ ೫

## ೩೦೬

ಮುಕ್ಕ ನಿನ್ನ ನಡತೆ ನೋಡೋ
ಮುಕ್ಕ ನಿನ್ನ ನಡತೆ ನೋಡೋ
ತಕ್ಕ ಯಮನ ಶಿಕ್ಷೆಯಿಹುದು
ಸೊಕ್ಕ ಬೇಡವೋ ಮುಂದೆ ದುಃಖಿಗಳಿಸಿಹ
ರೊಕ್ಕ ಕಕ್ಕಸಬಡುವೆಯೋ ಕಾಸದು ಹೋದರೆ
ದಕ್ಕಿಸಿಕೊಂಬೆಯಾ ಎಲೆ ಹುಚ್ಚು ಮೂಳ ಪ

ಗುರುಹಿರಿಯರ ನಿಂದೆ ಮಾಡಿ ಅವರ
ಚರಣ ಸ್ಥಳವ ಜರೆದಾಡಿ ದುಷ್ಟ
ದುರುಳರ ಜೋಡುಗೂಡಿ ನೀನು
ಬರಿದೆ ಆಯುಷ್ಯ ಕಳೆದೆ ಓಡಾಡಿ ಎಲೆ ಖೋಡಿ
ಭರಭರದಿಂದಿಳಿವರು ಕಾಲನ ದೂತರು
ಕೊರಳನೆ ಕಡಿವರು ಎಲೆ ಹುಚ್ಚು ಮೂಳ ೧

ನಿನ್ನನು ನೀನೇ ನೋಡಿಕೊಂಬೆ ನಾನು
ಚೆನ್ನಾಗಿ ಇಹೆನು ಎಂದೆಂಬೆ ಹುಚ್ಚು
ಕುನ್ನಿಯಂತೆ ಓಡಾಡಿ ಒದರಿಕೊಂಬೆ ಜಾರ
ಕನ್ನೆಯರ ಜೋಡುಗೊಂಬೆ ನಾಕಾಣೆನೆಂಬೆ
ಇನ್ನೇನು ಹೇಳಲಿ ಕಾಲನ ದೂತರು
ಬೆನ್ನಲಿ ಸುಳಿವರು ಎಲೆ ಹುಚ್ಚು ಮೂಳ ೨

ಹೆಂಡತಿ ನೋಡಿ ಹಲ್ಲು ತೆರೆವೆ ಆಕೆಯ
ಗೊಂಡೆ ಚವುರಿ ನೋಡಿ ಬೆರೆವೆ
ಕಂಡ ಕಂಡ ವಿಷಯಕ್ಕೆ ಮನವೊಲಿದೆ ಅಂಟಿ

ಕೊಂಡಿವೆ ಅಜ್ಞಾನ ಮರೆವೆ
ಚಂಡ ಯಮದೂತರು ಚಂಡಿಕೆ ಹಿಡಿದು
ಮಂಡೆಗೆ ಒದೆವರು ಎಲೆ ಹುಚ್ಚು ಮೂಳ ೩

ಬಾಲೆಯ ಸುತರ ನಂಬುವೆಯೋ ಕೊಪ್ಪ
ವಾಲೆಗಳ ಮಾಡಿಸಿ ಇಡುವ ಯಮ
ನಾಳುಗಳು ಕೈ ಬಿಡುವರೇನೋ ನಿನ್ನ
ಬಾಳು ವ್ಯರ್ಥವಾಯಿತು ಬಿಡಿಪರಿಲ್ಲವೋ
ಸೀಳುವೆನೆನುತಲಿ ಕಾಲ ದೂತರು
ಕಾಲ್ಪಿಡಿದೆಳೆವರೋ ಎಲೆ ಹುಚ್ಚು ಮೂಳ ೪

ಇನ್ನಾದರೂ ಜ್ಞಾನವ ತಿಳಿಯೋ
ಚೆನ್ನಾಗಿ ಧ್ಯಾನದಿ ಬಲಿಯೋ ಕಂಡು
ನಿನ್ನೊಳು ಥಳಥಳ ಹೊಳೆಯೋ
ನಿನ್ನ ಜನ್ಮ ಜನ್ಮವೆಲ್ಲ ಕಳೆಯೋ
ಬ್ರಹ್ಮನಾಗಿ ಬೆಳೆಯೋ
ರತ್ನದೊಳಗೆ ರತ್ನ ಬೆಳಗಿದಂತೆ
ಚೆನ್ನ ಚಿದಾನಂದ ನೀ ನಿತ್ಯನಾಗೋ ೫

## ೩೦೭

ಮುಕ್ತನು ನೀನಣ್ಣ ನಿನಗೆ ಎತ್ತ ಜನನವಣ್ಣ ಪ

ಹೆಣ್ಣಿನ ಕಾಲನು ನೀನೀಗ ಗಂಡೆಂದು ನೋಡಿದರೆ
ಚೆನ್ನವು ಬಿದ್ದಿರೆ ಮನದಲಿ ಹೆಂಟೆಂದು ತಿಳಿದರೆ ೧

ಕಲ್ಲನು ಮುಳ್ಳನು ಕೇವಲ ದೇವರೆಂದರಿತರೆ
ಎಲ್ಲಪಮಾನವು ತನಗೆ ಸ್ತೋತ್ರವು ಎಂದರೆ ೨

ನರನು ಆದವನ ತ್ರಿಪುರ ಹರನೆಂದರಿತರೆ
ಚರ ಅಚರವನೆಲ್ಲ ಚಿದಾನಂದ ಗುರುವೆಂದು ಕಂಡರೆ ೩

## ೩೦೮

ಮುಟ್ಟು ಮುಟ್ಟೆನ್ನುತ ಮೂರ್ನಾರು ಹೊರಲೆ
ಮುಟ್ಟಲಿ ಬಂತೆ ಬಿಕನಾಶಿ ಪ

ಮುಟ್ಟೋ ನೀನೇ ಮಡಿಯೂ ನೀನೇ
ಕೆಟ್ಟಿತು ನಿನಮಡಿ ಮೊದಲೇ ಜಲದಲಿ ನೀ ಮುಳುಗೆ
ಕಡೆಯಲಿ ಆ ಉದಕವನೇ ತರುವೆ
ದೇವರಿಗಿಂದಭಿಷೇಕವ ಮಾಡುತ
ಅಪಂನ ಬಿಡು ನಿನ ಬಿಕನಾಶಿ ೧

ಎಲುಬು ಚರ್ಮದಿ ಮಲಮೂತ್ರದ ಗೂಡಲಿ
ನಲಿಯುತಲಿದ್ದೆ ಬಿಕನಾಶಿ
ನೆಲೆಗೊಂಡಾ ನವ ದ್ವಾರದ ಜಲದೊಳು
ತೊಳಲುತ ಬಿಕನಾಶಿ ೨

ಹುಟ್ಟುತ ಸೂತಕ ಹೊಂದುತ ಸೂತಕ
ನಟ್ಟ ನಡುವೆ ಬಿಕನಾಶಿ
ಪಟ್ಟಣದಾ ಕಾವೇರಿ ಮುಳುಗಲು
ಮುಟ್ಟು ತೇಲಿಯಿತೆ ಬಿಕನಾಶಿ ೩

ಉತ್ತಮ ಹತ್ತಿ ಬತ್ತಿರಲಾಂಜನ
ವೃಕ್ಷದಿ ಬೆಳೆವುದೆ ಬಿಕನಾಶಿ
ಉತ್ತಮ ರೋಧನ ಭಾರವ ಕೆಡಿಸಲು
ಕೆಟ್ಟಿತು ನಿನ ಮಡಿ ಬಿಕನಾಶಿ ೪

ನಾನಾ ಶಾಸ್ತ್ರವನೋದಿ ನಾ ನಿನ್ನ ಮರೆವೆನು
ಹೀನವ ಬಿಡು ನಿನ್ನ ಬಿಕನಾಶಿ
ನಾನಾ ಶಾಖದಲಿ ಇರಲಾದರೂರ್ವಿ
ಅದು ರುಚಿ ತಿಳಿವುದೆ ಬಿಕನಾಶಿ ೫

ಚರ್ಮವು ತೊಳೆದರೆ ಕರ್ಮವು ಹೋಯಿತೆ
ಕರ್ಮವು ಬಿಡದು ನಿನ್ನ ಬಿಕನಾಶಿ
ಒಮ್ಮೆ ಚಿದಾನಂದ ಪಾದವ ಸ್ಮರಿಸಲು
ನಿರ್ಮಲವಾದೆಯ ಬಿಕನಾಶಿ ೬

## ३೦೯

ಮುಸ್ತೈದು ಮಾಡಿದ ಮದನ ನಾರಿಯನೆತ್ತಿ
ವಸ್ತು ತಿಳಿದವರಿಗೆ ಆಯಿತದು ಕತ್ತಿ ಪ

ಎರಡು ಸ್ತನಗಳು ಎಂಬ ಎರಡು ಬಿರಡೆಯ ಮಾಡಿ
ಪರಿಶುದ್ಧ ಪಚ್ಚಾಳವೆಂಬ ಪರಜು ಮಾಡಿ
ಮುಕುರ ಮುಖವೆಂಬ ಮೂಲಮನೆ ಮಾಡಿ
ಗರಿಯವೇಣಿಯು ಎಂಬ ಗೊಂಡೆಗಳನೇ ಮಾಡಿ ೧

ದೇಹ ನಿಡಿದು ಎಂಬ ದೊಡ್ಡ ಅಲಗನೆ ಮಾಡಿ
ಮೋಹವೆಂದೆಂಬ ಮೊನೆಯ ಮಾಡಿ
ಸಾಹಸವೆಂದೆಂಬ ಸಾಣೆಯನೆ ಮಾಡಿ
ಗಹಗಹಿಕೆ ಎಂದೆಂಬ ಘನತರಹದನ ಮಾಡಿ ೨

ಭೋ ಎನುತ ಕೂಗಿ ಕೈಗೆ ಕತ್ತಿಯ ಕೊಂಡು
ಬಾಯ ಬಿಡಲು ಜಗವ ಬಿದಿರುತ್ತಲಿ
ಮಾಯೆ ಹರಿದು ಚಿದಾನಂದ ಭಕ್ತರ ಮುಟ್ಟದೆ
ದಾಯವರಿತು ಜಗವ ಧಾತುಗೆಡಿಸಿದನು ೩

## ३೧೧

ಮುಳಿದು ಮಾಳ್ಪುದೇನು ಜನರು ಜ್ಞಾನಿ ಪುರುಷನ
ತನು ಗುಣಂಗಳೆಂಬುವನ ಮುಟ್ಟದಿದ್ದ ಬಳಿಕ ಪ

ಸುಖವುಬರೆ ಹಿಗ್ಗಲಿಲ್ಲ ದುಃಖದಿಂದ ಕುಗ್ಗಲಿಲ್ಲ
ನಿಖಿಳ ಪ್ರಪಂಚದಲ್ಲಿ ವಾಸನಿಲ್ಲವೋ
ಸಕಲ ವಿಷಯ ಸಂಗವಿಲ್ಲ ಶಠದ ಭಾವ ವೆಂಬುದಿಲ್ಲ
ಪ್ರಕಟ ಪರಮಾತ್ಮನಾಗಿ ಮುಕುತಿ ಪತಿಯು ಆದ ಬಳಿಕ ೧

ನಿಂದೆ ಸ್ತುತಿಗೆ ಮರುಗಲಿಲ್ಲ ಬಂದುದನ್ನು ಕಳೆಯಲಿಲ್ಲ
ಕುಂದುಗಳಿಗೆ ನೊಂದು ಮನಸು ಮಿಡುಕಲಿಲ್ಲವೋ
ಹಿಂದಣದನೆನೆಯಲಿಲ್ಲ ಬೆಂದ ಒಡಲಿನಾಸೆಯಿಲ್ಲ
ಸುಂದರಾತ್ಮತಾನೆಯಾಗಿ ಬಿಂದು ಸಾಕ್ಷಿಯಾದ ಬಳಿಕ ೨

ಅರಿವು ಮರೆವು ಎಂಬುದಿಲ್ಲ ಪರರ ಜರೆದು ನುಡಿಯಲಿಲ್ಲ
ಇರುಳು ಹಗಲು ಎಂಬುವಾವು ತೋರಲಿಲ್ಲವೊ
ಮರಣ ಭಯದ ಚಿಂತೆಯಿಲ್ಲ ದುರುಳತನದ ಚರ್ಚೆಯಿಲ್ಲ
ಶರಣ ಸರ್ವಕಾಲ ಕರಣ ದೂರನಾದ ಬಳಿಕ ೩

ಮೋಹದಲ್ಲಿ ಸಿಲುಕಲಿಲ್ಲ ತಾಮಸದಲ್ಲಿ ತೊಡಗಲಿಲ್ಲ
ಕಾಮ ಬಾಧೆ ಎಂಬುವಾವು ಕಾಡಲಿಲ್ಲವೋ
ನೇಮ ನಿತ್ಯ ಮೊಳೆಯಲಿಲ್ಲ ಕಾಮಿತಕ್ಕೆ ಕೂಡಲಿಲ್ಲ
ಪ್ರೇಮಾನಂದನಾಗಿ ನಿತ್ಯ ವ್ಯೋಮಾತೀತನಾದ ಬಳಿಕ ೪

ತನ್ನವರು ಎನ್ನಲಿಲ್ಲ ತನ್ನ ತಾನು ಹೊಗಳಲಿಲ್ಲ
ಮನ್ನಣೆ ಎಂಬುದದಕೆ ಹಿಗ್ಗಲಿಲ್ಲವೋ
ಭಿನ್ನ ಭಾವವೆಂಬುದಿಲ್ಲ ನನ್ನ ನಿನ್ನದೆಂಬುದಿಲ್ಲ
ಚೆನ್ನ ಚಿದಾನಂದ ಚೇತನಾತ್ಮತಾನಾದ ಬಳಿಕ ೫

## ೩೧೧

ಯೋಗಿಯ ನಡತೆ ಲೋಕಕ್ಕೆ ವಿರುದ್ಧ
ಆಗಲೆಂದೇ ಮೂಡುತಿರಲವನೇ ಗೆದ್ದ ಪ

ಸ್ನಾನವೆಂಬುದು ಇಲ್ಲ ಸಂಧ್ಯಾದಿ ಮೊದಲಿಲ್ಲ
ಹೀನ ಶೀಲತ್ವವದು ಇರುತಿಹುದು
ಏನೇನು ಶುಚಿಯಿಲ್ಲ ಜಾತಿ ಸಂಕರವೆಲ್ಲ
ತಾನು ಪಿಶಾಚಿಯಂತಿಹನು ಯೋಗಿ ೧

ಕಂಡಲ್ಲಿಯೆ ಉಂಬ ಕಂಡ ಕಡೆಯೆತ್ತಿಂಬ
ಹೆಂಟೆ ಪುಡಿಯನ್ನದಲೆ ಮಲಗಿಕೊಂಬ
ಭಂಡ ನಡತೆಯ ನಡೆದು ಭ್ರಷ್ಟನಾಗಿ ಕಾಣಿಸುತ
ಉಂಡ ಬಾಯಿಯ ತಾನು ತೊಳೆಯದಿಹ ಯೋಗಿ ೨

ದೇಹಸ್ಥಿತಿಯನು ನೋಡೆ ಮಣ್ಣಿಹುದು ಗೇಣುದ್ದ
ಊಹಿಸಲು ತಲೆಯಲ್ಲ ಜಡೆಗಟ್ಟಿ ಬಿದ್ದಿಹುದು
ದೇಹಪರವಶನಾಗಿ ಉನ್ಮತ್ತ ಸ್ಥಿತಿಯಾಗಿ
ದೇಹಿ ಚಿದಾನಂದ ಗುರು ತಾನಾದ ಯೋಗಿ ೩

## ೩೧೨

ಲಿಂಗವ ಕಟ್ಟಿಕೊಂಬೋದಣ್ಣ
ಇಷ್ಟಲಿಂಗಾದಿ ಸಾಧನಿರಲಿಕ್ಕಣ್ಣ ಪ

ಭಕ್ತನು ಆಗುವುದಕ್ಕಣ್ಣ ನಿತ್ಯ ಭಕ್ತಿಯ ಹುಟ್ಟಿಸುವುದಣ್ಣ
ಮುಕ್ತಿಯ ಪಡೆವುದಕಣ್ಣ ವಿರಕ್ತನಾದರೆ ಸಾಧ್ಯವಣ್ಣ ೧

ಕೆಟ್ಟದು ಸಂಸಾರವಣ್ಣ ಕೊಟ್ಟನು ಕ್ರಿಯದಲಣ್ಣ
ಕಟ್ಟಿದ ಎಳೆಗುದಿಗಣ್ಣ ನಿತ್ಯ ಮುಟ್ಟಿ ಪೂಜಿಸಬೇಕಣ್ಣ ೨

ಗುರುಗಳ ಪೂಜಿಸುವುದಕಣ್ಣ ಎಲ್ಲ ನರರಿಗೆ ಅನ್ನವನಿಕ್ಕಲಿಕ್ಕಣ್ಣ
ನಿರುತವು ತಾನಡೆದಣ್ಣ ಮುಂದೆ ಚಿದಾನಂದನ ಕಾಣೋದಣ್ಣ ೩

## ೩೧೩

ಲಿಂಗವ ಕಟ್ಟುವ ವಿವರವ ಹೇಳುವೆ
ತಲೆವಾಗಿ ಕೇಳಲೆ ಹುಚ್ಚು ಬಡ್ಡಿ
ಲಿಂಗ ಕಟ್ಟಿದೆಯಾದರೆ ಚಿದಾನಂದ
ಲಿಂಗವಾಗುವೆ ಹುಚ್ಚು ಬಡ್ಡಿ ಪ

ಹೊಟ್ಟೆಯೊಳಗಿರೆ ತಾಯಿಗೆ ಲಿಂಗವ
ಕಟ್ಟುವೆಯೋ ಹುಚ್ಚು ಬಡ್ಡಿ
ಮುಟ್ಟುಮಿಂದಿರೆ ಬಿಂದು ಬೀಳುವಾಗ ಲಿಂಗವ
ಕಟ್ಟಿದೆಯಾ ಹುಚು ಬಡ್ಡಿ
ಕಟ್ಟುವೆ ಯಾರಿಗೆ ಕಟ್ಟಿಕೊಂಬವನಾರು
ಇಷ್ಟು ಅರಿಯೆ ಹುಚ್ಚು ಬಡ್ಡಿ
ಕಟ್ಟಿದೆಯಾದರೆ ಅಂಗವೆ ನೀನಾಗು
ನಿಜಲಿಂಗನಹೆ ಹುಚ್ಚು ಬಡ್ಡಿ ೧

ಲಿಂಗ ಹೋಯಿತು ಎಂದು ಪ್ರಾಣವ ಕೊಡುವೆಯೋ
ಲಿಂಗ ಹೋಯಿತೆ ಹುಚ್ಚು ಬಡ್ಡಿ
ಲಿಂಗವು ಹೋದರೆ ನೀನು ಉಳಿವುದೆಂತು
ಲಿಂಗವು ನೀ ಹುಚ್ಚು ಬಡ್ಡಿ
ಲಿಂಗವ ನೀನೆರಡಾಗಿ ಲಿಂಗವ ಕಟ್ಟಿಹೆ
ಲಿಂಗಾಗಿಯೇ ಹುಚ್ಚು ಬಡ್ಡಿ
ಅಂಗ ಸಜ್ಜೆಯು ಆಗಿ ಲಿಂಗವೇ ನೀನಿರೆ
ಲಿಂಗ ಕಟ್ಟಿದೆ ಹುಚ್ಚು ಬಡ್ಡಿ ೨

ಲಿಂಗವನೆ ಕಟ್ಟಿನಿದ್ರೆಯ ಮಾಡಲು
ಲಿಂಗವೆಲ್ಲಿತ್ತೋ ಹುಚ್ಚು ಬಡ್ಡಿ
ಲಿಂಗವ ನೀನೀಗ ಲಿಂಗೆಂದು ಪೂಜಿಸ
ನೀನಾರೋ ಎಲೆ ಹುಚ್ಚುಬಡ್ಡಿ
ಲಿಂಗ ಚಿದಾನಂದ ಸದ್ಗುರುವನು ಹೊಂದು
ಲಿಂಗವ ತಿಳಿವೆ ಹುಚ್ಚು ಬಡ್ಡಿ
ಲಿಂಗವ ತಿಳಿದ ಬಳಿಕ ಲಿಂಗ
ಅಂಗವು ಅಂಗ ಲಿಂಗವು ಹುಚ್ಚು ಬಡ್ಡಿ ೩

## ೩೧೪

ಲೇಸಿನ ಮಾರ್ಗ ಕೇಳಿರೋ ಜನರು
ಈಸು ಲಾಲಿಸಿದರೆ ಲೇಸು ಪ

ಹಂದಿನಾಯಿ ತೃಣಗಳಲಿರುವ ದೇವನ
ಅರಿದರೆ ಅದು ಲೇಸು
ಹಿಂದಾಗಿಹುದನು ಮುಂದಾಗುವುದನು
ಚಿಂತಿಸಿದರೆ ಅದು ಲೇಸು ೧

ಕ್ರೂರ ಮನುಜರೊಡಗೂಡದೆ ಮೌನದಿ
ಬೇರೆಯಿಹುದು ಅದು ಲೇಸು
ಪ್ರಾರಬ್ಧದ ದಶೆಯಿಂದಲಿ ಬಂದುದ
ಕಳೆದುಕೊಂಡರೆ ಅದು ಲೇಸು ೨

ಘೋರವಾದ ತಾಪತ್ರಯಗಳು ಮನೆ
ಸೇರದಿದ್ದಡೆ ಅದು ಲೇಸು
ಸಾರವ ತಿಳಿದು ವ್ಯವಹಾರದೊಳಿದ್ದು
ಧೀರನಾಗಿಹುದದು ಲೇಸು ೩

ಪಾಪಿಯ ಕೂಡದೆ ಸುಜನರ ಕೂಡುತ
ದೇವನ ಕಾಂಬುದೆ ಲೇಸು
ಕೋಪವು ಎಂದಿಗು ಸುಳಿಯದೆ ಶಾಂತಿಯು
ವ್ಯಾಪಿಸಿ ತಾನಿಹುದದು ಲೇಸು ೪

ಪಾಪ ಪುಣ್ಯಗಳ ಗುರುವಿಗೆ ಅರ್ಪಿಸಿ
ಬಾಳುವೆ ನಡೆಸುವುದದು ಲೇಸು
ಈಪರಿ ನಡೆಯ ನಡೆದು ಚಿದಾನಂದ
ಭೂಪನಾಗುವುದತಿ ಲೇಸು ೫

## ೩೧೫

ಲೊಳ್ಳ ಕಳ್ಳೊಟ್ಟೆ ಜಂಬಾಳ
ಗಟ್ಟೆ ಸಂಸಾರ ನೋಡಮ್ಮ
ಲೊಳ್ಳ ಕಳ್ಳೊಟ್ಟೆ ಸರಸನಂಬಲು
ಗತಿಯದು ಲೊಳ್ಳಟ್ಟಮ್ಮಮ್ಮ ಪ

ಹೆಂಡಿರು ಮಕ್ಕಳು ತಂದೆ ತಾಯಿಗಳು
ಭಾಗ್ಯವು ಲೊಳ್ಳಟ್ಟಮ್ಮಮ್ಮ
ಚಂಡ ಯಮದೂತರು ಮಂಡೆ ತಿವಿವಾಗ
ಬಿಡಿಸುವರಾರು ಇಲ್ಲಮ್ಮ ೧

ಶ್ರೇಷ್ಠತೆ ಚೆಲುವಿಕೆ ವಸ್ತ್ರವು ಪ್ರಾಯವು
ಸಿದ್ಧಿಯು ಲೊಳ್ಳಟ್ಟಮ್ಮಮ್ಮ
ದುಷ್ಟಮದೂತರು ದುಬುದುಬು ಬಡಿವಾಗ
ಬಿಡಿಸುವರಾರು ಇಲ್ಲಮ್ಮ ೨

ವಾರೆ ಮುಂಡಾಸವು ಗೀರು ಗಂಧಗಳು
ಪೋರತನವು ಲೊಳ್ಳಟ್ಟಮ್ಮಮ್ಮ

ಘೋರ್ರಮದೂತರು ಘರ್ಜಿಸುತ ಒಯ್ವಾಗ
ಬಿಡಿಸುವರಾರು ಇಲ್ಲಮ್ಮ ೩

ಕನಸಿನ ತೆರವಿದು ಸಂಸಾರವೆಂಬುದು
ಅನುಮಾನವಿದಕಿಲ್ಲಮ್ಮಮ್ಮ
ಕನಸೆಂದು ನಿಶ್ಚೈಸೆ ಕಾಲನು ಬಾರನು
ಮನದಲಿ ತಿಳಿದುಕೊ ನೀನಮ್ಮ ೪

ತನ್ನನು ಮರೆತು ಸಂಸಾರ ನೆಚ್ಚಲು
ತಿರುಗುವ ಜನ್ಮವ ನಮ್ಮಮ್ಮ
ಚೆನ್ನ ಚಿದಾನಂದ ಗುರುವೆಂದು ನಂಬಲು
ಜನ್ಮವ ಕಳೆವುವು ತಿಳಿಯಮ್ಮ ೫

## ೩೧೬

ವದರಿ ವದರಿ ತರ್ಕವ ಹೊದ್ದಿದೆ ನರಕವ ಪ

ಸಾಧುಗಳ ಕಂಡು ಕ್ರೋಧಕೆಡೆಗೊಂಡು
ವಾದಿಸಿ ವಾದಿಸಿ ಕಂಡೆ ಏನ ಎಲೆ ಹಳ್ಳಿ ಕೋಣ ೧

ನರಿಗೆ ಎತ್ತ ಸಿಂಹಕೆ ಎತ್ತ
ಸರಿಯ ಮಾಡೆ ಸಾಟಿಯಹುದೇ ನೋಡು ೨

ಹರಿಯ ವಂದಿಸಿ ಹರನ ನಿಂದಿಸಿ
ಬರಿದೆ ಬರಿದೆ ಬೆಂಕಿ ಬಿದ್ದೆಯಲ್ಲೋ ರಣಹದ್ದೇ ೩

ಈ ತೆರದಿಂದ ವಾದಗಳಿಂದ
ಮಾತಿನ ಮಾತಿನ ಮಾಲೆಗಳಿಂದ ಕುನಿ ಜನ್ಮಕ್ಕೆ ಹೋದೆ ೪

ಸತ್ಯದಿಂದ ಚಿದಾನಂದ
ನಿತ್ಯನಿತ್ಯದಿ ತಿಳಿಯದುದೆ ವ್ಯರ್ಥ ಕೆಟ್ಟುಹೋದೆ ೫

## ೩೧೭

ವಿವೇಕವ ಪಡೆಯಿರೋ ವಿಭುಗಳ ಕೃಪೆಯಿಂದ
ವಿವೇಕವ ಪಡೆದರೆ ಈಶ್ವರಗಿಂ ಮಿಗಿಲಯ್ಯ ಪ

ಮನವು ನಿಲ್ಲದು ಎಂದು ಮರುಗುವಿರೇಕಯ್ಯ
ಮನವು ನಿಲ್ಲಲಿಕೆ ನಿಮ್ಮಧೀನವೆ
ಮನವು ಆದಾತನಾನೇ ಮಹತ್ತು ಆದಾತನಾನೇ
ಮನಕೆ ವಿರಹಿತುಮಾಪತಿಯು ತಾನೆಂದು ೧

ಪಾಪವ ಮಾಡಿದೆನೆಂದು ಹಿರಿದು ಮರುಗಲದೇಕೆ
ಪಾಪ ಪುಣ್ಯವು ಪ್ರಕೃತಿಯಲಾದವು
ಪಾಪವೆಲ್ಲಿಹವೆಲೆ ಪುಣ್ಯವೆಲ್ಲಿಹವೆಂದು
ಪರಪುರುಷ ತಾನಾಗದೆಂದೂ ೨

ಆತ್ಮನರಿಪೆನೆಂದು ಅತಿ ಕಷ್ಟಬಡಲೇಕೆ
ಆತ್ಮನ ವಿವರಿಸೆ ಅವನಲ್ಲವೆ
ಆತ್ಮನೇ ತಾಕಂಡ್ಯಾ ಅಗಣಿತ ಮಹಿಮನು
ಆತ್ಮ ಅನಂತನಾಮನೆ ತಾನೆಂದು ೩

ಅರಿವು ಮರೆವೆ ಎಂಬ ಅಜ್ಞಾನವೇತಕೆ
ಅರಿವು ಮರೆವು ಅಂಗದ ಧರ್ಮವು
ಅರಿವು ಮರವೆಯುಂಟೆ ಆತ್ಮತಾನಾದವನಿಗೆ
ಅರಿವು ಮರೆವು ಅಂಬುಧಿ ತೆರೆಯುಂಟು ೪

ಇಂತು ವಿವೇಕವನ್ನು ವಿಭುಗಳಿಂದಲರಿದು
ಚಿಂತೆ ಹರಿದು ಚಿದಾನಂದ ಗುರುವಾ
ಮುಂತೆ ದೃಷ್ಟಿಸಿಕೊಂಡು ಮರೆತು ತನುವನು ನಿ-
ಶ್ಚಿಂತ ರಾಗಿಯೆ ನಿಜವಿದೆಯಂತೆಂದು ೫

## ೩೧೮

ವ್ಯರ್ಥ ಕೆಟ್ಟೆಯೋ ಸಂಸಾರವನು ನಂಬಿ
ಕಾಣೆನೋ ಜನರನು ಯಡ್ಡೆ
ಸಾರ್ಥಕವಾಗುವ ಮಾರ್ಗ ಕಾಣಲಿಲ್ಲ
ನರಜನ್ಮಕೆ ಬಂದು ಗೊಡ್ಡೆ ಪ

ಹಿರಿಯರನಂಜಿಯೋ ಹೆಂಡತಿ ಕಿವಿಯೊಳು
ಲೊಟಕೆಯ ಹಾಕುವ ಮಂದಿ
ದುರುಳ ಯಮದೂತರು ತಾವೀಗ ಬಂದರೆ
ಹಾಕುವವರು ನಿನಗೆ ಭಂಗಿ ೧

ದಾನಕೆ ಇಲ್ಲವು ಧರ್ಮಕೆ ಇಲ್ಲವು
ಹೆಂಡತಿಯಾದರೆ ಬಡವಿ
ಏನು ಎಂಬೆಯೋ ಯಮದೂತರವರಿಗೆ
ಹೇಳಲೋ ನೀನೀಗ ಬಡವಿ ೨

ಹೆಂಡತಿ ಮರುಕಕೆ ಬಗ್ಗಿ ಬಗ್ಗಿಯೇ ನೋಡ್ವೆ
ಮೋರೆಯ ಬಣ್ಣಕೆ ಮೆಚ್ಚಿ
ಭಂಟರು ಯಮದೂರತು ಬರಲು ಏನ
ಹೇಳುವೆಯಲೆ ಹುಚ್ಚಿ ೩

ಹೆಂಡತಿ ಮಕ್ಕಳು ಬುದ್ಧಿಯ ಹೇಳುವರು
ವಳ್ಳಿತಾಗಿ ನೀನೀಗ ಕೇಳೋ

ಕಂಡವನುಗುಳುತ ಯಮದೂತರೊಯಿದರೆ
ಬಿಡಿಸಿಕೊಳ್ಳಹೇಳೋ ೪

ಹೆಂಡಿರು ಮಕ್ಕಳು ಹಿತರೆಂದು ನಂಬಲು
ಕೆಡುವೆ ನೀನೀಗ ಕಂಡ್ಯಾ
ಚಿನ್ನ ಚಿದಾನಂದ ಸದ್ಗುರುವನು ನಂಬು
ಕಡೆಹಾಯಿದು ಹೋಗುವಿ ಕಂಡ್ಯಾ ೫

## ೩೧೯

ಶಿಷ್ಯನು ಶಿಷ್ಯನು ಎಂದು ತುಂಬಿಯಿಹುದು
ಜಗ ಶಿಷ್ಯನದ್ಯಾತರಶಿಷ್ಯ
ಶಿಷ್ಯನಾದರೆ ತನುಮನವನರ್ಪಿಸಿ ದೃಢದಲಿ
ಶಿಷ್ಯನಾದರೆ ಸಚ್ಛಿಷ್ಯ ಪ

ಹೇಳಿದಲ್ಲಿಗೆ ಹೋಗಿ ಹೇಳಿದುದನೆ ಮಾಡಿ ಬಾಲನಂತಿಹನವಶಿಷ್ಯ
ಕಾಲತ್ರಯಗಳಲಿ ಗುರು ಪೂಜೆವಂದನೆ ತಪ್ಪದೆ ನಡೆಸುವವಶಿಷ್ಯ
ಬಾಲೆಸುತರು ಬಂದರಾದರೆ ತನ್ನಂತೆ ಬಾಳ್ವೆ ಮಾಡೆಂಬವಶಿಷ್ಯ ೧

ಮಾನವನಾಗಿ ಆರೇನೆಂದರೆ ಅಭಿಮಾನ ಹಿಡಿಯದವಶಿಷ್ಯ
ಹೀನ ಕೆಲಸಗಳ ಮಾಣಿಸುತೆಲ್ಲವ ತಾನೆ ದೂರನಹಶಿಷ್ಯ
ಏನಿದು ನಿನ್ನ ಹಣೆಯ ಬರಹವೆಂದೆನೆ ಯೋಚನೆಗೊಳಗಾಗದವಶಿಷ್ಯ ೨

ದೇಹಾಭಿಮಾನವನು ಗುರುಪಾದವಕೊಪ್ಪಿಸಿ ಶಠತೆಯ ಕಳೆದವಶಿಷ್ಯ
ಕರುಣಾಳು ಸದ್ಗುರು ತತ್ವ ಜ್ಞಾನವ ಹೇಳೆ ಆಲಿಸಿ ನಲಿವವಶಿಷ್ಯ
ಅರಿತು ಮನಕೆ ಜ್ಞಾನವ ತಂದು ಅದರಂತೆ ನಡೆವವಶಿಷ್ಯ
ಗುರು ಚಿದಾನಂದ ಸದ್ಗುರು ವಾಕ್ಯದಿ ಗುರುವಾದವನವಶಿಷ್ಯ ೩

## ೩೨೦

ಸಂಸಾರ ಕನಸಣ್ಣ ಸಕಲರಿಗೆ ಹೇಳುವೆನಣ್ಣ
ಸಂಸಾರ ಸತ್ಯವೆಂಬುವನ ಬಾಯಲ್ಲಿ ಹೊರೆ ಮಣ್ಣಣ್ಣ ಪ

ಹೆಂಡತಿಯು ಕನಸಣ್ಣ ಗಂಡನೂ ಕನಸಣ್ಣ
ಗಂಡು ಮಗ ಸೊಸೆ ಸಹೋದರರು ಬಂಧುಗಳು ಕನಸಣ್ಣ ೧

ದನಕರು ಕನಸಣ್ಣ ದವಲತ್ತು ಕನಸಣ್ಣ
ಮನೆ ಮದುವೆ ಮಂಟಪ ಮಹಾಲಕ್ಷ್ಮೀ ಕನಸಣ್ಣ ೨

ವ್ಯೆಯ್ವಾರ ಕನಸಣ್ಣ ವಸ್ತುಗಳು ಕನಸಣ್ಣ
ಮೈಯಲ್ಲಿಹ ಬಲವದು ಮತ್ತೆ ಮುರಿ ಮೀಸೆ ಕನಸಣ್ಣ ೩

ನಾನಿಹುದು ಕನಸಣ್ಣ ನೀನಿಹುದು ಕನಸಣ್ಣ
ಶಾಣೆತನ ಮಾನಾಪಮಾನಗಳು ಸೈನ್ಯ ಕನಸಣ್ಣ ೪

ಸಂಸಾರ ಮಾಡಿದರಣ್ಣ ಸಾಕ್ಷಿಯಾಗಿರಬೇಕಣ್ಣ
ಹಂಸ ಚಿದಾನಂದ ಸದ್ಗುರು ಹೊಂದಲು ಸರಿವುದು ಜನನವಣ್ಣ ೫

## ೩೨೧

ಸಂಸಾರ ದುಷ್ಟೆಂದು ತಿಳಿದ ಮಹಾತ್ಮರ
ಸಂಸಾರ ಮಾಡುವುದು ಹ್ಯಾಗೆ
ಸಂಸಾರದೊಳಗಿದ್ದು ಇಲ್ಲದ ವಿವರವ
ಬರೆದೆನು ದೃಷ್ಟಾಂತವಾಗೆ ಪ

ನಾರಿ ಪುತ್ರರೊಳಗೆ ತಾವು ಕಲೆತಿದ್ದು
ನಾಸ್ತಿಯಾಗಿಹರದು ಹ್ಯಾಗೆ

ವಾರಿಯೊಳಗೆ ತಾವರೆಕರ್ಣ ತಾನಿರ್ದು
ನೀರಿಗೆ ಅಂಟದ ಹಾಗೆ ೧

ಎಲ್ಲ ಪ್ರಪಂಚವ ಮಾಡುತ್ತ ನಿತ್ಯದಿ
ಎರಡು ಆಗಿಹರದು ಹಾಗೆ
ಹಲ್ಲೊಳಗೆ ನಾಲಗೆ ತಾನು ಇರುತಿರ್ದು
ಹಲ್ಲ ಬುಡಕೆ ಬೀಳದ್ದಾಗೆ ೨

ಶಿಷ್ಯ ಚಿದಾನಂದನಾಗಿ ಸಂಸಾರವ
ಮುಟ್ಟಿಮುಟ್ಟದಿರು ಹ್ಯಾಗೆ
ಹುಟ್ಟು ನಾನಾಕಾರಗಳನು ತೊಳಸಿಯೆ
ಹುಟ್ಟು ರುಚಿಯ ಅರಿಯದ್ದಾಗೆ ೩

## ೩೨೨

ಸಂಸಾರ ನಂಬುವೆಯ ಹೆಡ್ಡ ಈ
ಸಂಸಾರವಿಹುದು ಮುಕ್ತಿಗೆ ಅಡ್ಡ ಪ

ಮನೆಯು ಎಂಬುದುವಸ್ತಿ ಮಳಿಗೆ ಸತಿ
ತನಯ ಹೋಹರು ಹಾದಿಗಳಿಗೆ
ಎನಿತು ಮಮತೆ ಇದರೊಳಗೆ ಯಮ
ಮನಮುಟ್ಟಿ ಹಿಡಿದಿಹ ಗುದಿಗೆ ೧

ಸುಳ್ಳುಗಳಾಡೋದು ಎಷ್ಟುಮಹಾ
ತಳ್ಳಿಕಾರಿಕೆ ಬೆಟ್ಟದಷ್ಟು
ಬೆಳ್ಳಿಟ್ಟು ಬಗುಳೋದು ಯಷ್ಟು ಯಮ ಕಕ್ಕಲಿಹ
ಶೀಳುಯಂಬಾಕೊಲ್ಲೆಯಿವನ ಕುಟ್ಟುಕುಟ್ಟು ೨

ಮಕ್ಕಳು ಮನೆಗಿಲ್ಲವೆಂಬ ಎನಗೆ
ತಕ್ಕ ಹೆಂಡತಿ ಅಲ್ಲವೆಂಬ
ರೊಕ್ಕವ ದಿನ ನೋಡಿಕೊಂಬ ಯಮ
ಕಕ್ಕರಲಿರು ಶೀಘ್ರಯೆಂಬ ೩

ಗುರುಹಿರಿಯರ ನಿಂದಿಪನು ಸತಿ
ಮರುಕಕೆ ಹಲ್ಲು ತೆರವನು
ಹೊರಡಿಪ ತಂದೆ ತಾಯಿಯನುಯಮ
ನರಕಕೆ ಹಾಕುಯೆಂಬುವನು ೪

ನಾನಾರುಯೆಂಬುದು ಅಣಕೆ ಹಿಂದಕ್ಕೆ
ನಿದ್ದೆಯೆಂಬುದು ಒಣಗಿ
ಏನೋಮುದೆಂಬುದು ಜಣಗಿ ಚಿದಾನಂದ-
ನೆಂಬುದು ಮುಣಗಿ ೫

## ೩೨೩

ಸಂಸಾರ ಸಂಸಾರವೆಂಬೆರಿ ಸರ್ವದಿವಾರಾತ್ರಿಯಲಿ
ಸಂಸಾರ ಎನಗೊಂದೆ ಅಲ್ಲದೆ ಸಂಸಾರ ಎನಗುಂಟೇನಯ್ಯ ಪ

ಸತ್ಯವೆಂಬುದೆನ್ನಸತಿಯು ಶಾಂತವೆಂಬುದೆನ್ನಸುತನು
ಸತ್ಯವೆಂಬುದೆನ್ನ ಸೊಸೆಯು ನಿಜವಿದೀಗ
ಅತ್ಯಧಿಕ ಗುಣಿಯೆಂಬ ಅಗಣಿತದ ಪಿತನಿರಲು
ಮಿಥ್ಯವಾದ ಸಂಸಾರದಲಿ ಮಗ್ನರಹರೇ ೧

ಬುದ್ಧಿ ಎಂಬುದೆನ್ನಭ್ರಾತೃ ಭಾವನೆ ಎಂಬುದೆನ್ನ ಭಾವ
ಅದ್ವೈತವೆಂಬ ಅತ್ತೆ ಅಂತಃಕರಣವೆಂಬ ಮಾವ
ಶುದ್ಧಾತ್ಮವೆಂಬ ಬಂಧು ಸಂಬಂಧವೆನಗಿರಲಾಗಿ
ಈ ದ್ವೈತಸಂಸಾರದಲ್ಲಿ ಮಗ್ನರಹರೇ ೨

ಇಂತು ಸಂಸಾರ ಸುಖ ನಿಜದೊಳಗೆನಗಿರಲು
ಭ್ರಾಂತದಲ್ಲವೆ ನಿಮ್ಮ ಮಾತಿದೆಲ್ಲ
ಚಿಂತಯಕ ಚಿದಾನಂದ ಚಿನ್ಮಯನೆ ತಾ ಬಲ್ಲ
ಅಂತರಂಗದ ಮಾಟಕೆ ಅವನೆ ಸಾಕ್ಷಿ ೩

## ೩೨೪

ಸಂಸಾರ ಸುಖವಿಲ್ಲವದು ಖ್ಯಾಲ ಮೇಲಾ
ಸಂಸಾರಗಳ ನಂಬಿದವ ಕಾಳಮೂಳ ಪ

ಸತಿ ಎಂಬ ಕೆಸರೊಳಗೆ ಸುತರಹರು ಜೊಂಡು ಬೆಂಡು
ಮಿತಿಯಿಲ್ಲದಾಸೆಯಲಿ ಇಳಿದಡೆ ಮೇಲೆ ಬರಲಾರೆ ಮೂಳ ೧

ಮಂದಿರವು ಸೆರೆಮನೆ ತಂದೆ ತಾಯಿ ಕಾವಲರು
ಬಂಧು ಬಳಗ ಗುಂಗಾಡು ತಾಪತ್ರಯ ಚೇಳುಗಳು ೨

ಸಂಸಾರವೆ ಸುಖವೆಂದು ಸಂಸಾರಮಾಡಲಾಗದು
ಸಂಸಾರವೆ ಅದು ಘಾತುಕ ಚಿದಾನಂದ ಸುಖಕೆ ಹಾನಿ ೩

## ೩೨೫

ಸತಿಸುತಗೆಷ್ಟು ತನಗೆಷ್ಟು ಮಾಡಲು ಬೇಕು
ಮಿತಿ ಮೀರಿ ಮಾಡಿದರೆ ಅಧೋಗತಿ ಮರುಳೆ ಪ

ಅವರ ಸ್ವಾಸ್ತಿಯನೀಗ ಇವರಿಗೆ ಮಾಡಿದರೆ
ಅವರು ಬಾರದೆ ಇವರು ಬಹರೇ ಮರುಳೇ
ಅವರಾರು ಇವರಾರು ನಿನ್ನೊಳಗೆ ನೀ ತಿಳಿಯೋ
ಜವ ಕರೆಯೆ ತೆರಳುವೆಂಬೋ ಸಂಗಡಲೆ ಮರುಳೆ ೧

ಮನ ಕಂಡರೆ ಇಲ್ಲ ಮೋಕ್ಷ ಕಂಡರೆ ಇಲ್ಲ
ಮಾನಿನಿಯ ಒಡವೆಯಲಿ ಚಿಂತೆ ಮರುಳೆ
ಜ್ಞಾನಿಗಳ ಗುರುತರಿಯನಿನಗೆ ಸ್ಥಿರವೆಂತೆಂಬೆ
ನೀನು ಹೊಗದೆ ನಿತ್ಯ ನೀನೆಂತು ಮರುಳೆ ೨

ಕದನ ಮಾಡುವೀ ನಿನ್ನದೀಗ ಎನ್ನದು ಎಂದು
ಕದನವಾಡಲಿಕೆ ನೀನಾರೋ ಮರುಳೆ
ಮುದ ಸುಖವನು ಆಗದಿರು ನೀನು ವಸ್ತಿಯಂಕುರ
ಚಿದಾನಂದ ಬಗಳೆಯ ಚಿಂತೆಯನು ಮಾಡುತಲಿ ೩

## ೩೨೬

ಸಮಾಧಿ ಸಾಧಕಗೆ ಸಮಾಧಿ ಸಾಧಕಗೆ
ಇವು ಎಲ್ಲಿ ಇರಬೇಕು ಪ

ಮಾತುಗಳು ಕಿವಿಯಲ್ಲಿ ಬೀಳದಿರಬೇಕು
ಮಹಾ ಕಠೋರ ರವಗಳು ಬೀಳದಿರಬೇಕು
ವಾತವೆಂಬುದು ಸುತ್ತ ಸುಳಿದಾಡದಿರಬೇಕು
ದುರ್ಜನರು ದೂರದಲಿರೆ ನೋಡದಲಿರಬೇಕು ೧

ಆಕಳಿಕೆ ಆಲಸ್ಯಗಳಿಲ್ಲದಿರಬೇಕು
ತೇಗು ಬಿಕ್ಕಳಿಕೆ ಕಡಿಕಿಲ್ಲದಿರಬೇಕು
ಉಗುಳುವುದು ತೂಕಡಿಕೆ ಇವು ಇಲ್ಲದಿರಬೇಕು
ತಾಗುವ ಮದನಿದ್ರೆಗೆ ತವಕಿಸದಿರಬೇಕು ೨

ಕನಸು ಸೀನು ಕಳವಳಿಕೆಗಳಿಲ್ಲದಿರಬೇಕು
ಜಿನುಗು ಸಂಶಯಗಳು ಜಾರುತಲಿರಬೇಕು
ಘನ ಚಿದಾನಂದನ ಘನಸುಖ ಕಾಣಬೇಕು
ಮನವೀ ಪರಿನಿಂದು ಮೈಮರೆತು ಇರಬೇಕು ೩

## ೩೨೭

ಸಲ್ಲದು ಸಲ್ಲದು ಜ್ಞಾನ ಬೋಧೆ
ಸುಳ್ಳರಿಗೆ ಮತ್ತು ಶುಂಠರಿಗೆ ಪ

ಮುಂದೆ ಹೊಗಳಿ ಹಿಂದೆ ನಿಂದಿಸುವರಿಗೆ
ಸಂದೇಹಿಸುತ ಸಜ್ಜನರಿಗೆ ಹಳಿಯುತ
ಮುಂದೆ ಕಾಣದೆ ಮೂರ್ಖತೆಯಲಿ ನುಡಿಯುತ
ಕುಂದು ಕೊರತೆಯಹ ಕುಹಕರಿಗೆ ೧

ಬರಡು ಮಾತಿನಲಿ ಕಾಲ ಕಳೆಯುತ
ಜರಿದು ನುಡಿಯುತಾ ಕೂಡಿ ನಗುವರಿಗೆ
ಇರುಳು ಹಗಲು ಇಹಪರದಿ ಬಿದ್ದಿಹ
ನರರುಗಳಿಗೆ ಮತಿ ನಷ್ಟರಿಗೆ ೨

ಬ್ರಹ್ಮ ನುಡಿಯ ಮೂರು ನುಡಿಯನೆ ಕಲಿತ
ಬ್ರಹ್ಮ ವಿದ್ವಾಂಸರು ವಾದಿಸುವ
ಬ್ರಹ್ಮತಾವಾಗುವ ಪರಿಯೆಂತೋ ಪರ
ಬ್ರಹ್ಮ ಚಿದಾನಂದನ ಕಾಣದವರಿಗೆ ೩

## ೩೨೮

ಸಾರ್ಥಕವು ಸಾರ್ಥಕವು ಸಾರ್ಥಕವು
ದೇಹಕ್ಕೆ ಗತಿ ಕಂಡರೆ ಪ

ಸಂಸಾರ ತೃಷೆ ಎಂದರಿದರೆ
ಸಂಸಾರಕೆ ಹತ್ತದಿದ್ದರೆ
ಅಂಶವಿದು ಜಗ ಬ್ರಹ್ಮವೆಂದರೆ
ಸಂಶಯ ಮೂಲವನೆ ಕಳೆದರೆ ೧

ತನುವಿನ ಅಭಿಮಾನ ಬಿಟ್ಟರೇ
ಮನದ ಧ್ವಾಂತ ನೀಗಿದರೆ
ಘನ ದುರ್ಗುಣಗಳ ಕುಡಿ ಚೂಡಿದರೆ
ಕನಕವು ನರಕವು ಸರಿಯೆಂದಾದರೆ ೨

ಗುರುಪಾದಕ್ಕೆ ಮೊರೆ ಹೊಕ್ಕರೆ
ಗುರುವಿಂದ ತನ್ನನು ತಿಳಿದರೆ
ಗುರುವಾಗಿಯೇ ತನ್ನನು ಕಂಡರೆ
ಗುರು ಚಿದಾನಂದನಾಗಿಯೆ ನಿಂತರೆ ೩

## ೩೨೯

ಸಾಧು ಸಾಧುಗಳೆಂದು ಎಂಬರೆ ನಿಮ್ಮನು
ಸಾಧುಗಳೇ ನೀವು ಸಾಧುಗಳೇ
ಸಾಧುಗಳಾದರೆ ವಂದಿಸೆ ಎಲ್ಲರು
ಸಾಧುಗಳೇ ನೀವು ಸಾಧುಗಳೇ ಪ

ನೀಚನು ಮೇಲಕೆ ಹೊಲಸನೆಸದರೂ
ಚಲಿತನಾಗದವ ಸಾಧು
ಇನ್ನು ಕೃತಾರ್ಥನು ಪಾವನನಾದೆನು
ಎನ್ನುತಲಿರುವನೆ ಸಾಧು ೧

ತಾಯಿ ಹತ್ಯವ ಮಾಡೆ ತಾನು ಕಣ್ಣಲ್ಲಿ
ನೋಡೆ ತಳ್ಳಿ ಹೋಗದಿಹನೆ ಸಾಧು
ರಾಯ ಸದ್ಗುರು ಲೀಲೆಯಿದೆನ್ನುತ
ಶಾಂತನಾಗಿರೆ ಸಾಧು ೨

ತನ್ನ ಸತಿಯಳು ತನ್ನಯ ಮುಂದೆ ರಮಿಸಲು
ತಯಾರಾಗಿಹನವ ಸಾಧು

ಇನ್ನು ನಾ ಪುರುಷಲ್ಲಸ್ತ್ರೀಯು ತಾನಲ್ಲೆಂದು
ಸುಮ್ಮನಿರುವನೆ ಸಾಧು ೩

ದೇಹವ ಕೊಯಿದು ಕೊಣೆಂದನೆ
ದೇಹವ ಕೊಯ್ದಿಕ್ಕುವನೆ ಸಾಧು
ಮಹಾ ಸದ್ಗುರುನಾಥನು ದೃಢವ
ನೋಡುವೆನೆಂದು ಮನಮಿಸುಕದಿಹನೆ ಸಾಧು ೪

ಎತ್ತೆತ್ತ ಏಕೋ ದೇವನು ಆಗಿ
ನೋಡುವನು ಸಾಧು
ಸತ್ಯ ಚಿದಾನಂದ ಸಾಕ್ಷಾತ್ಕಾರಾಗಿಹೆ
ಸತ್ಯದಿಂದಿರುತಿಹ ಸಾಧು ೫

## ೩೩೦

ಸ್ತ್ರೀಯ ತ್ಯಜಿಸಲು ಬೇಕು ಶಿವಧ್ಯಾನಕೆ
ಬಯ್ಯಬೇಡಿರಿ ಬುದ್ಧಿ ಎಂದೆನ್ನಿರಯ್ಯ ಪ

ಮಹಿಳೆಯ ಮೋಹದಲಿ ಮಗನು ತನ್ನವನೆಂಬೆ
ಮಹಿಳೆಯು ತೆರಳೆ ಮಗನಿಗಾರೋ
ಇಹದು ಪ್ರಪಂಚವೆಲ್ಲ ಎಲ್ಲ ಸತಿಯಿಂದಲಿ
ಮಹಾದೇವ ಚಿಂತನೆಗೆ ಮರೆವೆ ಸ್ತ್ರೀಯಯ್ಯಾ ೧

ಮಗನು ಶಿಶುವಾಗಿರಲು ಮಾನಿನಿಯ ಬಡಿವನು
ಮಗ ಬಲಿಯೆ ಮುರಿವನು ನಿನ್ನೆಲುಬನು
ಮಗನು ಯಾರವ ಹೇಳು ಮನೆಯು ಯಾರದು ಹೇಳು
ನಗುವು ಅಲ್ಲದೆ ನನ್ನದೆಂತೆನಲಿಕಯ್ಯಾ ೨

ಪತ್ನಿಯನು ಬಯ್ಯೆ ಮಗ ಬಡಿವನು ಎಂಬ
ಪೆತ್ತಾಕೆ ಬಯ್ಯೆ ಹೇವಿಲ್ಲದಿಹನು
ತೊತ್ತಿನ ಮಗನಾಗಿ ನಿನ್ನ ತಳ್ಳುವನು
ಮಿತ್ರನಾಗಿಹನವನು ತಾಯಿಗಯ್ಯಾ ೩

ಮನೆಯು ಸವತಿಯವಳದು ಮಕ್ಕಳೆಲ್ಲ ಸವತಿಯದು
ಎನಿತೆನಿತು ಭಾಗ್ಯ ಸೊದೆ ಎಲ್ಲ ಸವತಿಯಳದು
ಮನಕೆ ಹೇಸಿಗೆ ಹುಟ್ಟಿ ಮಹಾತ್ಮನಾಗಲು
ತನ್ನ ಹಿಂದೆ ತಿರುಗುವರೆ ತಿಳಿದು ನೋಡಯ್ಯ ೪

ಸಂಗತಿಯ ಮೂಲದಲಿ ಸುತ್ತಿಹುದು ಪ್ರಪಂಚ
ಕಂಗಳೊಳು ಕಸ ಚೆಲ್ಲಿದಂತೆ ಇಹುದು
ಮಂಗಳ ಚಿದಾನಂದ ಮುಕ್ತ ತಾನಾಗುವುದಕೆ
ಅಂಗನೆಯ ಬಿಡಬೇಕು ಚಿಂತೆ ಯಾಕಯ್ಯಾ ೫

## ೩೩೧

ಸುಪುತ್ರನು ಎಂಬುವನಿವನು
ಸುಪುತ್ರನನು ಹೇಳುವೆ ನಾನು ಪ

ತಂದೆ ತಾಯಿಗಳ ಪೂಜಿಸುವ
ಬಂಧುಗಳಿಗೆ ಬಹು ಪ್ರಿಯನಾಗಿ ಇರುವ
ಎಂದಿಗೂ ಕೆಟ್ಟದ್ದ ನುಡಿಯ ಆವ-
ಬಂದವರಿಗೆಲ್ಲ ಅನ್ನವ ಕೊಡುವ ೧

ಕುಲದ ಆಚಾರವ ತಪ್ಪಿಸನು
ಹಲವು ವ್ರತಗಳನವ ತಾ ಬಿಡನು
ಬಲು ತಿಳುವಳಿಕೆಯನು ತಿಳಿದಿಹನು
ನೆಲೆಯಿಲ್ಲದ ತಪಮಾಡುವವನು ೨

ಅಣ್ಣ ಅತ್ತಿಗೆಗೆ ಉತ್ತರಕೊಡನು
ಪುಣ್ಯ ಕಥೆಯನು ಕೇಳ್ವುದ ಬಿಡನು
ತನ್ನ ದೇಹವ ಪೋಷಣೆ ಮಾಡನು
ಭಿನ್ನ ಬುದ್ಧಿಯನೆಂದಿಗು ತೋರನು ೩

ತತ್ವ ವಿಚಾರವೆಂಬುದೆ ಜೀವ
ನಿತ್ಯ ಅನಿತ್ಯವ ತಿಳಿದು ಅವನೀವ
ಸತ್ಪುರುಷರೊಳು ಒಡನಾಡುವ
ಎಲ್ಲ ಮಿಥ್ಯೆ ಎಂದರಿವ ೪

ಸಂಶಯ ಸಂಕಲ್ಪನೀಗಿ
ಧ್ವಂಸ ಮಾಡಿ ವಾಸನೆಯೆಲ್ಲವ
ಶಿಂಶುಮಾರದ ಚಕ್ರಕೆ ಪೋಗಿ
ಹಂಸ ಚಿದಾನಂದ ಗುರುವಾಗಿ ೫

## ೩೩೨

ಸುಳ್ಳು ಮಾತಿನ ನಿನ್ನಾಚಾರವು ತಿಳಿವಿಕೆ ಏನೇನಿಲ್ಲ
ಎಲ್ಲ ಡಂಭವು ನಡತೆಯ ವಿವರವು ಗತಿಗೆ
ನೀ ದೂರಾದೆಯಲ್ಲ ಪ

ಮಂಡೆಯ ಬೋಳಿಸಿ ಕಣ್ಣನೆ ಮುಚ್ಚುವಿ
ಪಿಟಿಪಿಟಿ ಏನದು ಮಂತ್ರ
ದಂಡವೇತಕೆ ಮನಸದು ಚಂಚಲ
ಏತಕೆ ಮಾಡುವಿ ತಂತ್ರ ೧

ಕೈಯಣ ಗಿಂಡಿಯ ಕಂಕುಳ ಪೆಟ್ಟಿಗೆ
ಕಟ್ಟಿಯಿಹುದು ತಲೆಗಟ್ಟು

ಬೈಗಳೆಂಬುವು ಪರಿಪರಿ ನೋಡಲು
ಕೋತಿ ಹಾರಿಕೆಯಳವಟ್ಟು ೨

ಜ್ಞಾನವದಿಲ್ಲವು ಪುಸ್ತಕ ಮನೆಯೊಳು
ಹೋಳಿಗೆ ತುಪ್ಪದ ಗಬಕು
ಧ್ಯಾನವಿಲ್ಲವು ಮೌನವಿಲ್ಲವು ಯಮನ
ಕೈಯಿಂದ ದುಬುಕು ೩

ನಿರಿವಿಡಿದುಟ್ಟಿಹ ಪಂಚೆಕಚ್ಚೆಯಧೋತ್ರ
ನಾಮ ವಿಭೂತಿಯ ಬೆಳಕು
ಪರಮಾನ್ನವ ಸಕ್ಕರೆಯನು ಕಲಸಿ
ನುಂಗುವೆ ಗುಳುಕು ಗುಳುಕು ೪

ಮುಂದೆ ಹೇಳುವನ ಮೆಟ್ಟಿಕೊಂಡುಂಬುದು
ಇಂತಿದು ನಿನ್ನಯ ಬದುಕು
ಸುಂದರ ಚಿದಾನಂದ ಸ್ವರೂಪವ ತಿಳಿವುದು
ಎಂದುಎಂದಿಗೆ ಬಲುಧಡಕ ೫

## ೩೩೩

ಹುಚ್ಚು ಮಾಡಿದ ಎನ್ನ ಗುರುವು
ಈ ಹುಚ್ಚನರಿವೊಡೆ ಸಚ್ಚರಿತರಿಗರಿವು ಪ

ಆಶ್ರಮ ಧರ್ಮವು ಹೋಯ್ತು
ನಿರಾಶ್ರಮವೆಂಬುದು ನಿಜವಾಯ್ತು
ಕುಶ್ರಮಗಳು ನಾಶವಾಯ್ತು
ಜೀವಭ್ರಮೆಯೆಂಬುದು ಖಿಲವಾಯ್ತು ೧

ಸ್ನಾನವು ಮನದಿಚ್ಛೆಯಾಯ್ತು ಸಂಧ್ಯಾದಿ
ಜಪವೆಲ್ಲ ಮರತೇಹೋಯ್ತು

ಮೌನವೆಂಬುದು ಬಹಳವಾಯ್ತು ಗುರುತಾನೆ
ಎಂದೆಂಬ ಧ್ಯಾನವುಪೂರ್ಣವಾಯ್ತು ೨

ಕುಲಗಳೆಂಬುವು ಕಾಣದಾಯ್ತು
ಕುಲಛಲಗಳು ಮರತೇಹೋಯ್ತು
ಹೊಲೆ ಶುದ್ಧಗಳು ಬರಡುನುಡಿಯಾಯ್ತು
ನಿಶ್ಚಲನಿಜಾನಂದವೆಂಬುದೇ ಸತ್ಯವಾಯ್ತು ೩

ಭೇದಾಭೇದವು ಮಾಯವಾಯ್ತು
ಹಾಳುವಾದಗಳು ಕೇಳದಂತಾಯ್ತು
ಸಾಧುಸಂಗವ ಬಿಡದಂತಾಯ್ತು
ಸುವಾದವಮಾಡಿ ಸುಖಿಸುವಂತಾಯ್ತು ೪

ದಯೆ ನಿರ್ದಯೆಗಳ ತೊರೆದಾಯ್ತು
ಭಯ ನಿರ್ಭಯಗಳು ಅದೃಶ್ಯವಾಯ್ತು
ಜಯಾಪಜಯಗಳು ಕಾಣದಾಯ್ತು ಸ್ವಕ್ಷೇಮ
ಪರಕ್ಷೇಮಗಳ ವಿಚಾರ ಹೋಯ್ತು ೫

ಕೋಪ ತಾಪವು ಶಮವಾಯ್ತು
ತಾಪತ್ರಯದಬಿತ್ತು ಮೊಳೆಯದಾಯ್ತು
ಯೋಗ ವಿದ್ಯೆಯ ಹರಿತವಾಯ್ತು
ನಿರ್ವಾಣವಾಗಿ ಎಲ್ಲ ಇಂತಾಯ್ತು ೬

ಇಂತಹ ಹುಚ್ಚನು ಎನಗೆ ಕವಿಯಿಸಿ
ನಿರಂತರ ಚಿಂತೆಯ ನೆನ್ನ ಪಾಲಿಗಿರಿಸಿ
ಅಂತರಂಗದಿ ತಾನೆ ನೆಲೆಸಿ ಚಿಂತಾಯಕ
ಚಿದಾನಂದ ತಾ ಬೆರೆಸಿ ೭

೩೩೪

ಹುಚ್ಚು ಮುಂಡೆ ನೀನಾಗಬೇಡ ಹೇಳುವೆ ಕೇಳು
ಹುಚ್ಚು ಮುಂಡೆ ಹುಚ್ಚು ಮುಂಡೆಯು ಅಲ್ಲ
ಬ್ರಹ್ಮವೇ ನೀನಾಗಿಹೆ ಹುಚ್ಚು ಮುಂಡೆ ಪ

ಸರ್ವದೇಹಕೆ ನರದೇಹವು ಉತ್ತಮ ಹುಚ್ಚು ಮುಂಡೆ
ಇರುವ ದೇಹದಿ ನಿನ್ನ ಸಾರ್ಥಕ ಮಾಡಿಕೋ ಹುಚ್ಚು ಮುಂಡೆ
ಉರ್ವಿ ಪ್ರಪಂಚವು ಸತ್ಯವೆಂದು ಎನಬೇಡ ಹುಚ್ಚು ಮುಂಡೆ
ತೋರುವುದಿಂದ್ರಜಾಲದ ತೆರದಿ ಸ್ವರ್ಗ ಮರ್ತ್ಯವು ಹುಚ್ಚು ಮುಂಡೆ ೧

ಸತಿಸುತರನು ನೀನು ನಂಬಿ ಕೆಡಬೇಡ ಹುಚ್ಚು ಮುಂಡೆ
ಸತಿಯೆಷ್ಟು ಸುತರೆಷ್ಟು ಆದರು ನಿನಗೆ ಹುಚ್ಚು ಮುಂಡೆ
ಮಿತಿಯಿಲ್ಲದ ದೇಹವಾದವು ನಿನಗೆ ಹುಚ್ಚು ಮುಂಡೆ
ಮತಿಗೆಟ್ಟು ಮರೆತು ಜನ್ಮವನಂತವ ತಿರುಗುವರೆ ೨

ಸ್ವಪ್ನದ ಸುಖದಂತೆ ಸಂಸಾರವಿದು ಮೃಷೆ ಹುಚ್ಚು ಮುಂಡೆ
ಇರುವೆನಾಚಂದ್ರಾರ್ಕವೆಂದು ಎಂಬೆಯೋ ಹುಚ್ಚು ಮುಂಡೆ
ಅಪ್ಪಯ್ಯ ಹೋದನು ಮುತ್ತಯ್ಯ ಹೋದನು ಈ ಪರಿಯಿಂದೆ ಹುಚ್ಚು ಮುಂಡೆ
ಮುಪ್ಪಾದೆ ಇಂತು ಭವದ ಸುಳಿಯಲಿ ಬಿದ್ದು ಹುಚ್ಚು ಮುಂಡೆ ೩

ಕಾರ್ಯೋಪಾಧಿ ಯಿಂದ ಹುಚ್ಚು ಮುಂಡೆ ನೀನಾದೆ ಹುಚ್ಚುಮುಂಡೆ
ಕಾರ್ಯಕಾರಣ ಉಪಾಧಿಯು ನಿನಗಿಲ್ಲವು ಹುಚ್ಚು ಮುಂಡೆ
ಕಾರ್ಯಗುಣಗಳಿಂದ ನಿನ್ನ ತಿಳಿವುದು ಕಷ್ಟ ಹುಚ್ಚು ಮುಂಡೆ
ಕಾರಣ ಗುಣದಲ್ಲಿ ತಿಳಿಯೆ ತಿಳಿಸುವೆ ನಿನ್ನ ಹುಚ್ಚು ಮುಂಡೆ ೪

ಹೊಂದು ಸದ್ಗುರುಪಾದ ತಿಳಿ ನಿನ್ನ ಬ್ರಹ್ಮೆಂದು ಹುಚ್ಚು ಮುಂಡೆ
ನಿಂದು ನಾಶಿಕಗೊನೆಯ ನೋಡಿ ದೃಷ್ಟಿಯಿಡು ಹುಚ್ಚು ಮುಂಡೆ
ಚಂದ್ರರು ಶತಕೋಟಿ ಬೆಳಗುವರು ತಾವಲ್ಲಿ ಹುಚ್ಚು ಮುಂಡೆ
ಸುಂದರ ಚಿದಾನಂದನಾಗುವೆ ನಿಜದಲ್ಲಿ ಹುಚ್ಚು ಮುಂಡೆ ೫

## ೩೩೫

ಹುಚ್ಚು ಹಿಡಿದು ಕೆಟ್ಟಯೋಗಿ
ಹುಚ್ಚು ಹಿಡಿದು ಕೆಟ್ಟನೋ
ನಿತ್ಯ ನಿತ್ಯ ಕಾಲದಲ್ಲಿ ನಿಜನಾದ ಕೇಳಲಾಗಿ ಪ

ಇಂದ್ರಪದವಿಯನ್ನು ಒಲ್ಲ ಈಸಪದವಿ ಮೊದಲೆ ಒಲ್ಲ
ಹಿಂದ ಮುಂದಣ ವಿಚಾರ ಹೀನಮಾಡಿ ಮರೆತನಯ್ಯೋ ೧

ಮಾತನಾಡೆ ಮಾತನಾಡ ಮನಕೆ ಹಿಡಿದುದನ್ನ ಬಿಡ
ಯಾತ ಯಾತರಲ್ಲೂ ಕಿವಿಯ ನಿಡ ಯತ್ನ ಬೇರಾಯಿತಯ್ಯೋ ೨।

ಅರಿವು ಮರೆವು ಆಗಿ ಇಹನು ಅರಕೆಯಿಲ್ಲದೆ ಸುಮ್ಮನಿಹನು
ಮರುಳು ಮರುಳು ಆಗಿ ಬುದ್ಧಿ ಮಂದನಾಗಿ ಹೋಯಿತಯ್ಯೋ ॥

ಶರೀರ ಪರವೆಯಿಲ್ಲ ಯಾವುದರ ನಿಷೇಧವಿಲ್ಲ
ಅರಿಯದವರು ಅದರಲ್ಲಿ ಅನ್ನ ಉಂಟೆನೆಂಬನಯ್ಯೋ ೪

ದಯೆಯು ಇಲ್ಲ ಧರ್ಮವಿಲ್ಲ ದುಷ್ಟತನಗಳೇನು ಇಲ್ಲ
ಬಯಲು ಚಿದಾನಂದ ಗುರು ಬಯಲು ಕೂಡಿ ಬಯಲೆ ಆದ ೫

## ೩೩೬

ಹೆಂಡತಿ ಎಂಬ ದೇವರನು ನಂಬಿಹನಣ್ಣ
ಹೆಂಡತಿಯೆ ದೇವರೆಂದು ಕೆಡುತಿಹನಣ್ಣ ಪ

ತಲೆಗೆ ತಾನೆರೆಯುವುದೆ ಮಂಗಲ ಸ್ನಾನವಣ್ಣ
ಬಲು ವಸ್ತ್ರವುಡಿಸುವುದೆ ಅಭಿವಸ್ತ್ರವಣ್ಣ

ಎಲೆಗೊಪ್ಪು ಮೊದಲಾಗಿಡುವುದೇ ಆಭರಣವಣ್ಣ
ಪಲವು ಪರಿಮಳ ಲೇಪನವೇ ಗಂಧವಣ್ಣ ೧

ನಾನಾ ದಂಡೆಯ ಹಾರವ ಮುಡಿವುದೆ ಪುಷ್ಪವಣ್ಣ
ನಾನಾ ಬಹುಮಾನ ಮಾಡುವುದೆ ಧೂಪವಣ್ಣ
ನಾನಾ ಪರಿ ಉಣಿಸುವುದೆ ನೈವೇದ್ಯವಣ್ಣ
ನಾನಾ ಸಂತಸಪಡಿಸುವುದೆ ದೀಪವಣ್ಣ ೨

ನೆನೆದೂಳಿಗ ಮಾಡುವುದೆ ಪ್ರದಕ್ಷಿಣವಣ್ಣ
ಮುನಿಸುವಳ ತಿಳಿಸುವುದೆ ಸಾಷ್ಟಾಂಗವಣ್ಣ
ಇನಿತು ಪೂಜೆಯ ಮಾಡಿ ತಿರುಗೊಂದು ಭವವಣ್ಣ
ಚಿನುಮಯ ಚಿದಾನಂದ ನಿನಗೆ ದೊರೆಯನಣ್ಣ ೩

## ೩೩೭

ಹೆಂಡತಿಯ ಮಾಡಿಕೊಂಡೆ ಯಾಕೋ ಕಟ್ಟಿ-
ಕೊಂಡು ಮಂಡೆ ತುರುಸುವುದ್ಯಾಕೋ ಪ

ಮಕ್ಕಳಿಲ್ಲವೆಂದು ಬಳಲುವುದೇಕೋ ಎಲ್ಲ
ಮಕ್ಕಳಳಿದರೆಂದು ಅಳುವುದೇತಕೋ ೧

ಎಲ್ಲವ ಉಳಿದು ಹೋಹೆಯಾಕೋ ಮೋಹನ
ವಲ್ಲಭೆಯ ಬಿಟ್ಟು ತೆರಳುವೆ ಯಾಕೋ ೨

ಒಪ್ಪಿಸಯೋ ಸತಿಯ ಸುತರನ್ಯಾಕೋ ನೀನು
ಬರ್ಪಣೆಲ್ಲ ಪರಾಂಬರಿಕೆ ಯಾತಕೋ ೩

ದುಡ್ಡನೀಗ ಕೈಲಿ ಕೊಟ್ಟೆಯಾತಕೋ ನೀನು
ದೊಡ್ಡ ಚೇಳು ಕಡಿಸಿಕೊಂಬೆಯಾತಕೋ ೪

ಹೆಂಡತಿಯ ಸಂಗತಿ ಸಾಕೋ
ಮುಂದೆ ಚೆನ್ನ ಚಿದಾನಂದನಾಗಬೇಕೋ ೫

## ೩೩೮

ಹೇಳಲಾಗದು ತತ್ವ ಹೇಳಲಾಗದು ಜ್ಞಾನ
ಖೂಳ ಮೂಳರಾದ ಕುಹಕಿಗಳಿಗೆ ಪ

ನಾರುತಿಹ ತೊಗಲನು ಕಡಿದನಾಯಿ ಮುಖದ ಮುಂದೆ
ದಾರವಟ್ಟದಲಿ ತುಪ್ಪವ ನೀಡಲು ಅರಿವುದೆ
ಘೋರ ಸಂಸಾರ ವಿಷಗಟ್ಟಾಗಿ ಹಿಡಿದವಗೆ
ಸಾರ ಬೋಧೆಯನರಿಯಲು ತಿಳಿಯುವುದೇ ೧

ಗೊಜ್ಜಲ ತೃಣವನು ತಿಂಬ ಗಾರ್ಧಭನ ಮುಂದೆ
ಸಜ್ಜಿಗೆಯ ತಂದಿಡಲಿಕೆ ಅದನರಿವುದೆ
ಲಜ್ಜೆಯಹ ನಾನಾ ಮೋಹ ಪಾಶಲಿಪ್ಪರಿಗೆ
ಸಜ್ಜನ ಶಾಸ್ತ್ರವನೊರೆಯಲದು ತಿಳಿವುದೇ ೨

ದೊಡ್ಡಕ್ಕಚ್ಚನೆ ಕುಡಿವ ಗೊಡ್ಡೆಮ್ಮೆಯ ಮುಂದಕೆ
ಲಡ್ಡುಗೆಯ ತಂದಿಡಲಿಕೆ ಅದನು ತಿಳಿವುದೇ
ದಡ್ಡ ಬುದ್ಧಿಯು ಬಲಿತು ದೊಡ್ಡನಾದವಗೆ
ದೊಡ್ಡ ಚಿದಾನಂದ ಬ್ರಹ್ಮವು ತಿಳಿವುದೇ ೩

## ೩೩೯

ಹೇಸಿದೆನಯ್ಯಾ ಹೇಸಿದೆನೋ
ಹೇಸಿದೆನಯ್ಯಾ ಹೇಸಿದೆನೋ

ದೋಷ ಸ್ವರೂಪ ನಾರಿಯು ಸುಂದರ
ದುಷ್ಟಾನನು ನಿನಗ್ಹೇಳಿವೆನು ಪ

ಮೊಲೆಗಳು ಮಾಂಸದ ಗಟ್ಟಿಯ ಕರಣೀ
ಮೂಗದು ಸಿಂಬಳ ಸೋರುವ ಭರಣಿ
ಬಲುದುರುಬದು ನರಕದ ಹೊಕ್ಕರಣಿ
ಬಾಯದು ಕಲಗಚ್ಚಿನ ದೋಣಿ ೧

ಶೋಣಿತ ಮೂತ್ರವು ಹರಿವಾ ಭಗವು
ಶ್ವಾನನ ಹಲ್ಲಿನತೆರದಿಹ ನಗುವು
ಕಾಣಿಸುವುದು ತನುದುರ್ಗಂಧವು
ಕೆಟ್ಟದರೊಳು ಕೆಟ್ಟವಿಷಯವು ೨

ಸಿದ್ಧವು ಗತಿಗೆ ಸ್ತ್ರೀ ದೊರಕೆಂಬುದು ಸಮನಿಸಿ
ವೇದಾಂತದಿ ತಿಳಿದಂದು ಸಿದ್ಧಚಿದಾನಂದ
ಬೋಧಯಲಂದು ಸೀಮಂತಿಯನು ಬಿಡಬೇಕೆಂದು ೩

## ೩೪೦

ತಪ್ಪುವುದೇ ಬ್ರಹ್ಮಕೆ ಗುರಿಯು ನೀನು
ತಪ್ಪಿದರು ತಾನು ತಪ್ಪದು ಅರಿಯೋ ನೀನು ಪ

ಕರವ ಭೂಮಿಗೆ ಬಡಿಯಲು ಪೆಟ್ಟ
ಹೊರಗನೆ ಮಾಡುವುದು ಆವ ಪರಿ
ಪರಿಪೂರ್ಣ ಬ್ರಹ್ಮ ತುಂಬಿರಲು ನೀನು
ಪರವೆಂದು ಕಾಣೆ ಸಂಶಯವೆ ನಿಜವಿರಲು ೧

ಗುಡ್ಡಕೆ ಗುರಿಯ ನೋಡಿದೆ ಅದು
ಅಡ್ಡಬಿಟ್ಟು ಬೇರೆ ನಿಲ್ಲುವುದೆ ನೋಡೆ

ಖಡ್ಡಿಕೊಳ್ಳದು ಬ್ರಹ್ಮವಾಡೆ ನಿನ್ನ
ದೊಡ್ಡ ಬ್ರಹ್ಮವೆನಲು ಸಂಶಯ ನೋಡೆ ೨

ಆಕಾಶ ನೋಡುವುದೇ ತಾನು ಆ
ಆಕಾಶ ನೋಡಲು ನೂಕು ನುಗ್ಗೇನು
ಏಕ ಚಿದಾನಂದ ನೀನು ಜಗ
ದೇಕ ಬ್ರಹ್ಮವೆಂದು ನಿನ್ನ ನೀನೇ ಕಾಣ ೩

## ೩೪೧

ಲಿಂಗ ಕಟ್ಟುವೆ ಯಾಕೋ ನೀ ಲಿಂಗ
ಲಿಂಗಾಂಗವೆಲ್ಲವು ಸರ್ವಾಂಗ ಲಿಂಗ ಪ

ಉಳಿಮುಟ್ಟದ ಲಿಂಗ, ಊರು ಮುಟ್ಟದ ಲಿಂಗ
ತಿಳಿಯೆ ತಂದೆ ತಾಯಿಗಳಿಂದಾಗದ ಲಿಂಗ
ಕುಲಕರ್ಣಿ ಕಂಚುಗಾರರಲಿ ಹುಟ್ಟದ ಲಿಂಗ
ನಲಿಯತು ತನ್ನಿಂ ತಾನಾದ ಲಿಂಗ ೧

ಏಕವಾಗಿಹ ಲಿಂಗ ಎಲ್ಲವು ತಾನಾದ ಲಿಂಗ
ಸಾಕಾರವಾಗಿ ಸಂಚರಿಸುತಿರುವ ಲಿಂಗ
ನಾಲ್ಕು ತನುವಿಗೆ ನಿಲುಕದ ಲಿಂಗ
ಬೇಕೆಂದ ರೂಪಿಗೆ ಬಂದಂತ ಲಿಂಗ ೨

ಏನು ತೋರದ ಲಿಂಗ ಎಡೆದೆರೆಪಿಲ್ಲದ ಲಿಂಗ
ಧ್ಯಾನಕೆ ಮೌನಕೆ ನಿಲುಕದ ಲಿಂಗ
ಜ್ಞಾನ ಮೂರುತಿ ಚಿದಾನಂದ ಲಿಂಗ
ತಾನೆ ವಿಲಾಸದಿ ಬಂದಂಥ ಲಿಂಗ ೩

## ಬ್ರಹ್ಮಾನುಭವ

### ३४२

ಅದಕೋ ಕೈವಲ್ಯಂ ಅದಕೋ ಕೈವಲ್ಯಂ
ಅದಕೋ ಕೈವಲ್ಯಂ ಅದಕೋ ಕೈವಲ್ಯಂ ಪ

ಬೆಳದಿಂಗಳಿನೊಳು ಪಟಿಕದ ಮಣಿ ಬಿದ್ದು
ಬೆಳಗೊಂದೆಯಾಗಿರುತಿಹುದೆ ಕೈವಲ್ಯಂ ೧

ಜೋತಿ ಎರಡು ಇರೆ ಜೋತಿ ಒಂದರಲಿಡೆ
ಜೋತಿಯೊಂದಾಗಿ ಬೆಳಗುತಲಿರೆ ಕೈವಲ್ಯಂ ೨

ಕರ್ಪೂರ ಉರಿ ಸೋಂಕಿ ಉರಿ ಆವರಿಸಿರೆ
ಕರ್ಪೂರ ಕಾಣ್ಬಾರದ ತೆರದಿಹುದೇ ಕೈವಲ್ಯಂ ೩

ದರ್ಪಣಕೆ ಮುಖವೆರಡು ಆಗೆ
ದರ್ಪಣವಿಲ್ಲದಿರೆ ಕಾಣದಿಹುದೇ ಕೈವಲ್ಯಂ ೪

ಕೈವಲ್ಯವದು ವಾಙ್ಮನಕಗೋಚರ
ಕೈವಲ್ಯ ಸ್ಥಿತಿ ನಿಲ್ಲಲವನೇ ಚಿದಾನಂದ ೫

### ३४३

ಅದು ನಿರಾಲಂಬ ಅದು ನಿರಾಲಂಬ
ಅದು ನಿರಾಲಂಬ ಕೇಳದು ನಿರಾಲಂಬ ಪ

ತನು ಹಂಗು ಇಲ್ಲದೆ ಮನ ಹಂಗು ಇಲ್ಲದೆ
ತನಗೆ ತಾನಿಹುದದು ನಿರಾಲಂಬ ೧

ಬುದ್ಧೀಂದ್ರಿಯಕೆ ಅತ್ತ ಅಹಂಕಾರಕೆ ಅತ್ತ
ಸುದ್ದಿಲ್ಲದಹುದದು ನಿರಾಲಂಬ ೨

ಇಂದ್ರಿಯಕೆ ನಿಲುಕದೆ ಇಂದ್ರಿಯಕೆ ಸುಖಿಸದೆ
ಇಂದ್ರಿಯಗಳರಿಯದುದು ನಿರಾಲಂಬ ೩

ಅರಿವುದು ಕಾಣದೆ ಮರೆವುದು
ತೋರದೆ ಅದು ಚಿದಾನಂದ ಅದು ನಿರಾಲಂಬ ೪

ಬಹಿರಂತಲ್ಲದೆ ಬೇರೆಂಬುದಿಲ್ಲದೆ
ಮಹಾ ಬೆಳುದಿಂಗಳದೆ ನಿರಾಲಂಬ ೫

## ೩೪೪

ಆತ್ಮಲಿಂಗ ಭವನದಿ
ಆತ್ಮಲಿಂಗ ಭವನದಲಿ ವಿಚಿತ್ರವನೆ ಕಂಡು
ಆತ್ಮನೆಂತಿಹನೆಂದು ಅರಸನಾ ಬಲಗೊಂಡು
ಆತ್ಮನಾನೆರಡೆಂಬ ಅವಿ ವಾಚ್ಯನಳಿಗೊಂಡು
ಆತ್ಮನಾಗಿರುತಿಪ್ಪನು ಪ

ಭೂತ ಪಂಚಕಗಳು ದೇಹದೊಳು ಕಂಡೆ
ಜಾತಿ ಜಾತಿಗೆ ಇಪ್ಪ ಜೀವರನು ಕಂಡೆ
ಪ್ರೀತಿಯಿಂ ಪರಿ ಪರಿಯ ಸರಗಳನೆ ಕಂಡೆ
ಮಾತಿಗುತ್ತರಿಸದಿಹ ಮಹಾ ಮಹಿಮೆಯ ಕಂಡೆ ೧

ಈಕ್ಷಿಸಿಯೆ ವಸ್ತುವನ ಏಳು ಬಾಗಿಲು ಕಂಡೆ
ದಕ್ಷಿಣೋತ್ತರ ಎಂಬುದರ ಬಾಗಿಲನು ಕಂಡೆ
ಅಕ್ಷಯಾಗಿಹ ಲಕ್ಷವಹ ದಿಡ್ಡಿಯನೆ ಕಂಡೆ
ರಕ್ಷಕನಾಗಿಹನ ರಾಗದಲಿ ಕಂಡೆ ೨

ಪಂಚಇಂದ್ರಿಯಗಳೆಂಬ ಪರಿಚಾರಕರನು ಕಂಡೆ
ಕಿಂಚ ಕೆಲಸಕ್ಕಿರುವ ಕರ್ಮೇಂದ್ರಿಯರ ಕಂಡೆ
ಸಂಚರಿಪ ಮೂರೆರಡು ಸತ್ಪ್ರಾಣಿಗಳ ಕಂಡೆ
ವಚನಾಂತಃಕರಣ ವರ್ತಕರ ಕಂಡೆ ೩

ಸತ್ಯಗುರು ಪೂರಿತಹ ಸಾರಣೆಯ ಕಂಡೆ
ತಥ್ಯವೆನಿಸುವ ಶಾಂತ ತೋರಣವ ಕಂಡೆ
ಅತ್ಯಧಿಕ ಬುದ್ಧಿಯ ರಂಗವಲ್ಲಿಯ ಕಂಡೆ
ಎತ್ತ ನೋಡಿದಡತ್ತ ಎಸೆದಿಹುದ ಕಂಡೆ ೪

ಆರು ಅಂತಸ್ಥನು ಕಂಡೆ ಅಲ್ಲಿರುವವರ ಕಂಡೆ
ಬೇರೆ ಮೂರಿಹ ಮಧ್ಯ ರಂಗಗಳ ಕಂಡೆ
ಘೋರ ಘೋಷಣ ಪ್ರಣವ ಘಂಟನಾದವ ಕಂಡೆ
ಸಾರವಮೃತ ಕಲಶ ಪಾನಕವ ಕಂಡೆ ೫

ಜ್ಯೋತಿ ಎಂದೆನ್ನುತಿಹ ಜ್ಯೋತಿರ್ಮಯನ ಕಂಡೆ
ಸಾತಿಶಯ ಗರ್ಭಗುಡಿ ಶೀಘ್ರದಲಿ ಕಂಡೆ
ಆತುರದಲೊಳ ಪೊಕ್ಕು ಆತ್ಮಲಿಂಗವ ಕಂಡೆ
ಪೂತು ರಕ್ಷಿಸು ಎಂದು ಪೂಜೆ ಕೈಗೊಂಡೆ ೬

ನಿತ್ಯ ನಿಶ್ಚಲ ನಿಷ್ಕಲಂಕ ನಿಜನೆ ಎಂದು
ಪ್ರತ್ಯಗಾತ್ಮ ಪರಬ್ರಹ್ಮನೆ ಸ್ಥಿರವೆಂದು
ಸತ್ಯ ಸಂವಿದ್ರೂಪ ಸಕಲಕಧಿಪತಿ ಎಂದು
ಅತ್ಯಧಿಕ ಚಿದಾನಂದ ಆತ್ಮ ತಾನೆಂದು ೭

## ೩೪೫

ಇಂತಿದೆ ಬ್ರಹ್ಮ ಇಂತಿದೆ ಅದು
ಎಂತೋ ಇಹುದು ಎಂದು ಚಿಂತೆ ಮಾಡಲದೇಕೆ ಪ

ಎರಡು ಕೈಗಳಿವೆ ಎರಡು ಕಾಲ್ಗಳಿವೆ
ಎರಡು ಕಣ್ಣುಗಳು ಮತ್ತು ಎರಡು ಕಿವಿಗಳಿವೆ
ಎರಡಕ್ಕೆ ಠಾವಿಲ್ಲ ಏಕವೇ ತಾನಿದೆ
ಎರಡು ಎಂಬುದು ಮಾತಿನಿಂದೆರಡಾಗಿದೆ ೧

ತಾನೆ ಬೇಡುತಲಿದೆ ತಾನೆ ಉಣ್ಣುತಲಿದೆ
ತಾನೆ ತನ್ನ ಬಾಯ ತೊಳೆದುಕೊಳ್ಳುತಿದೆ
ತಾನೆ ನಡೆಯುತಿದೆ ತಾನೆ ಮಲಗುತಿದೆ
ತಾನೆ ಕುಳ್ಳಿರ್ದು ಹಾಡಿ ಪಾಡಿ ನಗುತಲಿದೆ ೨

ಒಬ್ಬನೇ ಎನಿಸಿದೆ ಒಬ್ಬನೇ ತೋರಿದೆ
ಒಬ್ಬನೇ ಆಗಿ ಆಡುತ್ತಲಿದೆ
ಒಬ್ಬ ಚಿದಾನಂದ ಗುರುವರ ತಾನಿದೆ
ಒಬ್ಬನೇ ಒಬ್ಬನೇ ಒಬ್ಬನೇ ಇದೆ ಇದೆ ೩

## ೩೪೬

ಇರಬೇಕು ಲಕ್ಷ್ಯ ಇರಬೇಕು
ಈ ಧರಣಿ ಮೇಲೆ ಶರೀರವಿರುವ ತನಕ ಪ

ಸೂರ್ಯನಿರುತಲಿರೆ ಸೂರ್ಯನೊಳ್ ಪ್ರಭೆ ಹುಟ್ಟಿ
ಸೂರ್ಯನೊಳಗೆ ಪ್ರಭೆಯು ಅಡಗುವಂತೆ
ಉರ್ವಿ ಎನ್ನಲಿ ಪುಟ್ಟಿ ಎನ್ನಲಿ ಲಯವೆಂದು
ಸರ್ವಕಾಲದ ನಿತ್ಯ ಸಾಕ್ಷಿ ವಿಷಯದಲಿ ೧

ಉದಕವಿರುತಿರೆ ಉದಕದೊಳ್ ತೆರೆ ಪುಟ್ಟಿ
ಉದಕದೊಳಗೆ ತೆರೆಯು ಅಡಗುವಂತೆ
ಇದುವೆ ಎನ್ನಲಿ ಜಗವಿದೆನ್ನಲಿ ಲಯವೆಂದು
ವಿಧಿಸಿ ನಿಶ್ಚಯದಿಂದ ನಿತ್ಯ ವಿಷಯದಿಂದ ೨

ನಭವು ಇರುತಲಿರೆ ನಭದಿ ಮೇಘವು ಹುಟ್ಟಿ
ನಭದೊಳಗೆ ಮೇಘವು ಅಡಗುವಂತೆ
ಈ ಭುವನವೆನ್ನಲಿ ಪುಟ್ಟಿ ಎನ್ನಲಿಲಯವೆಂದು
ಪ್ರಭು ಚಿದಾನಂದ ತಾನೆಂಬ ವಿಷಯದಲಿ ೩

## ೩೪೭

ಇಹವಸ್ತುವೊಂದೇ ಜಗದೊಳಗೆ ಇಹವಸ್ತುವೊಂದೇ
ಸೋಹಂ ಸೋಹಂ ಸೋಹಂ ಸೋಹಂ
ಸೋಹಂ ಸೋಹಂ ಸೋಹಂ ಎಂದೇ ಪ

ಸಂಗ ದೂರೆನಿಸಿ ಸಂಗವೆ ತಾನೆನಿಸಿ
ಮಂಗಳ ಮಂಗಳ ಮಂಗಳ ಮಂಗಳ
ಮಂಗಳ ಮಂಗಳ ಮಂಗಳವೆಂದೇ ೧

ಜ್ಞಾನವೆ ತಾನಾಗಿ ಅಜ್ಞಾನಕೆ ತಾದೂರಾಗಿ
ತಾನೇ ತಾನೇ ತಾನೇ ತಾನೇ
ತಾನೇ ತಾನೇ ತಾನೇ ಎಂದು ೨

ವರ್ಣಂಗಳು ಆರು ಮೀರುವರ ಚಿದಾನಂದ ಗುರು
ಪೂರಣ ಪೂರಣ ಪೂರಣ ಪೂರಣ
ಪೂರಣ ಪೂರಣ ಪೂರಣವೆಂದು ೩

## ೩೪೮

ಊಟ ಮಾಡಿದೆನು ಬ್ರಹ್ಮಾನಂದದ ಊಟವ
ಆರು ಅರಿಯದ ಯೋಗ್ಯರು ಎಂಬ ಊಟ ಪ

ಸದ್ಗುರು ಎಂದೆಂಬ ಅನ್ನಪೂರ್ಣ ತಾನು
ಶುದ್ಧ ಹೃದಯವೆಂಬ ಹರಿವಾಣದೊಳಗೆ
ಸಿದ್ಧನೆಂಬ ನಾನಾ ಭಕ್ಷ್ಯ ಭೋಜ್ಯ ಪಾಯಸವ
ಸಿದ್ಧ ಗುರುವೇ ತಂದು ಎನ್ನ ಮುಂದಿಡಲು ೧

ಆತ್ಮ ಎಂಬ ಅನ್ನಕ್ಕೆ ಅಷ್ಟಾಂಗ ತೊವ್ವೆಯನು ಹಾಕಿ
ಸ್ವಾತ್ಮ ಸುಖವೆಂದೆಂಬ ತುಪ್ಪವನೆ ಹೊಯ್ದು
ಆತ್ಮ ನಾನೆರಡಲ್ಲವೆಂಬ ಸಮರಸವ ಕಲಸಿ
ಎತ್ತಿ ಸವಿದೆನು ನಾನು ಅನುಭವದ ತುತ್ತ ೨

ಸಾರಾಮೃತವೆಂಬ ಸಾರನೇ ಸುರಿಯುತ
ತೋರುತಿಹ ಚಿದ್ಬಿಂದು ಹಿಂಡಿಯನೆ ನಂಜಿ
ಮೀರಿದಾನಂದಗುಳ್ಳೂರಿಗೆಯ ಮಂಡಿಗೆಯ
ತೋರುವೆಚ್ಚರು ಮರೆತು ಹಾಯೆನುತಲುಂಡು ೩

ಹೇಳಬಾರದ ಪರಮಾತ್ಮ ಪರಮಾನ್ನ ಸುರಿದು
ಮೇಲೆ ಗುರುದಯದ ಉದಕವನೆ ಕುಡಿದು
ಮೂಲನಾದವ ಘೋಷ ಸುತ್ತೆಲ್ಲ ಪಸರಿಸಲು
ಗೋಲ ನಾನಾ ತೇಜ ದೀಪ ಬೆಳಕಿನಲ್ಲಿ ೪

ಇಂತೂಟವನೆ ಉಂಡು ನಿಜ ತೃಪ್ತಿಯದಾಗೆ
ಅಂತು ಕಳೆದೆನು ಅವಿದ್ಯದ ಕಡು ಹಸಿವನು
ಚಿಂತಯಕ ಚಿದಾನಂದ ಅನ್ನ ಪೂರ್ಣನು ಎಣಿಸೆ
ಎಂತು ಹೇಳಲಿ ಮರೆತೆ ಸರ್ವವನು ತೃಪ್ತಿಯಲಿ ೫

## ೩೪೯

ಊರ ದೇವರ ಮಾಡಿ ಊರ ಶಾಂತಿಯಾಗಲಿ
ಊರದೇವತೆ ಗುರು ಚಿದಾನಂದ ತಾನೆನುತ ಪ

ಶುದ್ಧ ಸುನಾದವೆನಿಸುವ ಡಂಗುರವ ಸಾರಿ
ಸಾಧು ಶಮೆ ದಮೆ ಎಂಬ ಮೊಳಕೆ ಹೊಯ್ದು
ವೇದಾಂತವೆಂದೆಂಬ ಹಂದರವನೆ ಹಾಕಿ
ವಾದಾತೀತಾತ್ಮದೇವಿಯ ಎದುರುಗೊಂಡು ೧

ಹಲವು ನಾದಗಳೆಂಬ ವಾದ್ಯಗಳನೇ ನುಡಿಸಿ
ಬೆಳಗುತಿಹ ತೇಜಃಪುಂಜಗಳ ಮುಟ್ಟಿಸಿಯೆ
ಹೊಳೆಯುತಿಹ ನಾನಾ ಕಳೆ ಬರಿಸು ಬತ್ತಿಯ ಹಚ್ಚಿ
ಬಳಿಕ ಚಿತ್ಕಳೆ ಎಂಬ ದೇವಿಯನು ಮೆರೆಸುತ್ತ ೨

ಅಡ್ಡಾಡುವ ಮನವ ಹಿಡಿ ತಂದು ಕಟ್ಟಿ
ದೊಡ್ಡ ಅಹಂಕಾರದ ಕೋಣವನು ಕಡಿಸಿ
ಹೆಡ್ಡ ಕಾಮವದೆಂಬ ಕುರಿಯ ತಲೆ ಕಡಿಸಿ
ಗೊಡ್ಡು ಗುಣಗಳು ಎಂಬ ಚೆರುಗ ಚೆಲ್ಲಿಸುತ್ತ ೩

ಸಿದ್ಧ ತಾನೆಂದೆಂಬ ಅಡುಗೆಯದು ಆಗಲು
ಸಿದ್ಧ ಪುರುಷರು ಎಲ್ಲ ಉಣಲು ಕುಳ್ಳಿರೆ
ಶುದ್ಧ ತೃಪ್ತಿಯು ಎಂಬ ಔತಣವು ಮುಗಿಯಲು
ಅದ್ದಿಸಿರಿ ಆನಂದದಲಿ ಊರ ಜನರ ೪

ಊರೆಂಬುದು ನಿಮ್ಮ ದೇಹವೇ ತಿಳಿಯಿರೋ
ಊರ ದೇವತೆ ನೀನು ನಿಜವನರಿಯೋ
ಊರ ದೇವರ ಮಾಡಿ ಆನಂದಪಡೆಯೋ
ಇದಕೆ ತಾ ಸಾಕ್ಷಿ ಚಿದಾನಂದನರಿಯೋ ೫

## ೩೫೦

ಎಂದೆಂದು ಕಂಡುದಿಲ್ಲಮ್ಮ
ಎಂದೆಂದು ಕಂಡುದಿಲ್ಲಮ್ಮ ಗುರು

ಇದೀಗ ತೋರಿದ ನಮ್ಮ ಮನ
ಸಂದೇಹವು ಹರಿಯಿತಮ್ಮ ನೀನೇ
ಎಂದೆನೆ ಹರುಷಾದೆ ನಮ್ಮ ಬ್ರಹ್ಮವನಮ್ಮ ಪ

ರೂಪುನಾಮವು ಅದಕ್ಕಿಲ್ಲವಮ್ಮ ಅದು
ಹೋಗುವುದಿಲ್ಲ ಬರುವುದಿಲ್ಲಮ್ಮ ಎಲ್ಲ
ವ್ಯಾಪಕವಾಗಿಹುದಮ್ಮ ದೀಪವೆ
ತುಂಬಿಹುದಮ್ಮ ಬ್ರಹ್ಮವದಮ್ಮ ೧

ಕಾಯದ ಒಳಗೆ ಹೊರಗಮ್ಮ ಗುರು
ರಾಯನ ದಯವಾಗಬೇಕಮ್ಮ ತನ್ನ
ಮಾಯೆ ಬಿಟ್ಟರೆ ತೋರುವುದಮ್ಮ ಬ್ರಹ್ಮವದಮ್ಮ ೨

ಮಂದಿರ ಮನೆ ಪಶುರೂಪವಮ್ಮ ಜಗ
ವೊಂದೆ ಅಖಂಡವಿಹುದಮ್ಮ
ತಂದೆ ತಾಯಿ ಮಕ್ಕಳು ತಾನೆ ಅಮ್ಮ
ಚಿದಾನಂದನೆ ತಾನೆಂದ ನಮ್ಮ ಬ್ರಹ್ಮವನಮ್ಮ ೩

## ೩೫೧

ಎಲೆ ಜೀವನ್ಮುಕ್ತ ನೀನೆ ಬ್ರಹ್ಮವೆಂದು ಕಾಣೋ
ಎಲೆ ಜೀವನ್ಮುಕ್ತ ನೀನೆ ಬ್ರಹ್ಮವೆಂದು ಕಾಣೋ ಪ

ಭಾನುವ ನೋಡಲು ಒಳಕಂಡಿಯ ಹಂಗ್ಯಾಕೆ
ನೀನು ನಿನ್ನರಿವುದಕೆ ಯೋಗಗಳ ಸಾಧನ ಬೇಕೆ ೧

ನಳಿನ ಸಖನ ನೋಡುವುದಕೆ ಬೆಳಕನು ಕೋರಲುಬೇಕೆ
ಬಲು ನಿನ್ನನು ಕಾಣುವುದಕೆ ಸಾಧಕರ ಸಾಧನ ಬೇಕೆ ೨

ಯೋಗಗಳೆಂಬುವುದಿನ್ನು ಜೀವ ಭ್ರಾಂತಿಯೆನ್ನು
ಈಗಲು ಇತರರಿಲ್ಲೆನ್ನು ಚಿದಾನಂದ ಸದ್ಗುರು ತಾನೆ ಎನ್ನು ३

## ३೫೨

ಕಂಡದಿಲ್ಲದ ಚಿತ್ರ ನಾ ಕಂಡೆ ಪ

ಕೋತಿ ಸತ್ತುದ ಕಂಡೆ ಕೋಣನಳಿದುದ ಕಂಡೆ
ಮಾತಿಗೆ ಬಾರದ ನಾಯ ಹರಿ ತಿಂಬುದ ಕಂಡೆ ೧

ಕಾಗೆ ಕಣ್ಣು ಹೋದುದ ಕಂಡೆ ಕಳ್ಳರ ತಲೆ ಬಿದ್ದುದ ಕಂಡೆ
ಕೋಗಿಲೆ ಕೊನೆಯಲಿ ಕೂಗಿದುದ ಕಂಡೆ ೨

ಮರವ ಕಡಿದುದ ಕಂಡೆ ನೆರಳಲಿ ನಿಂತುದ ಕಂಡೆ
ಬರಿಯ ವೋಡಲಿ ಹಾಲ ಕರೆದುಂಬುದ ಕಂಡೆ ३

ನೀರ ಮೇಲೆ ಒಲೆ ಉರಿವುದ ಕಂಡೆ
ಮೇರುವಿನ ಶಿಖರದಿ ಜ್ಯೋತಿಯ ಕಂಡೆ ೪

ಇರುಳು ಹಗಲು ಒಂದಾಗಿ ಇರುವುದ ಕಂಡೆ
ಗುರು ಚಿದಾನಂದ ಬ್ರಹ್ಮವ ಗುರುತಿಲ್ಲದ ಕಂಡೆ ೫

## ३೫३

ಕೇಳಕ್ಕಯ್ಯ ನಾ ಮಾಡಿದ ಮದುವೆ ಮನಸಿಗೆ ಬರುತ್ತದೆ
ಕೇಳಕ್ಕಯ್ಯ ನಾ ಮಾಡಿದ ಮದುವೆ ಮನಸ್ಸಿಗೆ ಬರುತ್ತದೆ ಪ

ಮುಂಡಕೆ ದಂಡೆಯ ಮಾಡಿಸಿದೆ
ಮುಸುಕಲಿ ಸೋಭಾನ ಮಾಡಿದೆ
ಮುಂಡಕೆ ರುಂಡವ ಕೂಡಿಸಿದೆ ಮಂಗಳಾರತಿ ಬೆಳಗಿಸಿದೆ ೧

ಕೋತಿಯು ಅಲ್ಲಿ ಕುಣಿಯುತ್ತಿತ್ತು
ಕೋಣವು ಮದ್ದಲೆ ಬಾರಿಸುತ್ತಿತ್ತು
ಕೋತಿಯ ಕಾಲನೆ ಮುರಿದೆ ಕೋಣನ ಮದ್ದಲೆ ಮುರಿದೆ ೨

ಹಾರುವವನನು ಕಟ್ಟಿ ಹಾಕಿಸಿದೆ ಹಾದಿಲಿ ದೀಪವ ಹಿಡಿಸಿದೆ
ಮೂರು ಮನೆಯ ಮೇಲಟ್ಟದಲ್ಲಿ
ಮೆರವಣಿಗೆಯನೆ ಮಾಡಿಸಿದೆ ೩

ಒಳ್ಳೆ ಬೀಗರ ಬೆಳ್ಳಿ ತಳಿಗೆಯಲ್ಲಿ ಎಲ್ಲರ ಒತ್ತೊತ್ತಾಗಿ ಕೂರಿಸಿದೆ
ಬೆಲ್ಲದ ಪರಮಾನ್ನವನೆ ಉಣಿಸಿದೆ
ಬೆಳ್ಳನೆ ಉಡುಗೊರೆ ಹೊದಿಸಿದೆ ೪

ಗುಡ್ಡ ಮೂರ ಕೊನೆಯಲಿದ್ದ ಅಡ್ಡಗಲದ ದೇವರ ಮನೆಗೊಯ್ದು
ದೊಡ್ಡ ಚಿದಾನಂದ ಗುರುವಿಗೆ ನಾ
ಅಡ್ಡಗೆಡವಿ ಮದುವೆ ಮಾಡಿಸಿದೆ ೫

## ೩೫೪

ಗಾಂಜ ಸೇದುವ ಬನ್ನಿ, ತಿಳಿವಿನ ಗಾಂಜ ಸೇದುವ ಬನ್ನಿ
ಗಾಂಜ ಸೇದಿದರೆ ನಿಮಗೆ ಭವವಿಲ್ಲ ವೆನ್ನಿ ಪ

ಅವಗುಣವೆಂಬ ಭೂಮಿ ಶೋಧಿಸಿ ಅಗೆತ ಮಾಡಿದ ಗಾಂಜ
ಸವನಿಸಿದ ಖೊರಾಕು ಹಾಕಿದ ಸತ್ವವಾದ ಗಾಂಜ ೧

ಸಾಧನೆ ಎಂಬ ನೀರು ಕಟ್ಟಿದ ಸಡಕು ಆದ ಗಾಂಜ
ಭೇದವೆಂಬ ಕಳೆಯ ಕೆತ್ತಿದ ಬೋಧವೆಂಬ ಗಾಂಜ ೨

ಭಜನೆ ಭಾವದಿಂದ ಬೆಳೆದ ಬಡಕು ಆದ ಗಾಂಜ
ಕುಜನವೆಂಬ ಎಲೆಗಳ ಚಿವುಟಿದ ಕಡಕು ಆದ ಗಾಂಜ ೩

ನಾನು ಎಂಬ ಹೂವು ಉದುರಿದ ನೊಣ ಹಾರದ ಗಾಂಜ
ಜ್ಞಾನವೆಂಬ ಗೊಂಡೆಗಳಳಿದ ಘನ ತಾನಾದ ಗಾಂಜ ೪

ಏನೇನ ಅರಿವು ಎಲ್ಲ ಅಡಗಿದ ಏಕವಾದ ಗಾಂಜ
ತಾನೆ ಚಿದಾನಂದ ಸದ್ಗುರು ವಾದ ತಾನೆ ತಾನಾದ ಗಾಂಜ ೫

## ೩೫೫

ಗುಲ್ಲು ಹುಟ್ಟಿತು ಗ್ರಾಮದೊಳಗೆ
ಗಲಿಬಿಲಿಯಾಯಿತು ನೀವು ಕೇಳಿ
ಖುಲ್ಲರು ಕುಲಸಹ ಕೂಡೆ ಮಡಿದರು ನೀವು ಕೇಳಿ ಪ

ಮರ ಮುರಿದೊರಗಿತು ನೆರಳೆ ನೆಲೆಯಾಯಿತು ನೀವು ಕೇಳಿ
ಕುರಿತಳೇ ಸತ್ತವು ನರಿ ಮಾಳಿಗೆ ಏರಿತು ನೀವು ಕೇಳಿ ೧

ಅತ್ತೆಯು ಅಳಿದಳು ಸೊಸೆಯು ಸುಖಿಸಿದಳು ನೀವು ಕೇಳಿ
ಮುತ್ತೈದೆಯಾದಳು ರಂಡೆ ತಾನೀಗ ನೀವು ಕೇಳಿ ೨

ಕೊಡವೊಡೆಯಿತು ಕಳ್ಳರ ತಲೆ ಹೋದವು ನೀವು ಕೇಳಿ
ನಡೆದುಹೋದರು ಬಯಲೂರಿಗೆ ಗೂಳೆಯ ನೀವು ಕೇಳಿ ೩

ಮಂಡೆಗೆ ಕೈ ಬಂದಿತು ಮುರುಕು ಆಯಿತು ಹುಟ್ಟು ನೀವು ಕೇಳಿ
ರುಂಡವಿಲ್ಲದೆ ತಲೆ ಬಂದು ಹತ್ತಿತು ನೀವು ಕೇಳಿ ೪

ಗುಡ್ಡದ ಸಂದಿಯ ನೀರನೆ ಕುಡಿದು ನೀವು ಕೇಳಿ
ದೊಡ್ಡ ಚಿದಾನಂದ ಗುರುವ ಸೇರಿದರು ನೀವು ಕೇಳಿ ೫

## ೩೫೬

ಜಂಗಮನು ಇಂತಿವನು ಸರ್ವ
ಸಂಗ ದೂರಾದವನೀಗ ಜಂಗಮ ಪ

ತನ್ನ ತಿಳಿದು ತಾನಾದವ ಜಂಗಮ ಜಗವ
ಭಿನ್ನವೆಂದು ಕಾಣದವ ಜಂಗಮ
ಹೊನ್ನು ಹೆಣ್ಣು ಬಿಟ್ಟವನು ಜಂಗಮ ಸಂ–
ಪನ್ನ ಸಾಧು ಸಂಗವಿಹ ಜಂಗಮ ೧

ಒಳಗೆ ಹೊರಗೆ ಒಂದಾದವ ಜಂಗಮ ಎಲ್ಲ
ಹೊಳೆವುದೊಂದೆ ಜ್ಯೋತಿಯು ಎಂಬುವ ಜಂಗಮ
ಹೊಲೆಯು ಶುದ್ಧವ ಕಳೆದವ ಜಂಗಮ ಎನಗೆ
ಕುಲವು ಛಲವು ಇಲ್ಲವೆಂಬುವ ಜಂಗಮ ೨

ಅಂಗ ಲಿಂಗವಾಗಿಹ ಜಂಗಮ
ಲಿಂಗ ಅಂಗ ಏಕವಾಗಿಹ ಜಂಗಮ
ಮಂಗಳವೇ ನಿತ್ಯವಿಹ ಜಂಗಮ ಗುರು
ಲಿಂಗವಾದ ಚಿದಾನಂದ ಜಂಗಮ ೩

## ೩೫೭

ಜ್ಞಾನದ ಬೆಳೆಯನು ಬೆಳೆಯೊ ಶ್ರೀಗುರು
ಬಲವನು ನೀ ಪಡೆಯೋ ಪ

ನಾದಗಳೆತ್ತನು ಹೂಡು ಅದಕೆ ತ್ರಿಗುಣದ ಕೂರಿಗೆ ಜೋಡು
ಬೋಧದ ಬೀಜವು ನೋಡು ಮನಸಿನ ಹೊಲದಲಿ ಬಿತ್ತಿಬಿಡು ॥

ಧರ್ಮದೆಡೆಯ ಹಿಡಿದು ಬಳಿಕ ಕರ್ಮ ಕಸವ ಕಳೆದು
ನಿರ್ಮಳ ಬೆಳೆಗೊಂಡು ಗುರು ತಾ ಸ್ವರ್ಮಣಿ ಬಲಗೊಂಡು ೨

ತೇಜರಾಶಿಗಳನೆಳೆದು ರಾಜಿಪ ರಾಜ ಕೊಳಗದಲಿ ಅಳೆದು
ಭೋಜನಕೆ ಎಡೆಮಾಡಿ ಚಿದಾನಂದ ಸಹಜ ಮೂರುತಿಗೂಡಿ ।೩

## ೩೫೮

ತನ್ನನು ತಿಳಿದೇ ತಾನೇ ನೋಡಲಿ ಆನಂದಾನಂದಂ
ತನ್ನನು ಕಂಡೆ ತಾನಾಗಿರುತಿರೆ ಆನಂದಾನಂದಂ ಪ

ಶ್ರವಣ ಮನನ ನಿಧಿಧ್ಯಾಸನ ಸಾಧಿಸೆ ಆನಂದಾನಂದಂ
ಶ್ರವಣ ಮನನ ನಿಧಿಧ್ಯಾಸದಿ ಬೆರೆತಿರೆ ಆನಂದಾನಂದಂ ೧

ಒಳ ಹೊರ ಸಾಧಿಸೆ ತನ್ನನು ತಾನು ಆನಂದಾನಂದಂ
ಒಳ ಹೊರಗೆಂಬುದ ಮರೆತರೆ ನಿಜದಿಂ ಆನಂದಾನಂದಂ ೨

ಲಕ್ಷ್ಯವು ಕೂರಲು ತನ್ನಲಿ ನಿಜದಿಂ ಆನಂದಾನಂದಂ
ಲಕ್ಷ್ಯವು ನಿಲ್ಲೆ ಸಾಕ್ಷಾತಿರುತಿಹ ಆನಂದಾನಂದಂ ೩

ನಾದವ ಕೇಳುತ ಸುಖದಲಿ ಮಲಗಿರೆ ಆನಂದಾನಂದಂ
ನಾದವ ಮರೆತೇ ನಾದವ ಮೀರಿರೆ ಆನಂದಾನಂದಂ ೪

ಉರಿವ ಕರ್ಪೂರದಂದದಲಿರುತಿದೆ ಆನಂದಾನಂದಂ
ಉರಿವ ಕರ್ಪೂರವು ತಾನಾಗಿದ್ದುದೆ ಆನಂದಾನಂದಂ ೫

ಬ್ರಹ್ಮವೆ ತಾನೆಂದು ತನ್ನಲೆ ಕಾಣಲು ಆನಂದಾನಂದಂ
ಬ್ರಹ್ಮವು ತಾನಾಗಿ ತನ್ಮಯನಾಗಿರೆ ಆನಂದಾನಂದಂ ೬

ನರನು ತನ್ನನು ಗುರುವೆಂದು ಕಾಣಲು ಆನಂದಾನಂದಂ
ಗುರು ಚಿದಾನಂದನು ಸಹಜವಾಗಿರೆ ಆನಂದಾನಂದಂ ೭

## ೩೫೯

ತನು ಸಹ ಕಾಂಬುದೆ ಬ್ರಹ್ಮ
ಸತ್ಯವು ಸತ್ಯವ ಕೇಳೆಲೋ ತಮ್ಮ
ತನು ಸಹ ಕಾಂಬುದೆ ಬ್ರಹ್ಮ
ತನುವನು ಬಿಟ್ಟು ಬೇರೇನೂ ತೋರದು
ನಿನಗೆ ಅರಿದು ನಿಮ್ಮಪ್ಪಗೆ ಅರಿದು ಪ

ಹೂವನೆ ಮುಂದೆ ಮುಂದಿಟ್ಟುಕೊಂಡು
ಸರ ಕಟ್ಟಬಹುದು ದೊಡ್ಡ ಚೆಂಡು
ಹೂವನೆ ಮುಂದಿಟ್ಟಿಕೊಂಡು
ಹೂವನೆ ಬಿಟ್ಟು ಪರಿಮಳ ಕಟ್ಟೆನೆ
ಅವ್ವಗೆ ಅರಿದು ಅವ್ವನವ್ವಗೆ ಅರಿದು ೧

ಮುತ್ತದು ಕೇವಲ ಜ್ಯೋತಿ ಕಿವಿಗೆ
ಮುತ್ತಿಡುವರಿಗದು ನೀತಿ
ಮುತ್ತದು ಕೇವಲ ಜ್ಯೋತಿ
ಮುತ್ತದು ಬಿಟ್ಟು ಜ್ಯೋತಿಯ ಬಿಡು ಎನೆ
ಮುತ್ತದು ಅಜಗೆ ಅರಿದು ಮಹೇಶ್ವರಗರಿದು ೨

ಬೆಲ್ಲದ ಮುದ್ದೆಯ ನೋಡು
ಹಲ್ಲಿನಿಂದಲೇ ತಿನಬೇಕು ಕಡಿದು
ಬೆಲ್ಲದ ಮುದ್ದೆಯ ನೋಡು

ಬೆಲ್ಲವನು ಬಿಟ್ಟು ಸಿಹಿಯನು ತಿನ್ನೆನೆ
ಬಲ್ಲ ಚಿದಾನಂದ ಸದ್ಗುರುಗರುದು ೩

## ೩೬೦

ತಾನೇ ಬ್ರಹ್ಮ ತಾನೇ ಬ್ರಹ್ಮ
ತಾನೇ ತಾನೆಯಾಗಿ ತನ್ನನೆ ಮರೆತರೆ ಪ

ಮನಸಿನೊಳಗೆ ಕೂಡಿ ಮನಸದು ಎರಡಾಗಿ
ಮನದ ಅರಿವ ನಿಜದರಿವನೆ ಅರಿತರೆ ೧

ಬುದ್ಧಿಯೊಳಗೆ ಕೂಡಿ ಬುದ್ಧಿಯದು ಎರಡಾಗಿ
ಬುದ್ಧಿಯ ಅರಿವು ನಿಜದರಿವನೆ ಅರಿತರೆ ೨

ಇಂದ್ರಿಯ ದೊಳಗೆ ಕೂಡಿ ಇಂದ್ರಿಯಗಳೆರಡಾಗಿ
ಇಂದ್ರಿಯವರಿದ ಚಿದಾನಂದನು ಅರಿತರೆ ೩

## ೩೬೧

ತಾನೇ ಬ್ರಹ್ಮನಿರುತಲಿರೆ
ತಾನೇ ವಸ್ತುವಿರುತಲಿರೆ
ತಾನೇ ತನ್ನ ತಿಳಿಯಲಾರದೆ
ಏನೇನೋ ಮಾಡುತಲಿಹರು ಪ

ಆಸನವನು ಒಲಿದು ಒಲಿದು
ನಾಸಿಕದೊಳು ದೃಷ್ಟಿಯಿಟ್ಟು
ಸೂಸಲೀಯದೆ ಮನವ ನಿಲ್ಲಿಸಿ
ಈಸು ಪರಿಯ ಕಾಂಬುದೇನೋ ೧

ಅನ್ನವ ವರ್ಜಿಪುದಾರಿಗೆ
ಅಡವಿಯೊಳು ಇಹುದು ಯಾರಿಗೆ
ತನ್ನ ತಿಳಿಯಲಾರದ ದುಃಖ
ತನ್ನ ನಿಂತು ಮಾಡುತಲಿಹುದು ೨

ಚೇತನರಹಿತ ಶರೀರಕ್ಕೆ
ಚೇತನವಾಗಿ ತಾನೆ ಇರ್ದು
ಚೇತನಾತ್ಮಕ ಚಿದಾನಂದ
ಚೇತನನಾಗಿ ಆಡುತಲಿರೆ ೩

## ೩೬೨

ದೀಪ ಮುಟ್ಟಿಸಿ ಅಕ್ಕ ದೀಪ ಮುಟ್ಟಿಸಿ ಅಕ್ಕ
ದೀಪ ಮುಟ್ಟಿಸೆ ಮನೆಗೆ ಈಗ ದೇವರು
ನಿನಗೆ ಕಾಣಬಹುದು ಪ

ದೇಶಿಕ ಕರುಣೆಂಬೆ ಅಕ್ಕ ದಿಟ್ಟದ ಬೆಂಕಿಯು ಅಕ್ಕ
ನಾಸಿಕ ಕೊನೆ ಭ್ರೂಮಧ್ಯದ ಒಲೆಯು
ನಂದದ ತೆರದಲಿ ವೈನದಲಿಟ್ಟೆ ೧

ಕಾಮ ಕ್ರೋಧವೆಂಬುವ ಅಕ್ಕ ಕರಡನೆ ಹಾಕಿ ಅಕ್ಕ
ಸೋಮ ಸೂರ್ಯಸ್ವರ ಕೊಳವಿಯಲೂದಿ
ಸೂರಿಯ ಕೋಟಿ ಎಂಬ ಉರಿಯನೆ ಮಾಡಿ ೨

ಜ್ಞಾನ ಜ್ಯೋತಿಯು ಅಕ್ಕ ಘನವಾಗಿ ಮುಟ್ಟಿಸೆ ಅಕ್ಕ
ತಾನು ತಾನಾದ ಮನೆಮನೆ ಹೊಕ್ಕು
ತಾನಾದ ಚಿದಾನಂದ ಬ್ರಹ್ಮವ ಕಾಣುವ ೩

## ೩೬೩

ದೇಹ ಭಾವವು ಹೋಗಿ ದೇವನೇ ತಾನಾಗಿ
ದೇಹಗುಣವೆಲ್ಲಿಯದೋ ಮುಕ್ತ ಪ

ಗರುಡನ ಮನೆಯೊಳಗೆ ನಾಗರ ಜಾತಿಯ
ಪರಿ ನಡೆವುದೇನೋ ಮುಕ್ತ
ಶರೀರ ಸಹಿತದ ಬ್ರಹ್ಮಾಗ್ನಿ ತಾನಿರೆ
ಹರಿವವೆ ಪ್ರಾಣಗಳು ಮುಕ್ತ ೧

ಉರಿಯದು ಉರಿಯಲು ಉರಿಯಲಿ
ಅರಗದು ಇಹುದೇನೋ ಮುಕ್ತ
ಕರುವಿಟ್ಟೆರಕದಿ ಥಳಥಳ ಹೊಳೆಯದೆ
ಇರುವುದೇ ಈ ಇಂದ್ರಿಯಗಳು ಮುಕ್ತ ೨

ರವಿಯದು ಬೆಳಗಿರೆ ಕಿರಣ ಕಾಂತಿಯಿಂ
ಗೂಗೆಗಳೆಲ್ಲ ತಿರುಗುವವೋ ಮುಕ್ತ
ಖವ ಖವ ಖವಿಸುತ ಪರವಶವಿರೆ
ವಿವರಿಸೆ ಮನವೆಲ್ಲೊ ಮುಕ್ತ ೩

ಈಶನ ಕಣ್ಣುರಿ ಭುಗು ಭುಗು ಭುಗಿಲೆನೆ
ಏಸು ಉಳಿವುದು ಕಾದು ಮುಕ್ತಿ
ಸೂಸುವ ಮುಖದಲಿ ತೃಪ್ತಿಯೆ ತುಂಬಿರೆ
ವಾಸನೆ ಎಲ್ಲಿಹುದೋ ಮುಕ್ತ ೪

ಪರಮಾತ್ಮನು ತಾ ಪರಿಪೂರ್ಣನಾನಿರೆ
ಮೆರೆವುದು ಅವಿದ್ಯೆ ಮುಕ್ತ
ಗುರು ಚಿದಾನಂದ ಸಹಜದಿ ತಾನಿರೆ
ಇರುವುದೆ ಜೀವತ್ವ ಮುಕ್ತ ೫

## ೩೬೪

ನಗುವು ಬರುತಿದೆ ಎನಗೆ ನಗುವು ಬರುತಿದೆ
ಬಿಗಿದು ಶ್ವಾಸ ಮೂಗ ಹಿಡಿದು ನಿಟಿಲ
ನೋಡುವವರ ಕಂಡು ಪ

ಹಡೆದ ದೈವ ಹತ್ತಿರಿರಲು ನೋಡಿದರು ನೋಡದಂತೆ
ಮೃಡನು ತಾನೆ ಇರಲು ಮೂಗ ಕೊನೆಯ ನೋಡುವವರ ಕಂಡು ೧

ಹೊಳೆಯುತಿಹುದು ಪರಬ್ರಹ್ಮ ನಾನಾ ರೂಪಗಳನು ತಾಳಿ
ತಿಳಿಯದಲೆ ತನ್ನನೀಗ ಕಣ್ಣು ಮುಚ್ಚುವವರ ಕಂಡು ೨
ಮನಕೆ ನಿಲುಕದವನು ತಾನೆ ಮಂಗಳವಾಗಿ ಬೆಳಗುತಿರಲು
ಮನದಿ ಪೂಜೆಯನ್ನು ಮಾಡ್ವ ಮಂದಮತಿಗಳನ್ನು ಕಂಡು ೩

ತಾನು ದೇವ ನಿಜವಿದಿರಲು ತಂದು ಪ್ರತಿಮೆ ಇಟ್ಟುಕೊಂಡು
ಏನೋ ಮಂತ್ರ ಒದರುತಿರುವ ಮನುಜರನ್ನು ಕಂಡು ನನಗೆ ೪

ಯೋಗ ಮಾಡಿಕೊಂಬುದೇನು ಯೋಗಮಾಡುವವನೆ ಇರಲು
ಯೋಗಿಯಾದ ಚಿದಾನಂದ ತಾನೆ ಸಾಕ್ಷಿಯಾಗಿ ಇರಲು ೫

## ೩೬೫

ನನಗೆ ಹೊತ್ತು ಹೋಗದೆ ನಾನೆಯೆ ಆಡುವೆ
ನನಗೆ ಹೊತ್ತು ಹೋಗದೆ ಪ

ಈಶನ ಅವತಾರವಾಗಿ ಜೀವನ ಅವತಾರವಾಗಿ
ಈಶನಾಗಿ ಜೀವ ಬೊಂಬೆಯನಾಡುವೆ ೧

ಜೀವರ ಹುಟ್ಟಿಸಿಯೆ ಜೀವರ ಬೆಳೆಸಿಯೇ
ಜೀವರಲಿ ಲಯಿಸುವೆ ತ್ರೈಮೂರ್ತಿಯಾಗುವೆ ೨

ಎಚ್ಚರವನೆ ಕೊಟ್ಟು ಎಚ್ಚರವನೆ ಕೊಟ್ಟು
ಎಚ್ಚರವನೆ ತಿಳುಹಿ ನಿಚ್ಚಳ ಚಿದಾನಂದನನು ಮಾಡುವೆ ೩

## ೩೬೬

ನೋಡು ನೋಡು ಬ್ರಹ್ಮವ ಮುಕ್ತನೆ
ನೋಡು ನೋಡು ಬ್ರಹ್ಮವ
ನೋಡು ನೋಡು ಬ್ರಹ್ಮವನ್ನು
ಗೂಢವಲ್ಲ ಎದುರಿಲ್ಲದೆ
ಆಡಲಿಕ್ಕೆ ನಾಲಗಿಲ್ಲ ಸರ್ವರೂಪದಲ್ಲಿದೆ ಪ

ಸ್ತ್ರೀಯ ರೂಪಾಗಿದೆ ಪುರುಷ ರೂಪಾಗಿ ಇದೆ
ಸ್ತ್ರೀಯು ಅಲ್ಲ ಪುರುಷನಲ್ಲ ಅಹುದು
ಅಹುದು ಅಹುದು ಅಲ್ಲ ೧

ಸತಿಯು ಪತಿಯು ಆಗಿ ಇದೆ
ಸುತರು ಸೊಸೆಯು ಆಗಿ ಇದೆ
ಅತಿ ಬಳಗವಾಗಿ ಇದೆ ಎಲ್ಲ ವೇಷ ಹಾಕಿ ಇದೆ ೨

ಎಲ್ಲವಾಗಿ ಆಡುತಿದೆ
ಎಲ್ಲವಾಗಿ ಪಾಡುತಿದೆ
ಎಲ್ಲವಾಗಿ ಚಿದಾನಂದ ಬ್ರಹ್ಮವೀ ಪರಿಯಲಿದೆ ೩

## ೩೬೭

ಪಡಿಶಟ್ಟು ಪಟ್ಟಣವ ಕೇಳದೆಯಕ್ಕ
ಪಡಿಶಟ್ಟು ಪಟ್ಟಣವ
ಪಡಿಶಟ್ಟು ಪಟ್ಟಣದ ವಿವರ ಕೇಳೇ
ಹುಟ್ಟಳಿವುದಕೆ ಕಡೆಯಿಲ್ಲ ಪ

ಪಟ್ಟಣದರಸಗೆ ತಲೆಯೇ ಇಲ್ಲ
ಪಟ್ಟಣದರಸನ ಹೆಂಡತಿ ರಂಡೆ
ಪಟ್ಟಿಗೊಡುವ ಓಲೆಕಾರರು ಪಾಪಾಶಿ ಬೆಲೆಯವರು ೧

ಸಿಂಗಲೀಕನವ ಪ್ರಧಾನಿ ಶಿಷ್ಟನೀಗವನು ಕೋಣ
ಮಂಗಳನೀಗವನು ತಳವಾರ
ಅಂಗತಿರುಗುವವನೆ ೨

ಕರಣೀಕನೀಗವ ಮೊಂಡ
ನೊಣವು ಎಂಬುವನವನಾಚಾರಿ
ಹಿರಿಯ ಗೂಗೆ ಬಹಳ ಮುದುಕಿ ಎಲ್ಲರಿಗು ಹಿರಿಯವಳು ೩

ಹದ್ದು ಈಗ ತಾ ದಳವಾಯಿ
ನೀಚರೆಲ್ಲರು ನಾಯಕರು
ಇದ್ದ ವಕ್ಕಲು ಎಲ್ಲ ದುಃಖಿಗಳು ಬಲು ಎಡವಟ್ಟುಗಳು ೪

ಗುರು ಕರುಣದಿ ಅರಸಗೆ ತಲೆ ಬರಲು
ಅರಸನ ಹೆಂಡತಿ ಮರಿಗಳೆಯಾಗಲು
ಗುರು ಚಿದಾನಂದ ತಾನಾದರಸು ಎಲ್ಲರು ಮುಕ್ತರೆ ೫

## ೩೬೮

ಪುರುಷರಾದವರೆಲ್ಲ ಪುರುಷರೆನಿಸುವುದೋ
ಪುರುಷರೊಳಗೂ ಪುಣ್ಯಪುರುಷನೇ ಪುರುಷ ಪ

ಪರಮ ದಿವ್ಯ ಜ್ಞಾನಪೂತ ಭಸಿತವಿಟ್ಟು
ಸ್ಥಿರವೆಂಬ ಸಿಂಹ ಪೀಠದಲಿ ಕುಳಿತು
ನಿರುತ ನಿತ್ಯಾನಂದ ನಿರಾಮಯ ತಾನೆಂದು
ಭರದಿ ಪೂಜಿಸುತಿರುವನು ಪುರುಷ ೧

ಸುಖ ದುಃಖವೆಂಬೆರಡು ಸೀಮೆಗೂ ಸೇರದೇ
ಅಖಿಲೇಂದ್ರಿಯಗಳ ಆಟ ಕೆಡಿಸಿ
ಭಕುತಿಯೇ ನಿಜವೆಂದು ಭಜಿಸಿ ಸರ್ವದಿ ಮಹಾ
ಮುಕುತಿ ಪಥ ಸೇರಿದವನವ ಪುರುಷ ೨

ಅಂಗ ಕಾಣುವ ವಿಷಯಗಳ ಆತ್ಮಗರ್ಪಿಸುತ
ಸಂಗ ರಹಿತನಾಗಿ ತಾನಾಗಿ ಇರುತ
ಮಂಗಳವು ಎನಿಸಿಯೇ ಮರೆತು ಬಾಹ್ಯವನು
ವಿಹಂಗಪಥದಿ ನಿಂತಿರುವನವ ಪುರುಷ ೩

ಶಾಂತರಸವಂ ಕುಡಿದು ಸರ್ವಕ್ಕೂ ಬೆದರದೆ
ಭ್ರಾಂತು ಎನಿಪ ಬೆಳಗ ತರಿದು
ಸಂತ ಸಾಲೋಕ್ಯ ಮೊದಲು ಸಾಯುಜ್ಯವನೆಲ್ಲ
ಪಂಥದಿ ಮೀರಿ ಪರಿವನವನೆ ಪುರುಷ ೪

ನಾದದಾನಂದದಿ ಮೂರವಸ್ಥೆಯ ಗೆಲಿದು
ನಾದ ವೀಣೆಯ ಪರಿ ಪರಿ ಕೇಳುತ
ನಾದ ಸಾಕ್ಷಿಕ ತಾನು ಚಿದಾನಂದ ಗುರುವಾಗಿ
ನಾದದಾನಂದದಲಿ ಮುಳುಗಿರುವನವ ಪುರುಷ ೫

## ೩೬೯

ಬೆಳುದಿಂಗಳ ಪ್ರಭೆ ಬಲು ಕಾಂತಿಯಿರಲು
ಬಲವನು ದುರ್ಗುಣಕೆ ಹತ್ತಬಹುದೇ
ಬೆಳಗುತ್ತ ಜ್ಞಾನದ ಚಂದ್ರನು ಹೊಳೆದಿರೆ
ಬಳಿಕ ಜನನ ಮರಣ ಮುತ್ತಬಹುದೆ ಪ

ಬಹು ಬೆಳಕು ಬೆಳಗಲು ಮನದ ಮರ್ಕಟವದು
ಮರವ ನೇರದೆ ಕೆಳಗೆ ನಿಲ ಬಲ್ಲುದೆ
ಬಹು ಕಾಮವೆಂಬ ಕಾಗೆ ಕಣ್ಣುಡುಗಲು
ಗೂಡಿನಿಂದಾ ಹೊರಗೆ ಬರಬಲ್ಲದೆ ೧

ಚೆಲ್ಲಿರೆ ಕಾಂತಿಯು ಕಳ್ಳರಾರ್ವರ ತಲೆ
ಚೆಂಡಾಡದೆ ತಾನು ಸುಮ್ಮನಿಹುದೆ
ಫುಲ್ಲ ತಿಂಗಳ ಬೆಳಕು ಎಲ್ಲೆಡಗೆ ಹರಡಿರೆ
ಪಂಚ ವಂಚಕರು ಓಡದಿಹರೆ ೨

ಒಲಿದರೆ ತೇಜವು ಅವಿದ್ಯದ ಕತ್ತಲೆಯು
ತಾನೋಡದೆ ಅಲ್ಲಿ ನಿಲಬಲ್ಲುದೆ
ಬಲು ಕಳೆ ಚಿದಾನಂದಗುರು ತಾನು ಬೆಳಗುತಿರೆ
ಬಹಳ ಜನ್ಮದ ಪಾಪ ಹರಿಯದಿಹುದೇ ೩

## ೩೭೦

ಬೆಳುದಿಂಗಳಿನೊಳು ಬೇಟೆಯನಾಡಿರಿ
ಬಲ್ಲವರಾದವರೆಲ್ಲ
ಒಳ್ಳೊಳ್ಳೆಯವರು ಕೂಡಿ ಆಡಿರಿ
ಶಮದಮ ಶಾಂತರು ಎಲ್ಲ ಪ

ತನ್ನ ಸರಿಯದ ಅವಿದ್ಯೆ ಹುಲಿಯದು
ಘುಡುರು ಘುಡುರು ಘುಡುರೆಂದೆನಲು
ಸುಮ್ಮನೆ ಪ್ರಣವದ ಧನುವನು ಎಳೆದು
ನಾದ ಬಾಣದಿ ಬೀಳಿಸಿರಿ ೧

ನಾನು ಎಂಬ ಕರಡಿಯು ಬಂದು
ಅಡರಲು ನಿಮ್ಮನು ನಿಲುವುದ್ಧ
ಸ್ವಸ್ಥ ವಿವೇಕದ ಕೋಲಲಿ ಬಡಿಯಿರಿ
ಕೆಡಹಿರಿ ನೋಡದೆ ನೀವೆಲ್ಲ ೨

ಅಪರೋಕ್ಷವೆಂಬ ಬಲೆಯನೆ ಒಡ್ಡಿ
ದುರ್ಗುಣ ಮೃಗಗಳನೆ ಬಡಿದು
ಭವ ಹರ ಚಿದಾನಂದನ ನೆನೆಯುತ
ಬೇಟೆಯನಾಡಿರಿ ಎಲ್ಲ ೩

## ೩೭೧

ಬಯಲ ಜಾತ್ರೆಗೆ ನಡೆಹೋಗುವ ಬಾರದಲೆ ಅಲ್ಲಿರುವ ಪ

ಶಾಂತಿ ಎಂದೆಂಬ ಕಂಬಲೆಗಳು ಶಮೆ ಹುರಿಗೆಜ್ಜೆ ಎತ್ತುಗಳು
ದಾಂತಿ ಎಂದೆಂಬ ಕಾವಡಿಗಳು ದಮೆ ಎಂಬ ಹೂಜೆಗಳು ೧

ಮಂಗಳವೆಂಬ ಬಾಲಕರು ಮುಕ್ತಿ ಎಂಬ ಮುತ್ತೈದೆಯರು
ಸಂಗ ಹರರಹ ವಿಟಗಾರರು ಸೈರಣೆ ಎಂಬ ಹಿರಿಯರು ೨

ಸಂತೋಷವೆಂಬ ಅಂಗಡಿಗುಂಪು ಸಹಜದ ಹೂಕಂಪು
ಶಾಂತರೆನಿಪ ದೊರೆಗಳ ಗುಂಪು ಸುಖ ಛತ್ರಿಯ ತಂಪು ೩

ಓಂಕಾರನಾದದ ನಗಾರಿ ವೀಣಾನಾದದ ತುತ್ತೂರಿ
ಸಂಕಲ್ಪ ಸುಳ್ಳೆಂಬ ತಂಬೂರಿ ಸಾಮವೆನಿಸುವ ಭೇರಿ ೪

ಆರು ಚಕ್ರದ ಅರವಟ್ಟಿಗೆ ಅಮೃತ ಬಿಂದುವಿನ ಮೊಗೆಯು
ದಾರಿದಾರಿಗೆ ಸೋಹಂಸ್ಮರಣೆ ದೃಢ ಮನವದು ಚಡಿಯು ೫

ಆನಂದ ವನಗಳ ಸಾರುತ ಆಯಾಸ ಕಳೆಯುತ್ತ
ಸ್ವಾನಂದ ಗೋಪುರ ಕಾಣುತ ಸುಮ್ಮಾನವ ಪಡೆಯುತ ೬

ಮೃಢನಾಳ ದ್ವಾರವ ಪೋಗುತ ಮುಂದೆ ಚಂದ್ರನ ಕಾಣುತ
ಅಡರಿದ್ವಿದಳ ಸದರೇರುತ ಅತ್ತತ್ತ ಸಾರುತ ೭

ಸಹಸ್ರಾರವೆನಿಪ ಸರೋವರ ಸ್ನಾನ ಮಾಡುವ ಅಪಾರ
ಮಹಾ ಕಮಲ ಪೀಠವನೇರುವವರ ಮಹೇಶನೆನ್ನು ಅವರ ೮

ತುರೀಯವೆಂದೆಂಬ ಬಯಲಗೂಡಿ ತಾವು ಹೋಗುವ ನಾಡಿ
ಹರ್ಷದ ಧೂಳ ದರ್ಶನ ಮಾಡಿ ಹಾಯಿಗುಡಾರ ಹೂಡಿ ೯

ಶಿಂಶುಮಾರವೇ ದೇವರ ಪೀಠ ಸಿದ್ಧವೆಂಬ ಕವಾಟ
ಸಂಶಯವಿಲ್ಲದ ಎಡೆಯಾಟ ತತ್ಪುರುಷರ ಕೂಟ ೧೦

ಎತ್ತೆತ್ತ ನೋಡಿದರು ಚಿದೀಪ್ಯ ಸೂರ್ಯ ಕೋಟಿಗೆ ಘನವು
ಒತ್ತೊತ್ತು ಪೂರ್ಣಾಭಿಷೇಕ ಓಂ ಎಂದೆಂಬ ಸ್ವರವು ೧೧

ಸುವಾಸನೆ ಎಂದೆಂಬ ಧೂಪವು ಸುಂದರ ಪುಷ್ಪಗಂಧ
ತಾವು ಮಾಡುವ ಭಾವದಲಿಂದ ತೃಪ್ತಿ ನೈವೇದ್ಯ ಚಂದ ೧೨

ಎರಡಿಲ್ಲದೇಕಾರ್ತಿ ಬೆಳಗುತ ಎಲ್ಲೆಡೆ ತಾ ಹೊಳೆಯುತ
ಹೊರ ವೊಳಗೆಂಬುದ ಮರೆಯುತ ಹೇಮದ ತಗಡಾಗಿ ಇರುತ ೧೩

ಬೆಳಕ ಕಂಡಾರತಿ ಎತ್ತುತ ಬೆಳಗನು ಬೆಳಗುತ್ತ
ತಿಳಿದು ಪ್ರದಕ್ಷಿಣೆ ಮಾಡುತ ತೋರುವುದು ಬ್ರಹ್ಮವದೆನ್ನುತ ೧೪

ಭಯದ ವಿಸರ್ಜನೆ ಮಾಡುತ ಬಯಲಾಗಿಯೆ ತೋರುತ
ಬಯಲ ಚಿದಾನಂದನಿಗೆರಗುತ್ತ ಬ್ರಹ್ಮನಾಗಿ ತಾನಿರುತ ೧೫

## ೩೭೨

ಬ್ರಹ್ಮ ರೂಪವೇ ಈತ
ಬ್ರಹ್ಮ ಸ್ಥಿತಿಯಿಂತು
ಸಮ್ಮತ ವೇದಾಂತವು ಮುಕ್ತ ಪ

ಸರ್ಪ ಕುಪ್ಪಸ ಬಿಟ್ಟ ಬಳಿಕ
ಕುಪ್ಪಸದ ಚಿಂತೆ ಇರ್ಪುದೆ ಸರ್ಪಕೆ ಮುಕ್ತ
ತಪ್ಪದಾ ಪರಿ ದೇಹ ಭಾವವ ಬಿಟ್ಟಯೋಗಿಗೆ
ಇರ್ಪುದೇ ತನು ಭ್ರಾಂತಿ ಮುಕ್ತ ೧

ಹೆಣ ಬಿಟ್ಟು ಜೀವಾತ್ಮ ಘನ ಮಾರ್ಗದಿ ನಿಲ್ಲೆ
ಹೆಣಕೆ ಮಾನಾಪಮಾನವೆಲ್ಲೋ ಮುಕ್ತಾ
ತನು ಬಿಟ್ಟಾ ಪರಿ ಸಾಕ್ಷಿಯಾಗಿ ನೋಡುವ ಜ್ಞಾನಿಗೆ
ತನು ಭ್ರಾಂತಿ ತಾನಿಹುದೇ ಮುಕ್ತಾ ೨

ಹೊಲೆಯತನ ಶುದ್ಧತನ ಎಲ್ಲಿಹುದೋ ಎಲೆ ಮುಕ್ತಾ
ಹೊಲೆಯತನ ಶುದ್ಧತನ ಸಿದ್ಧನಿಗದೇತಕೋ
ತಿಳಿದು ಬಾಳನು ಬಾಳ್ವ ಚಿದಾನಂದನಾದವವಗೆ
ಬಲು ದೇಹ ಭ್ರಾಂತಿಯಹುದೋ ಮುಕ್ತಾ ೩

## ೩೭೩

ಬ್ರಹ್ಮವದು ಹ್ಯಾಗಿದೆ
ಬ್ರಹ್ಮ ಕೇಳ್ವನ ಹಾಗಿದೆ
ಬ್ರಹ್ಮವದು ಹೀಗೆಂದು ತೋರಲಿಕೆ ಶಕ್ಯವೇ ಪ

ಬ್ರಹ್ಮವದು ಶೂದ್ರನೇ
ಬ್ರಹ್ಮವದು ಭದ್ರನೇ
ಬ್ರಹ್ಮವದು ರುದ್ರನೆಂದು ತೋರಿಸಲು ಶಕ್ಯವೇ ೧

ಬ್ರಹ್ಮವದು ಯಂತ್ರವೇ
ಬ್ರಹ್ಮವದು ತಂತ್ರವೇ
ಬ್ರಹ್ಮವದು ಮಂತ್ರವೆಂದು ತೋರಿಸಲು ಶಕ್ಯವೇ ೨

ಬ್ರಹ್ಮವದು ರೊಟ್ಟಿಯೇ
ಬ್ರಹ್ಮವದು ಪುಟ್ಟಿಯೇ
ಬ್ರಹ್ಮವದು ಹೊಟ್ಟೆಯೆಂದು ತೋರಿಸಲು ಶಕ್ಯವೇ ೩

ಬ್ರಹ್ಮವದು ಜೋಳಿಗೆ
ಬ್ರಹ್ಮವದು ಮಾಳಿಗೆ
ಬ್ರಹ್ಮವದು ಹೋಳಿಗೆ ಎಂದು ತೋರಿಸಲು ಶಕ್ಯವೇ ೪

ಹೇಗಿದೆಂದು ಕೇಳ್ವಡೆ
ಹೀಗೆದೆಂದು ಪೇಳ್ವಡೆ
ಹೇಗೆ ಹೀಗೆ ಎಂಬುದಕ್ಕೆ ಚಿದಾನಂದನ ನೋಡಿದೆ ೫

## ३೭೪

ಬ್ರಹ್ಮವು ನೀನೇ
ಬ್ರಹ್ಮವು ನೀನೆಂದು ನಂಬಲೋ ದೊರೆಯೇ ಪ

ವ್ಯಾಪಾರ ಮೂಗಿನಲ್ಲಲ್ಲ ಮೂಗಿನ
ವ್ಯಾಪಾರ ಕಣ್ಣಿನಲ್ಲಿಲ್ಲ
ನಿನ್ನ ವ್ಯಾಪಾರ ಸಕಲವು ಎಲ್ಲ
ನಿನ್ನ ಹೊರತು ಬೇರೆ ಏನಿಲ್ಲ ೧

ಜಾಗೃತ ವ್ಯಾಪಾರ ಸ್ವಪ್ನದಲಿಲ್ಲ
ಸ್ವಪ್ನದ ವ್ಯಾಪಾರ ಜಾಗೃತದಲ್ಲಿಲ್ಲ
ಜಾಗೃತ ಸ್ವಪ್ನವೆರಡು ಸುಷುಪ್ತಿಯಲ್ಲಿಲ್ಲ
ಸುಷುಪ್ತಿ ತುರೀಯವು ಜಾಗೃತದಲ್ಲಿಲ್ಲ ೨

ನಾದದ ವ್ಯಾಪಾರ ಬಿಂದುವಿನಲ್ಲಿಲ್ಲ
ಬಿಂದು ವ್ಯಾಪಾರ ನಾದದಲ್ಲಿಲ್ಲ
ನಾದ ಬಿಂದು ಕಳೆ ಮೂರಕೆ ಇಲ್ಲ
ಬೋಧ ಚಿದಾನಂದ ಹೊರತಿಹನಲ್ಲ ३

## ३೭೫

ಬ್ರಹ್ಮವೇ ನೀನೆನ್ನು ಮುಕ್ತನೇ
ಬ್ರಹ್ಮವೇ ನೀನೆನ್ನು ಪ

ತುಪ್ಪದ ಹನಿಯೆಲ್ಲವು ಮುಕ್ತನೆ
ತುಪ್ಪವೆಯಲ್ಲವೆ ಮುಕ್ತನೆ
ಇಪ್ಪ ಈ ಜಗವೆಲ್ಲ ಮುಕ್ತನೆ
ತುಪ್ಪದ ತೆರನಂತೆ ಈ ಬ್ರಹ್ಮ ೧

ಸಕ್ಕರೆ ಚೂರೆಲ್ಲ ಮುಕ್ತನೆ
ಸಕ್ಕರೆಯಲ್ಲವೆ ಮುಕ್ತನೆ
ತಕ್ಕು ಆಪರಿ ಆ ಜಗವು ಮುಕ್ತನೆ
ಸಕ್ಕರೆ ತೆರನಂತೆ ಈ ಬ್ರಹ್ಮ ೨

ಅಣುರೇಣು ತೃಣ ಕಾಷ್ಠ ಮುಕ್ತನೆ
ಘನ ಜೀವ ತಾನೆ ಎನ್ನು ಮುಕ್ತನೆ
ಗುಣಾತೀತ ಚಿದಾನಂದ ಮುಕ್ತನೆ
ಅನುಮಾನವಿಲ್ಲದೆ ನೀನೇ ಈ ಬ್ರಹ್ಮ ೩

## ೩೭೬

ಬ್ರಹ್ಮಾಗಿ ತನ್ನ ಕಾಣೆ ಬ್ರಹ್ಮವಲ್ಲವೆ ಪ

ಕೀಟ ಭೃಂಗವ ಹೊಂದಿ ಕೀಟ ಭೃಂಗವಾಗಲು
ಕೀಟವ ನೆನೆಸಲುಂಟೆ ಭೃಂಗದಲ್ಲಾದ
ಕೂಟ ಪ್ರಾಣವೆ ಹೋಗಿ ಘಾಟಿ ಬ್ರಹ್ಮದಲಿರೆ
ಕೂಟ ಪ್ರಾಣವದೆನಲುಂಟೆ ಬ್ರಹ್ಮನಲ್ಲದೆ ೧

ಕರ್ಪೂರದುರಿಯ ಸೋಂಕಿ ಕರ್ಪುರ ಉರಿಯಾಗಲು
ಕರ್ಪೂರವ ನೆನಸಲುಂಟೆ ಉರಿಯಲ್ಲದೆ
ಇಪ್ಪ ಇಂದ್ರಿಯ ಹೋಗಿ ಅಪ್ಪಟ ಆತ್ಮನಾಗೆ
ಇಪ್ಪ ಇಂದ್ರಿಯ ಎನಲುಂಟೆ ಬ್ರಹ್ಮನಲ್ಲದೆ ೨

ತೊತ್ತು ಅರಸನಸೇರಿ ತೊತ್ತು ಅರಸನಾಗಲು
ತೊತ್ತುತನವ ನೆನಸಲುಂಟೆ ಅರಸಲ್ಲದೆ
ಚಿತ್ತವೆಂಬುದು ಹೋಗಿ ಶುದ್ಧ ಆತ್ಮವ ದಾಗೆ
ಚಿತ್ತವೆನಲುಂಟೆ ಬ್ರಹ್ಮವಲ್ಲದೆ ೩

ಲವಣ ನೀರನು ಕೂಡಿ ಲವಣನೀರಾಗಲು
ಲವಣ ನೆನಸಲುಂಟೆ ನೀರಲ್ಲದೆ
ಸವನಿಸೆ ಮನವದು ಶಿವನಾಗಿ ವರ್ತಿಸೆ
ಸವನಿಸೆ ಮನ ಎನಲುಂಟೆ ಬ್ರಹ್ಮವಲ್ಲದೆ ೪

ಶರೀರ ತನ್ನದು ಎಲ್ಲ ಶರೀರ ಗುರುವಿನದಾಗೆ
ಶರೀರ ತಾನೆ ಎನಲುಂಟೆ ಗುರುವಲ್ಲದೆ
ನರನು ಚಿದಾನಂದ ಗುರುವಾಗಿ ತನ್ನ ಕಾಣೆ
ನರನು ಎನಲುಂಟೆ ಬ್ರಹ್ಮವಲ್ಲದೆ ೫

## ೩೭೭

ಬ್ರಹ್ಮಾನಂದದ ಸಭಾ ಮಧ್ಯದಲಿ
ಸುಮ್ಮನೆ ಇರುತಿಹುದೇನಮ್ಮ
ಬ್ರಹ್ಮಾದಿಗಳಿಗೆ ದೂರಾಗಿಹ
ನಿರ್ಮಲ ನಿರುಪಮ ತಾನಮ್ಮ ಪ

ಹೇಳಲು ಬಾರದ ಸುಖರೂಪದಲಿ
ಹೊಳೆಯುತ ಅಹುದು ಏನಮ್ಮ
ಮೇಳದ ಲೋಕಕೆ ಕರ್ತೃ ತಾನಾಗಿಹ
ಲೋಲ ಪರಾತ್ಪರ ತಾನಮ್ಮ ೧

ಬೋಧದ ರೂಪದಿ ಹಾ.... ಎಂಬಂದದಿ
ಬೆಳಗುತಲಿಹುದದು ಏನಮ್ಮ
ಆದಿ ಅನಾಧಿಯು ಅವ್ಯಕ್ತವೆನಿಪ
ಅಚಲಾನಂದವೆ ತಾನಮ್ಮ ೨

ತೃಪ್ತಾನಂದದಿ ತೂಷ್ಣೀ ಭಾವದಿ
ದೀಪ್ತವಾಗಿಹುದದು ಏನಮ್ಮ

ಸಪ್ತಾವರಣದ ಮೀರಿ ಮಿಂಚುವ
ಗುಪ್ತಜ್ಞಪ್ತಿಯು ತಾನಮ್ಮ ೩

ಕದಲದೆ ಚೆದುರದೆ ಕೈ ಕಾಲಿಲ್ಲದೆ
ಉಕ್ಕುತಲಿಹುದದು ಏನಮ್ಮ
ಸದಮಲ ಸರ್ವಾತ್ಮತ್ವವೆಯಾಗಿಹ
ಸಾಕ್ಷೀಭೂತವು ತಾನಮ್ಮ ೪

ತೋರುತಲಡಗದ ಸಹಜಭಾವದಿ
ಥಳಥಳಿಸುತಿಹುದದು ಏನಮ್ಮ
ಕಾರಣ ಕಾರ್ಯವ ಕಳೆದ ಚಿದಾನಂದ
ಕಾಲಾತೀತನು ತಾನಮ್ಮ ೫

## ೩೭೮

ಮಂಗಳನಾದ ಕೇಳುವತನಕ ಮನಸು ನಿಲ್ಲುವುದೇ
ಸಂಗಹರನು ಆಗದತನಕ ಸಾಕ್ಷಿಯಾಗುವುದೇ ಪ

ಭಾಮಿನಿಯನ್ನು ತ್ಯಜಿಸದತನಕ ಭಕ್ತನಾಗಲಹುದೇ
ಕಾಮವನ್ನು ಕಡಿಯದತನಕ ಕರುಣಿಯಾಗಲಹುದೆ ೧

ಪ್ರಾಣಾಪಾನವು ಕೂಡದತನಕ ಪರ ತಾನಾಗುವುದೇ
ನೀನು ನಾನೆಂಬುದ ನೀಗದತನಕ ನಿಜವದು ತಾನಹುದೇ ೨

ಹಮ್ಮು ಕೋಶ ಕಳೆಯುವತನಕ ಹಂಸನಾಗಬಹುದೇ
ಬ್ರಹ್ಮ ಚಿದಾನಂದನಾಗದತನಕ ಭ್ರಮೆ ತಾ ತೊಲಗುವುದೇ ೩

## ೩೭೯

ಮರವೆ ಎಂಬುದು ಎಲ್ಲಿಹುದೋ ಯೋಗಿಗೆ
ಮರವೆ ಎಂಬುದು ಎಲ್ಲಿಹುದೋ
ಅರಿತು ಸರ್ವವ ಸರ್ವದಲಿ ಆತ್ಮ ತಾನಾಗಿರ್ದು
ನಿರುತ ಕಾಲದಿ ಮುಕ್ತಗೆ ಅವಗೆ ಪ

ನಿರ್ವಿಕಲ್ಪ ಸಮಾಧಿ ನಿತ್ಯ ನಿತ್ಯಳವಟ್ಟು
ದುರ್ವಿಘ್ನಗಳೆ ಜರಿದು
ಗರ್ವದೂರವಾಗಿ ಗಾಢ ತೂರ್ಯದೊಳಿದ್ದು
ನಿರ್ವಹಿಸಿ ನಿಜಸುಖವನು
ಪರ್ವಿಪಸರಿಸಿ ತನಗೆ ಪ್ರತಿಗಾಣುತಿರುತಿಪ್ಪ
ಸರ್ವಸಾಕ್ಷಿ ತಾನಾದವಗೆ ೧

ನಾದದೊಳು ಕಿವಿಯಿಟ್ಟು ನಾಸ್ತಿಮನವಸಿಮಾಡಿ
ಬೋಧೆ ಬಲಿದಾ ಲಹರಿಯ
ಹಾದಿಯಂತುಟೋ ಅಂತು ಹರಿದಾಡುತಲಿ ತಾ
ಭೇದಾ ಭೇದಗಳನುಳಿದು
ಸಾಧು ಸಂಗವ ಕೂಡಿ ಸಂತುಷ್ಟನಾಗಿಪ್ಪ
ನಾದ ಮೂರುತಿಯಾಗೆ ೨

ಪರವು ಸಾರವ ತಿಳಿದು ಪರಿಪೂರ್ಣನಾಗಿರುತ
ವರ ಚಿದಾನಂದ ಗುರುವೆ ಚರಣ
ಸ್ಮರಣೆಯ ಮನದಿ ಚಲಿಸದಂತಾವಾಗ
ಹಿಡಿದು ನಾಲಗೆಯೊಳಿರಿಸಿ
ಗುರುವೆ ಗುರುವೆ ಎಂದು ತಾನಾಗಿರ್ದು
ನಿರತಿಶಯದ ಪರಮಗೆ ೩

## ೩೮೦

ಮಾಡಿದನೆನ್ನ ಫಕೀರನಾಗಿ ಸದ್ಗುರು
ಮಾಡಿದನೆನ್ನ ಫಕೀರನ ನೋಡಲಿಕ್ಕಾಶ್ಚರ್ಯ
ಪ್ರಪಂಚ ಕಳೆದೆ ನಾಮರೂಪಕೆ ದೂರ ಪ

ಅನುಭವಕಪ್ಪರ ಹೃದಯದ ಜೋಳಿಗೆ
ಎನ್ನುವ ಕಂಕುಳೊಳಿಟ್ಟು
ಅನಿಮಿಷ ದೃಷ್ಟಿ ಅರುಹಿನಕಪನಿ
ಅಮೃತ ಕಮಂಡಲು ಕೊಟ್ಟು ೧

ನಾದದ ಕಿನ್ನರಿ ಕೈಯೊಳಗಿಟ್ಟು
ಟೊಪ್ಪಿಗೆ ಪೆಟ್ಟಿಗೆಯಿಟ್ಟ
ಬೋಧದ ಅಂಗಿಯು ನಿರ್ಗುಣ
ಲುಂಗಿಯ ಸೈರಣೆಲುಟಿಕೆಯ ಕೊಟ್ಟ ೨

ಈ ಪರಿ ಮಾಡಿಯೆ ಬಯಲನು
ಹಿಡಿ ಎಂದು ಕರವನು ನೆತ್ತಿಯಲಿಟ್ಟ
ಭೂಪ ಚಿದಾನಂದ ಫಕೀರನಾಗಿಯೆ
ತಿರುಗೆಂದಪ್ಪಣೆ ಕೊಟ್ಟ ೩

## ೩೮೧

ಯೋಗ ಯೋಗಗಳೆಂದು ಕಸಿವಿಸಿ ತಾನೇಕೆ
ಯೋಗವು ತಾನದೆ ಬಂಧ
ಯೋಗವ ಬಿಟ್ಟು ತನ್ನನೆ ಬ್ರಹ್ಮನೆಂದೆನೆ
ಯೋಗವೆ ರಾಜಯೋಗವೆಂದ ಪ

ವ್ರತನೇಮ ಶೌಚದಿ ಮುಕ್ತಿಯು ಎಂದನೆ
ವ್ರತನೇಮ ಶೌಚವು ಬಂಧ
ಪ್ರತಿಯಿಲ್ಲದಾ ವಸ್ತು ತಾನೆಂದು ಚಿಂತಿಸೆ
ಅತಿರಾಜಯೋಗವೆಂತೆಂದ ೧

ಮೂರ್ತಿಧ್ಯಾನಷ್ಟಾಂಗದಲಿ ಮುಕ್ತಿಯೆಂದನೆ
ಮೂರ್ತಿಧ್ಯಾನಷ್ಟಾಂಗ ಬಂಧ
ಕರ್ತೃನಾ ಸರ್ವ ಕಾರಣವೆಂದು ಚಿಂತಿಸೆ
ಕರ್ತೃರಾಜಯೋಗವೆಂದ ೨

ಲಯ ಲಕ್ಷದಿಂದ ಮುಕ್ತಿ ಎಂದೆನೆ
ಲಯ ಲಕ್ಷ ತಾನದು ಬಂಧ
ಸ್ವಯಂ ಬ್ರಹ್ಮವೆಂದು ತಾನೆ ಚಿಂತಿಸಿ
ನಿಯಮವು ರಾಜಯೋಗವೆಂದ ೩

ಖೇಚರಿ ಭೂಚರಿಯಲಿ ಮುಕ್ತಿ ಎಂದೆನೆ
ಖೇಚರಿ ಭೂಚರಿ ಬಂಧ
ವಾಚಾತೀತ ವಸ್ತು ತಾನೆಂದು ಚಿಂತಿಸೆ
ಗೋಚರ ರಾಜಯೋಗವೆಂದ ೪

ಎರಡಕ್ಕೆ ತಾವಿಲ್ಲ ಇಹನೊಬ್ಬನೇ ತಾನೇ
ಎರಡಾಗಿ ಕಾಂಬುದೊಂದೇ ಬಂಧ
ಗುರು ಚಿದಾನಂದನ ಸಾಕ್ಷಾತ್ಕಾರವೆಂದೆನೆ
ಗುರಿಯದು ರಾಜಯೋಗವೆಂದ ೫

## ೩೮೨

ಯೋಗಿಯ ಭಾವವು ಆರಿಗು ತಿಳಿಯದು
ಯೋಗಿಯೆಂದೆನಿಪುದು ಸುಖವೋ ದುಃಖವೋ ಪ

ನಾದವ ಸಾಧಿಸಿ ನಾದವ ಭೇದಿಸಿ
ನಾದಾನಂದದಲಿ ಮುಳುಗಿರ್ದು
ನಾದಾಮೃತವನು ಸವಿಸವಿದುಂಬುವ
ನಾದ ಮೂರುತಿಯವ ನರನೋ ಹರನೋ ೧

ಅಂತರ್ಲಕ್ಷ್ಯ ಬಹಿರ್ಲಕ್ಷ್ಯವನೊಂದ
ನು ತರಿಸಿದೆ ಸಮನಿಸುತಿರ್ದು
ಸಂತತ ಪೂರ್ಣಾನಂದದಿ ಮುಳುಗಿ ನಿ-
ರಂತರ ಸುಖಿಪುದು ಉರಿಯೋ ಸಿರಿಯೋ ೨

ಬಯಲಾಟವ ನೋಡಿ ಬಯಲೆಲ್ಲವ ಮಾಡಿ
ಬಯಲ ಬಗೆಗೆ ತಾ ಓಲಾಡಿ
ಬಯಲಿಗೆ ಬಯಲು ಬಯಲಾಗಿರುತಿಹ
ಬಯಲಾನಂದವು ಭಯವ್ರೋ ಜಯವ್ರೋ ೩

ಮೂರವಸ್ಥೆಯ ಮೂವರಿಗೊಪ್ಪಿಸಿ
ಬೇರೆ ಸಾಕ್ಷಿಗೆ ತಾನಿರುತಿದ್ದು
ತೋರುವುದೆಲ್ಲ ತನ್ನತನವೆಂದರಿತು
ಶೂರನಾಗಿರುವುದು ಗೆಲುವೋ ಒಲವೋ ೪

ಗುರು ಕೀಲನೆ ನೋಡಿ ಗುರುವೆಲ್ಲವ ಮಾಡಿ
ಗುರು ಲೀಲೆ ಯಂತಿರುತಿದ್ದು
ಗುರು ಚಿದಾನಂದ ಮೂರುತಿಯ ಕೂಡಿರುತಿಹ
ಗುರುತರ ತಾನದು ದೊರೆಯೋ ಚರಿಯೋ ೫

## ೩೮೩

ಲಗ್ಗೆಯ ಚೆಂಡನಾಡಿರಿ ಲಕ್ಷಣವಂತರು
ಲಕ್ಷಿಸಿ ಬ್ರಹ್ಮವ ನೋಡುವರು

ಲಗ್ಗೆಯೊಡ್ಡಲು ಬಹುದುರ್ಗುಣರವರ
ಲಾಗಗಳ ಹೊಯ್ಯಂದದಲಿಡಿರಿ ಪ

ಸಪ್ತಾವರಣದ ಲಗ್ಗೆಯ ಬಿಲ್ಲೆಯು
ಒಂದರ ಮೇಲೊಂದಿರಲು
ದೀಪ್ತವೆನಿಸಿ ಸಚ್ಚಿತ್ತಿನ ಚೆಂಡೊಳು
ಬೀಳಿಸಿ ಬಿಲ್ಲೆಯನು ೧

ಲಗ್ಗೆಯು ಬೀಳಲು ಓಡಿಯೆ ಹೋಗಿ
ಬಗ್ಗಿ ಬಗ್ಗಿ ತಾ ಬರುತಿರಲು
ಬಗ್ಗುತ ಬಲು ಸನಿಹಕೆ ಬರಲು
ಹೊರಳಾಡುವ ತೆರದಲಿ ಹೊಡೆದೋಡಿಸಿರಿ ೨

ನಿರ್ಮಲಾಕಾಶದ ಬಲುಬಯಲಿನೊಳು
ನಿಂತಿಹ ಬಿಲ್ಲೆಗಳನೇ ಕೆಡಿಸಿ
ನಿರ್ಮಲ ಚಿದಾನಂದ ಆತ್ಮ ತಾನಾಗಿ
ಆಡಿರಿ ನಿತ್ಯದಿ ಲಗ್ಗೆಯನು ೩

## ೩೮೪

ಲಿಂಗವಾದವ ಲಿಂಗನಹನೆ
ಲಿಂಗವಾಗಿ ತಾನಿರೆ ಅಂಗವೆನಿಸಬಲ್ಲನೆ
ಲಿಂಗ ಬೋಧಮತಂಗ ಅಮೃತಗಂಗ
ಮುಕ್ತಿಗೆ ಅನಂಗ ದೀಪ್ತಿಯ ತರಂಗರಂಗ
ಲಿಂಗ ಲಿಂಗ ನಿಜ ಸಂಯೋಗಿರಲಿಕೆ
ಲಿಂಗ ಸಹಜ ಅಖಂಡವೇ ತಾನಾದ ಪ

ಮುತ್ತು ನೀರಿನರಲಿಕೆ ಮುತ್ತು ನೀರಹುದೇ
ಮತ್ತೇ ಆಪರಿ ಆತ್ಮ ಲಿಂಗನಹನೇ

ಮುತ್ತು ಸರ್ವಾಂಗಕ್ಕಿತ್ತು ಕಳೆಯದೊತ್ತೊತ್ತು
ಭ್ರಾಂತಿ ಹಾರಿತ್ತು ಸುಖವು ಬಂದಿತ್ತು ಇತ್ತು
ಸುತ್ತಮುತ್ತ ಬರಿ ಬೋಧವೆ ತುಂಬಿವೆ
ಚಿತ್ತ ಸತ್ತು ಚಿನ್ಮಾತ್ರವೆ ತಾನಾದಾ ೧

ಫಲವದು ಫಕ್ವವಾಗೆ ಪಕ್ವವು ಕಾಯಹುದೇ
ತಿಳಿಯೆ ಆಪರಿ ಆತ್ಮ ಲಿಂಗನಹನೇ
ಫಲವು ಫಲವು ಪ್ರಣವದ ಒಲವು
ಶುಕ್ರರೂ ಹಲವು ತೇಜದ ಬಲವು ಆನಂದ ನಿಲುವು ನಿಲುವು
ಕಳೆಯೊಳಗೆ ತಾ ಥಳಥಳಿಸುತ ಬಲು
ಪ್ರಭಾವವಾಗಿಹ ಪರಮನೆ ತಾನಾದ ೨

ದೇವವೃಕ್ಷಾದುದು ಈಗ ಸನಿಯಹುದೇ
ಜೀವಿ ಆ ಪರಿ ಆತ್ಮ ಲಿಂಗನಹನೇ
ದೇವ ಭಕ್ತ ಸಂಜೀವ ಜ್ಞಪ್ತಿಯ ಭಾವ
ಎಲ್ಲ ತುಂಬಿರುವ ಆವಾಗ ಈವ ಈವ
ಜೀವ ಹೋಗಿ ಚಿದಾನಂದನೆ ತಾನಾಗಿ
ಆವಾವ ಕಾಲದಿ ಬ್ರಹ್ಮವೆ ತಾನಾದ ೩

## ೩೮೫

ವಿವೇಕವೆಂಬ ಫೌಜದು ಮುತ್ತಲು
ಉಳಿವು ಅಸುರರಿಗಿಲ್ಲಾಯ್ತು
ಸವರಿಯೆ ಹೋದರು ದುಷ್ಟರು ನುಣ್ಣಗೆ
ಸಂತೋಷವು ನಗರಕ್ಕಾಯ್ತು ಪ

ಭೂತ ದಯನು ಶಾಂತಾತ್ಮ ವಿಚಾರನು
ಬ್ರಹ್ಮನಿಷ್ಠವಿರತೆನಿಸುವನು

ಖ್ಯಾತಿಗೆ ಬಂದಿಹ ಹಿರಿಯ ವಜೀರರು
ಕವಿದರು ತನುಪುರದುರ್ಗವನು ೧

ಧಮಧಮ ನಾದದ ನಗಾರಿ ಬಾರಿಸೆ
ದಿಂಡೆಯರಸುಗಳು ನೆಲಕೊರಗೆ
ಅಮಮ ಅಡರಿಯೆ ದುರ್ಗವ ಕೊಂಡರು
ಅರೆದರು ದುಷ್ಟರು ಊರೊಳಗೆ ೨

ಕಡಿದರು ಕಾಮನ ಹೊಡೆದರು ಡಂಭನ
ಕೆಡಹಿಯೆ ಕೊಯ್ದರು ಚಂಚಲನ
ಹುಡಿಮಾಡಿದರು ಅಹಂಕಾರ ಕ್ರೋಧರ
ಹುರಿದರು ಖಳರು ಬೀಜವನು ೩

ಆದನು ಪುರಕೆ ವಿವೇಕ ಮಂತ್ರಿಯು
ಆದನು ವಿರತಿಯು ದಳವಾಯಿ
ಆದನು ಶಾಂತನು ಸಮಸ್ತ ವೃತ್ತಿಗೆ
ಆಯಿತು ನಗರಕೆ ಅದು ಹಾಯಿ ೪

ಜೀವ ರಾಜನು ಹಿಡಿದೆ ಬೋಧಿಸಿ
ಜಡನಾದಸುರ ಪ್ರಕೃತಿ ಎಂದು
ಜೀವ ಚಿದಾನಂದ ಸ್ವಾಮಿಯೆ
ನೀನೆಂದು ದರಬಾರನೆ ಕಾಯ್ದರಂದು ೫

## ೩೮೬

ಶಿವನಾದ ಮೇಲೆ ಶಿವ
ತಾನೆಂಬರಿವು ಇರಬೇಕು ಪ

ಕಂಗಳ ಮುಚ್ಚಿ ತೆರೆಯಲು ಬೇಕು
ಕಂಗಳೊಳು ಆನಂದವಿರಬೇಕು
ಸಂಗಹರನಾಗಿ ಇರಬೇಕು ೧

ದೇಹವೆ ತೂಗುತಲಿರುತಿರಬೇಕು
ದೇಹವೇ ತಾನೆಂದರಿತಿರಬೇಕು
ದೇಹವ ಮರೆತಿರಬೇಕು ೨

ಜಗವಿದು ಎನ್ನಲಿ ಜನನವೆನಬೇಕು
ಜಗವಿದು ಎನ್ನಲಿ ಲಯವೆನಬೇಕು
ಜಗಕೆ ತಾ ಸಾಕ್ಷಿಯಿರಬೇಕು ೩

ನೀತಿಯ ಶಮೆದಮೆ ಶಾಂತಿಯು ಇರಬೇಕು
ಪಾತಕವೆಲ್ಲವ ಹರಿದಿರಬೇಕು
ಮಾತು ಮಾತಿಗೆ ಗುರುವೆನಬೇಕು ೪

ಸುಧೆ ಶರದಿಯ ಸುಖ ತುಳುಕಲಿ ಬೇಕು
ವಿಧವಿಧ ಗುಣಗಳ ಬಿಟ್ಟಿರಬೇಕು
ಚಿದಾನಂದ ಗುರು ತಾನೆನಬೇಕು ೫

## ೩೮೭

ಸರ್ವ ಪರಬ್ರಹ್ಮ ಸರ್ವ ಪರಬ್ರಹ್ಮ
ಸರ್ವ ಪರಬ್ರಹ್ಮ ತಾನೆ ಪರಬ್ರಹ್ಮ ಪ

ಹುದುಗಲ್ಲ ಕಣುಕಲ್ಲ ಬೇಳೇ ಭಕ್ಷ್ಯವು ಅಲ್ಲ
ಅದರೊಳಗಣ ಸಿಹಿ ಅದುವೆ ಪರಬ್ರಹ್ಮ ೧

ತೊಳೆಯಲ್ಲ ಬೀಜಲ್ಲ ತೊಗಟಲ್ಲ ಹಣ್ಣಲ್ಲ
ತಿಳಿಯೆ ರುಚಿಯು ಬೇರೆ ಅದುವೆ ಪರಬ್ರಹ್ಮ ೨

ಹಾಲು ನವ ನೀತವಲ್ಲ ಮೊಸರು ಮಜ್ಜಿಗೆಯಲ್ಲ
ಹಾಲೊಳಗಣ ಘೃತ ಅದುವೆ ಪರಬ್ರಹ್ಮ ೩

ದೇಹವಲ್ಲ ತತ್ವವಲ್ಲ ಮನ ಬುದ್ಧೀಂದ್ರಿಯವಲ್ಲ
ದೇಹದೊಳಗಣ ದೇಹಿ ಅದುವೆ ಪರಬ್ರಹ್ಮ ೪

ಸರ್ವಮಾಯೆ ಮಾತು ಮಿಥ್ಯ ಸರ್ವಬ್ರಹ್ಮವೇ ಸತ್ಯ
ಸರ್ವ ಚಿದಾನಂದ ಸರ್ವ ಪರಬ್ರಹ್ಮ ೫

## ೩೮೮

ಸಲ್ಲದು ಪುನರ್ಜನ್ಮ ಸಲ್ಲದು ಯೋಗಿಗೆ
ಪರದ ವಲ್ಲಭ ತಾನಾಗಿ ನಿತ್ಯ ಸುಖಿಸುವಾತಾಂಗೆ ಪ

ಬೀಜವದು ಹೋಗಿ ಅನ್ಯ ತೇಜದೊಳು ಬಿದ್ದ ಬಳಿಕ
ಬೀಜವೆಂದು ಬಿತ್ತಲದು ಫಲಿತವಾಗುವುದೋ
ಸಾಜಕರ್ಮಿಗಳು ಗುರುಕೃಪೆಯ ಪಡೆಯಲು
ಮುಕುತಿ ತಾನಲ್ಲದೆ ಪುನರ್ಜನ್ಮವೆಲ್ಲಿಯದೋ ೧

ಕಾಷ್ಠವದು ಹೋಗಿ ಅಗ್ನಿ ಕುಂಡದಲಿ ಸುಟ್ಟ ಬಳಿಕ
ಕಾಷ್ಠವೆಂದು ಕರೆಯಲದು ಕಾಷ್ಠವಹುದೇ
ಶ್ರೇಷ್ಠವಾದ ಬ್ರಹ್ಮದೊಳು ವೇಷ್ಠಿತಾನಾದ ಬಳಿಕ
ನಷ್ಟಮಾತಲ್ಲದೇ ಪುನರ್ಜನ್ಮವೆಲ್ಲಿಹುದು ೨

ಕೀಟವದು ಹೋಗಿ ಭ್ರಮರದಾಟದೊಳು ಬಿದ್ದು ತನ್ನ
ಕೀಟತನವಳಿದ ಮೇಲೆ ಕೀಟವಾಗುವುದೇ

ಪಾಡಿ ಚಿದಾನಂದನೊಳು ಕೂಟವು ತಾನಾದ ಮೇಲೆ
ಮುಕುತಿ ತಾನಲ್ಲದೆ ಪುನರ್ಜನ್ಮವೆಲ್ಲಿಯದು ೩

## ೩೮೯

ಸಹಜ ಸಮಾಧಿ ಸಹಜ ಬ್ರಹ್ಮವಾದುದೇ
ಸಹಜ ಸಮಾಧಿ ಪ

ಅರಸಾಗಿಕುಳಿತಿದ್ದು ಅರಸಾಗಿ ಮಲಗಿದ್ದು
ಅರಸಾಗಿ ನುಡಿವುದೇ ಸಹಜ ಸಮಾಧಿ ೧

ಜಗಬೇರೆಯಾಗದೇ ತಾ ಬೇರೆಯಾಗದೇ
ಜಗತಾನೊಂದಾದುದೇ ಸಹಜ ಸಮಾಧಿ ೨

ಒಳಗೆಂಬುದಿಲ್ಲವೇ ಹೊರಗೆಂಬುದಿಲ್ಲವೇ
ಒಳಹೊರಗು ಒಂದಾಗೆ ಸಹಜ ಸಮಾಧಿ ೩

ಎಲ್ಲಿದ್ದರೇನಿಲ್ಲ ಎಲ್ಲುಂಡರೇನಿಲ್ಲ
ಎಲ್ಲವು ತಾನಾಗೆ ಸಹಜ ಸಮಾಧಿ ೪

ಚಿದ್ವಸ್ತುವಾಗಿಯೇ ಚಿನ್ಮಾತ್ರವೇ ಇದ್ದು
ಚಿದಾನಂದನಿಹುದೇ ಸಹಜ ಸಮಾಧಿ ೫

## ೩೯೦

ಸಾಂಖ್ಯತಾರಕ ಅಮನಸ್ಕಾ ಬಿರುದಂತಾಗಿ
ತೆಗೆವುದು ಮಾಯೆ ಮುಸುಕು ಪ

ಜೀವನು ನೀನಲ್ಲವೆಂದು ನನಗಾವ ಪ್ರಪಂಚವು ಕಾರಣವಿಲ್ಲೆಂದು
ಇವ ಬ್ರಹ್ಮವು ನೀ ಸತ್ಯವೆಂದು ಗುರುದೇವನಿಂದಲಿ
ಬೋಧಿಪುದೇ ಸಾಂಖ್ಯ ಎಂದು ೧

ತನ್ನಲ್ಲಿಯೆ ಇಟ್ಟು ಕಣ್ಣು ಒಳಗೊಳಗೆ ತಾಕುಳಿತು
ಥಳಥಳಿಸುತಲಿನ್ನು ಭಿನ್ನವೆಂಬುದ ಕಳೆದಿನ್ನು
ಸಂಪನ್ನ ಸುಖವನು ಎಂಬುವುದ ತಾರಕವೆನ್ನು ೨

ಮರತೆ ಮನದ ಎಚ್ಚರದು ಏನು ಕರುಹಿಲ್ಲದವಳ
ಹೊರಗೆಂಬುದನು ಬರೆತುಂಬಿಹ ತೇಜದೊಳ್ ಸ
ದ್ಗುರು ಚಿದಾನಂದನ ಮನವೆಯಿದು ೩

## ೩೯೧

ಸ್ಥಿರದಿ ಸ್ಥಿರದಿ ನಿತ್ಯಾನಂದ ಭರಿತವಾಗಿರಲು
ಭರಿತವಾದಾನಂದ ಭರಿಸುತಿರಲು ಪ

ಆದಿಶಕ್ತಿಯು ಎಂಬ ಆಕಳನೆ ಬರಿಸಿ
ಸಾಧುಗುರು ಕರುವೆಂಬುದದನೆ ಮುಂದಿರಿಸಿ
ವೇದನಾಲಕು ಎಂಬ ಮೊಲೆಗಳನೆ ತೊರೆಸಿ
ಭೇದರಹಿತಾದವರು ಹಿಂಡಿಲನು ಕರೆಸಿ ೧

ಸ್ಥೂಲತನುವೆಂದೆಂಬ ಪಾತ್ರೆಯನೆ ತಂದು
ಲೋಲ ಸಾಂಖ್ಯವು ಎಂಬ ಕ್ಷೀರವನೆ ಕರೆದು
ಮೂಲಭೂತವದೆಂಬ ಹೆಪ್ಪನೆರೆದು
ಜೋಲುಮನಸಿನ ಬಡತನವನೆಲ್ಲ ಹರಿದು ೨

ಸಾಧಕಾಂಗಗಳೆಂಬ ಮೊಸರನ್ನು ಮಥಿಸಿ
ವಾದಹರವೆಂದೆಂಬ ಬೆಣ್ಣೆಯನು ತೆಗೆಸಿ

ಸಾಧು ಶಾಂತಜ್ಞವೆಂಬ ಪುಟದ ಮೇಲಿರಿಸಿ
ಆತ ಘೃತ ಚಿದಾನಂದ ಜ್ಯೋತಿಯೊಡ ಬೆರಸಿ ೩

## ೩೯೨

ಸುಳ್ಳೇ ತೋರಿದೆ ಜಗವೆಲ್ಲ
ಸುಳ್ಳಾದವರಿಗೆ ಸುಳ್ಳು
ಸುಳ್ಳೇ ತೋರಿದೆ ಜಗವೆಲ್ಲ ಪ

ಮೂರು ಮೂರುತಿ ಮೂರು ಶಕ್ತಿಯೆ ಸುಳ್ಳು
ಮೂರು ಸ್ಥಾನ ಮೂರು ಗುಣಗಳೇ ಸುಳ್ಳು
ಮೂರು ಮೂಲವೇ ಸುಳ್ಳು ತಾನಿಹುದೇ ಸುಳ್ಳು ೧

ಚಂದ್ರ ಸೂರ್ಯರುಗಳೆಂಬುವರೆ ಸುಳ್ಳು
ಇಂದ್ರರು ಅಹಮಿಂದ್ರರು ಸುಳ್ಳು
ಸಾಂದ್ರ ನಕ್ಷತ್ರವೇ ಇದು ಸುಳ್ಳು ತಾನಿಹುದೆ ಸುಳ್ಳು ೨

ದಿಗ್ಗಜಗಳು ದಿಕ್ಪಾಲಕರೆ ಸುಳ್ಳು
ವಗ್ಗಿಗರಹ ವಸು ಎಂಬರು ಸುಳ್ಳು
ಸ್ವರ್ಗವೆಂಬುದು ಅದು ಸುಳ್ಳು ೩

ಬಹುಲೋಕವು ಭುವನಂಗಳು ಸುಳ್ಳು
ಇಹಪರ ಎಂಬವು ಎರಡಿವು ಸುಳ್ಳು
ಬಹಿರಂಗವೆಂಬುದಿದು ಸುಳ್ಳು ತಾನಿಹುದೆ ಸುಳ್ಳು ೪

ನಾನಾರೂಪದ ಬಹೂರೂಪವೆ ಸುಳ್ಳು
ನಾನಾ ವಿನೋದಂಗಳು ಇವು ಸುಳ್ಳು
ನಾನಾ ಬೆಳಕುಗಳು ಅವು ಸುಳ್ಳು ತಾನಿಹುದೆ ಸುಳ್ಳು ೫

ಬ್ರಹ್ಮಾಂಡವು ತಾನಿಹುದೇ ಸುಳ್ಳು
ಪಿಂಡಾಂಡವು ತಾ ಮೊದಲಿಗೆ ಸುಳ್ಳು
ಕಂಡೆನೆಂದೆಂಬುವು ಎಲ್ಲ ಸುಳ್ಳು ತಾನಿಹುದೆ ಸುಳ್ಳು ೬

ಸುಳ್ಳು ಚಿದಾನಂದನೆಂಬುದು ಸುಳ್ಳು
ಸುಳ್ಳಿನ ಕೀಲನು ಅರಿತರಿಗೆ ಸುಳ್ಳು
ತಿಳಿಯದವರಿಗೆ ನಿಜಸುಳ್ಳು ತಾನಿಹುದೇ ಸುಳ್ಳು ೭

## ೩೯೩

ಹೇಗಿಹನು ಹಾಗಿಹನು ಪರಿಪೂರ್ಣ ಬ್ರಹ್ಮ
ಹೇಗಿಹನು ಹಾಗಿಹನು
ಹೇಗಿಹನು ಎಂತೆಂದು ಕೇಳುವರು ಯಾರು
ಹೀಗಿಹನು ಎಂತೆಂದು ಹೇಳುವರು ಯಾರು ಪ

ಹಸಿವೆಯಾಗಿರಲು ಹಸಿವೆಯಂತಿಹನು
ತೃಷೆಯು ತಾನಾಗಿರಲು ತೃಷೆಯಂತೆ ಇಹನು ೧

ದುಃಖಿಯಾಗಿರಲು ದುಃಖಿಯಂತಿಹನು
ಸುಖಿಯು ತಾನಾಗಿರಲು ಸುಖಿಯಂತೆ ಇಹನು ೨

ದುಷ್ಟ ತಾನಾಗಿರಲು ಅವ ದುಷ್ಟನಾಗಿಹನು
ಶಿಷ್ಟನಾಗಿರಲು ಅವ ಶಿಷ್ಟನಾಗಿಹನು ೩

ಜೀವನಾಗಿರಲು ಅವ ಜೀವನಾಗಿಹನು
ಶಿವನಾಗಿರಲು ಅವ ಶಿವನಾಗಿ ಇಹನು ೪

ಚಿತ್ತಕ್ಕೆ ಬುದ್ಧಿಗೆ ತಾನಿಹನು ದೂರ
ಸತ್ಯ ಚಿದಾನಂದ ಗುರುವೆಂಬಾತನು ೫

## ಸಂಪ್ರದಾಯದ ಹಾಡುಗಳು

### ೩೯೪

ಆರತಿ ಬೆಳಗಿದೆನೆ ಗುರುವಿಗೆ
ಆರತಿ ಬೆಳಗಿದೆನೆ
ಆರಾರು ಬೆಳಗೇ ಬೆಳಗದಂಥಾ
ಆರತಿ ಬೆಳಗಿದೆನೆ ಪ

ಹೃದಯ ತಳಿಗೆಯಲಿ ನಾನೀಗ
ಭಾವದಾರತಿ ಮಾಡಿ
ವಿದವಿದ ಬುದ್ಧಿಯ ಬತ್ತಿಯ ಮಾಡಿ
ನಿರ್ಮಲಾಜ್ಯ ಹೊಯ್ದು ೧

ಜ್ಞಾನ ಜ್ಯೋತಿಯನೆ ಮುಟ್ಟಿಸಿ
ಚಿತ್ತದಿಂ ಪಿಡಿದು
ನಾನೇ ನಾನೇ ನಾನೆಂದಾ
ರತಿ ಬೆಳಗಿದೆನೇ ೨

ಬಲುಶಶಿ ಸೂರ್ಯರ ಶತಕೋಟಿ
ಪ್ರಭೆಯನೆ ಮೀರ್ದು
ಥಳಥಳ ಥಳಥಳ ಹೊಳೆಯುತ
ನಾನೇ ಆರತಿ ಬೆಳಗಿದೆನೆ ೩

ಎತ್ತೆತ್ತ ನೋಡೆ ಪ್ರಭೆ ತಾ
ಮೊತ್ತ ಮೊತ್ತವಿದೆ ಕೋ
ಚಿತ್ತದಿಂದಲಿ ಚಿಜ್ಯೋತಿಯ ಪ್ರಭೆ
ನಿತ್ಯದಿ ಬೆಳಗಿದೆನೆ ೪

ಅನಂತಾನಂತವ ಮುಚ್ಚಿಹುದು

ಅನಂತಾನಂತವನು
ಅನಂತ ಚಿದಾನಂದ ಗುರು ತಾನೆ
ಎಂದಾರತಿ ಬೆಳಗಿದನೆ ೫

## ೩೯೫

ಆರತಿ ಮಂಗಳಾರತಿ ಆರತಿ ಬೆಳಗಿದೆ
ಆತ್ಮ ಚಿದಾನಂದಗೆ ಪ

ಆರು ಸ್ಥಾನವ ತಿಳಿದು
ಆರನೆ ಸ್ಥಳದಿ ನಿಂತು
ಆರು ಭ್ರಮೆಯ ಹರಿದು
ಆರ್ ಮೇಲೆ ಬೆಳಗಿದೆ ೧

ಮೂರು ಸ್ಥಾನವ ತಿಳಿದು
ಮುರನೆಯ ಸ್ಥಳದಿ ನಿಂದು
ಮೂರು ಗುಣವ ಹರಿದು
ಮೂರ್ ಮೇಲೆ ಬೆಳಗಿದೆ ೨

ಎರಡು ಸ್ಥಾನವ ತಿಳಿದು
ಎರಡನೆಯ ಸ್ಥಳದಿ ನಿಂದು
ಎರಡನೆ ಚಿದಾನಂದನೊಳು
ಎರಡಾಗದೆ ಬೆಳಗಿದೆ ೩

## ೩೯೬

ಆರತಿಯನೆತ್ತಿರೆಲ್ಲ ಆನಂದಗೆ
ಆರತಿಯನೆತ್ತಿರೆಲ್ಲ ಸ್ವಾನಂದಗೆ ಪ

ಆರು ಚಕ್ರಗಳಿಂದ ಅತ್ತಲಿಹಗೆ
ಮೀರಿ ಭ್ರೂಮದ ಸದನ ಮೀರಿಹಗೆ
ಸಾರಿ ಸಹಸ್ರ ಸದನ ಬಿಟ್ಟಿಹಗೆ
ತೋರುತಿಹ ಬ್ರಹ್ಮರಂಧ್ರ ತುರೀಯ ರೂಪಗೆ ೧

ಕಣ್ಣಿನೊಳಗೆ ಕಣ್ಣು ತೆರೆದು ನಿರೀಕ್ಷಿಪಗೆ
ಕಣ್ಣ ಬೊಂಬೆಯೊಳಗೆ ಕುಳಿತು ನೋಡುತಿಹಗೆ
ಭಿನ್ನವಿಲ್ಲದ ಆನಂದ ಸುಖದಿ ರಮಿಸುತಿಹನಿಗೆ
ಹೊನ್ನ ತಗಡಿನಂತೆ ಥಳಥಳಿಸುತಿಹಗೆ ೨

ಉಕ್ಕುವ ತೇಜಗಳೆಲ್ಲ ತಾವೊಂದಾಗಿ ಕೂಡಿ
ಮಿರು ಹರಿವ ಬೆಳದಿಂಗಳಂತೆಯಿಹಗೆ
ಲೆಕ್ಕವಿಲ್ಲದಲೆಯುತಿಹ ಸುಖದ ರಾಶಿಗೆ
ಮುಕ್ತಿ ಮೂರುತಿ ಶ್ರೀ ಚಿದಾನಂದ ಗುರುವಿಗೆ ೩

## ೩೯೭

ಆರತಿಯಾಡುವೆನು ಸದ್ಗುರುವಿಗೆ
ಆರತಿಯಾಡುವೆನು ಪ

ಕಾಯವ ಜರೆಯುತ್ತಲಿ
ಕೈಯನೆ ಮುಗಿಯುತಲಿ
ಮಾಯವ ಹರಿಯುತಲಿ
ಬಾಯಿ ಕೊಂಡಾಡುತಲಿ ಸದ್ಗುರುವಿಗೆ ೧

ಕುಣಿ ಕುಣಿದಾಡುತಲಿ
ಮನವನೆ ನೀಡುತಲಿ
ಘನಮುಕ್ತಿ ಬೇಡುತಲಿ
ಅನುಮಾನವ ಬಿಡುತಲಿ ಸದ್ಗುರುವಿಗೆ ೨

ಅರಿವನೆ ಅರಿತು
ಗುರಿಯನೆ ಮರೆತು
ಪೂರವನೆ ಬೆರೆತು
ಗುರು ಚಿದಾನಂದನರಿತು ಸದ್ಗುರುವಿಗೆ ೩

## ೩೯೮

ಖಳರನು ತರಿವಾ ಬಗಳಾಂಬೆಗೆ
ಕಮಲದಾರತಿ ಬೆಳಗಿರೆ ಪ

ಅರಿ ಎಂಬ ಶಬ್ಧವು ಕಿವಿಗೆ ಬೀಳಲು
ಸರಿದವು ಸರಿದವು ಖಡ್ಗದಿಂ ಕೆಂಗಿಡಿ
ಭರದಿಂದರಿಯನೆ ತುಡುಕಿಯೆ ಮುಂದಲೆ
ತರಿದಳಾಗಲೆ ತಲೆಯ ಬಗಳಾಂಬೆ
ಮುರಿದಳಾಗಲೆ ತಲೆಯ ಬಗಳಾಂಬೆ ೧

ಕಡಿಯುತ ಅವುಡನು ಅರಿಯನು ದೃಷ್ಟಿಸಿ
ಝಡಿಯುತ ಮುದ್ಗರ ಹಿಡಿದು ನಾಲಗೆ
ಮೃಡಹರಿ ಬ್ರಹ್ಮರು ಅಹುದಹುದೆನೆ
ಹೊಡೆದಳಾಗಲೆ ಅರಿಯ ಬಗಳಾಂಬ
ಪುಡಿಯ ಮಾಡಿದಳರಿಯ ಬಗಳಾಂಬ ೨

ಕಾಲಲಂದುಗೆ ಗೆಜ್ಜೆ ಕಂಠಾಭರಣವು
ಮೇಲೆ ಸರಿಗೆಪೋಲೆ ಮೂಗುತಿ ಹೊಳೆಯಲು

ಲೋಲ ಚಿದಾನಂದ ರೂಪಿಣಿ ಬಗಳೆಯು
ಪಾಲಿಸಿದಳು ಭಕ್ತರ ಬಗಳಾಂಬ
ಲಾಲಿಸಿದಳು ಭಕ್ತರ ಬಗಳಾಂಬ ೩

## ೩೯೯

ಜಯ ಜಯ ಮಂಗಳ
ಜಯ ಮಂಗಳ ಅಮರಾಧೀಶನಿಗೆ ಪ

ಕಪ್ಪು ಗೊರಳನಿಗೆ ಕರುಣಾಸಮುದ್ರಗೆ
ಕಾಮ ಸಂಹಾರ ಮಾಡಿದಗೆ
ಮುಪ್ಪುರ ಗೆಲಿದಗೆ ಮೂಜಗದೊಡೆಯಗೆ
ಮೂರನೆಯ ಗುಣದಾ ಮನೆಯವಗೆ
ಒಪ್ಪುವ ದಶಭುಜ ತೋಳಲಿ ಡಮರುಗ
ವಿಡಿದಿಹ ಪಾಶಾಂಕುಶಧರಗೆ
ತಪ್ಪದೆ ಭಕ್ತರಿಗೊಲಿವಗೆ ಪಾಲಿಪ
ಕರುಣಕೋಟಿ ಪ್ರಕಾಶನಿಗೆ ೧

ಕರಿದೊಗಲುಟ್ಟಿಹ ಕಮಲಜಪಾಕಸಖ
ಅಖಂಡಲಖಂಡ ಪ್ರಕಾಶನಿಗೆ
ಶಿರದಲಿ ಚಂದ್ರನ ಸೂಡಿಯೆ ಜಡೆಯೊಳು
ಸುರನದಿ ಧರಿಸುತ ಮೆರೆದವಗೆ
ಕೊರಳೊಳು ರುಂಡದ ಮಾಲೆಯ ಹಾಕಿಹ
ಕೋಮಲ ಸ್ಫಟಿಕ ಪ್ರಕಾಶನಿಗೆ
ಕರದಲಿ ಕಂಕಣ ಧರಿಸಿಹ ಮೂರ್ತಿಗೆ
ಕಣ್ಣುರಿಭಾಳದಿ ರಂಜಿಪಗೆ ೨

ದೇಶದಿ ಪೆಸರಾಗಿರುತಿಹ ಅಮರಾಧೀಶನು
ಎನಿಪ ನಾಯಕಗೆ

ಮಾಸದ ಮಂಜಿನ ಮಲೆಯೊಳು ನೆಲಸಿಯೆ
ಆಸೆಯನೆಲ್ಲವ ಸಲಿಸುವಗೆ
ಶ್ರೀಸಚ್ಚಿದಾನಂದಾವಧೂತ ದೊರೆ
ಶಿರತಾರಕ ಅಮರೇಶನಿಗೆ ೩

## ೪೦೦

ಜಯ ಜಯ ಮಂಗಳ
ಜಯ ಮಂಗಳ ಶುದ್ಧಾದ್ವೈತನಿಗೆ ಪ

ಅಗಣಿತ ಮಹಿಮಗೆ ಅಕ್ಷಯರೂಪಗೆ
ಅಖಂಡ ಸಹಜಾನಂದನಿಗೆ
ಝುಗಿ ಝುಗಿತಾತ್ಮಗೆ ಝುಳುಕಿಸಿ ಕರ್ಣದಿ
ಝಣನಾದವ ಕೇಳ್ವನಿಗೆ
ಸೊಗಯಿಸಿ ಚಂದ್ರನ ಶತಕೋಟಿಯ
ಪ್ರಭೆ ಸಾರವ ಸವಿಸವಿದುಣ್ಣುವಗೆ
ಬಗೆ ಆನಂದದಿ ಸುಖಿಸುವ ದೇವಗೆ
ಭಾಸ್ಕರ ತೇಜಃಪುಂಜನಿಗೆ ೧

ನಿತ್ಯಾನಂದಗೆ ನಿರ್ಮಲರೂಪಗೆ
ನಿಶ್ಚಲ ಪರಬ್ರಹ್ಮಾತ್ಮನಿಗೆ
ನಿತ್ಯಶುದ್ಧಗೆ ನಿಜನಿರ್ಮಾಯಗೆ
ನಿಜಬೋಧ ಜ್ಞಾನೈಕ್ಯನಿಗೆ
ಪ್ರತ್ಯಗಾತ್ಮಗೆ ಪೂರ್ಣಬ್ರಹ್ಮನಿಗೆ
ಪರಮ ಪರತರ ಪಂಡಿತಗೆ
ನಿತ್ಯತೃಪ್ತಗೆ ನಿಗಮಾಗಮನಿಗೆ
ನಿಶ್ಚಿಂತಾತ್ಮ ನಿಸ್ಪೃಹಗೆ ೨

ಕೈಯಲಿ ಪಿಡಿದಿಹ ಜಪಮಾಲೆಯ
ಸರ ಕರ್ಣಕುಂಡಲವಿಟ್ಟಿಹಗೆ
ಮೈಯೊಳು ಪೊದ್ದಿಹ ಕಾಷಾಯಂಬರ
ಮಿರುಪಿನ ಕೌಪೀನವುಟ್ಟಿಹಗೆ
ಮೈಯೊಲೆದಾಡುವ ಸ್ವಾತ್ಮಾನಂದದಿ
ನಲಿವ ಸದ್ಗುಣ ಶಾಂತನಿಗೆ
ಮೈಯನೆ ಸದ್ಗತಿ ಭಕ್ತರಿಗೀಯುವ
ವ್ಯಾಪಿತ ಜೀವನ್ಮುಕ್ತನಿಗೆ ೩

ಆರವಸ್ಥೆಯ ಧರಿಸಿಯೆ ಜಗದಲಿ
ಅನಂತರೂಪ ತಾನಾಗಿಹಗೆ
ಮೀರಿಯೆ ಸದ್ಗುಣ ನಿರ್ಗುಣ ರೂಪವ
ಮೆರೆದಿಹ ಮುಮುಕ್ಷಾಂಗನಿಗೆ
ತೋರುವ ತ್ವಂಪದ ತತ್ವಮಸಿ
ಪದತೋರಿ ವಿರಾಜಿಪ ತುಷ್ಟನಿಗೆ
ಧೀರೋದ್ಧಾರಗೆ ದೀನರನಾಥಗೆ
ದೃಶ್ಯಾದೃಶ್ಯ ವಿದೂರನಿಗೆ ೪

ನಿರುಪಮ ನಿರಮಯ ನಿಜ ನಿರ್ಲಿಪ್ತಗೆ
ನಿರ್ಭಯ ನಿರ್ವಿಕಲ್ಪನಿಗೆ
ಪರಮಪುರುಷಗೆ ನಿಗಮೋದರನಿಗೆ
ಪರಮಾರೂಢಾ ಮಾರ್ಗನಿಗೆ
ಗುರುಚಿದಾನಂದ ಅವಧೂತಾತ್ಮಗೆ
ಗುಣನಿಧಿ ತುರಿಯಾತೀತನಿಗೆ
ಸ್ಥಿರಸಿದ್ಧ ಪರ್ವತದಾಸ ಶ್ರೀಪುರುಷಗೆ
ಬಗಳಾ ಶ್ರೀಗುರು ರೂಪನಿಗೆ ೫

# ೪೦೧

ಜಯ ಜಯ ಮಂಗಳ
ಜಯ ಮಂಗಳ ಸುಂದರಿ ಶಾಂಭವಿಗೆ ಪ

ಕಾಲಲಂದುಗೆ ಕೈಯಲಿ ಕಂಕಣ ಲಲಾಟದಿ ಚಂದ್ರನ ನಿಟ್ಟಿಹಳೇ
ಕಳೆಯಿಂ ಕಾಂತಳೆ ಕಮಲ ಮುಖಿಯಳೆ
ಹೊಳೆವ ಮುತ್ತಿನ ವಾಲೆಯಳೇ
ನಳಿನ ಮುಖಿಯರ ನಡುವೆ ಕುಳಿತು
ಥಳ ಥಳ ಹೊಳೆಯುವಳೇ
ಒಳಹೊರಗೆ ತನ್ನ ಪ್ರಭೆಯನು ತೋರಿ
ನೋಡಿ ಓಲಾಡಿ ತಾ ನಗುವವಳೇ ೧

ಪಂಚರತ್ನದಾ ಪದಕವನಿಟ್ಟು ಪದ್ಮಾಸನದಲ್ಲಿ ಕುಳಿತಿಹಳೇ
ಮಿಂಚುವ ಮೂಗುತಿ ಮೂಗಲಿ ಹೊಳೆಯುತ
ಮಿಗಿಲಾದಾಭರಣವ ಧರಿಸಿಹಳೇ
ಅಂಚು ರಂಗಿನ ಸೀರೆಯನುಟ್ಟು
ಅನಂತ ರೂಪವ ತೋರಿಹಳೇ
ಅಂಚೆ ನಡೆಯಲಿ ನಡೆಯುತ ನಲಿಯುತ
ಸದಾ ಮತ್ತಳಾಗಿರುವವಳೇ ೨

ರತ್ನದ ಉಡಿದಾರ ಚಿನ್ನದ ಚಿಂತಾಕ
ಹೊನ್ನಿನ ಡಾಬನು ತೊಟ್ಟಿಹಳೇ
ಎಡೆ ಎಡೆಗೆ ತಾ ಧರಿಸಿಹಳೇ
ಸಣ್ಣ ಬಣ್ಣದ ಕುಪ್ಪಸ ತೊಟ್ಟು
ಮುಗುಳ್ನಗೆ ಬೀರುತ ಕುಳಿತಿಹಳೇ
ಧನುರ್ಬಾಣ ಪಾಶವ ಕೈಯಲಿ ಅಂಕುಶ
ಆಯುಧ ಪಿಡಿದಿಹಳೇ ೩

ದುಂಡು ಕೈಯವಳೇ ಸುಂದರ ಕಾಯಳೇ
ಚಂಡ ಮುಂಡ ಸಂಹಾರಕಳೇ
ಮಾಂಡಲಿಕಳೇ ಮಹದ್ಭೂತಳೇ
ಮಹಾಯೋಗಿ ವಿಲಾಸಳೇ
ದಂಡಿ ಕಿರೀಟಳೇ ದಂಡೆಯ ಮುಡಿದಿಹ
ಗೊಂಡೆಯಂದೊಲಿದಾ ಜಡೆಯವಳೇ
ಹಿಂಡು ಹಿಂಡಾದ ದೈತ್ಯರನೆಲ್ಲರ ಖಂಡಿಸಿ
ದೇವಿ ತಾ ಕೊಂದಿಹಳೇ ೪

ಆದಿರಹಿತಳೇ ಅದ್ವಯ ರೂಪಳೇ
ಅನಂತ ಕೋಟಿ ಪ್ರಭಾರೂಪಳೆ
ಶುದ್ಧ ಬುದ್ಧಳೇ ನಿತ್ಯಮುಕ್ತಳೇ
ಚಿದಾನಂದ ರೂಪಳೇ
ಸದ್ಯೋಜಾತಳೇ ಸರ್ವಾತೀತಳೆ
ಸಿದ್ಧ ಪರ್ವತ ಬಗಳೇ
ಶುದ್ಧಾದ್ವೈತಳೆ ಸುಷುಮ್ನನಾಳಳೆ
ಸೂಕ್ಷ್ಮವೆನಿಸುವಳೇ ೫

## ೪೦೨

ಜಯದೇವ ಜಯದೇವ ಜಯ ಸದ್ಗುರುವೆಂದು
ಜಯವೆಂದು ಬೆಳಗಿದಳು ಬಗಳಾಂಬನಿಂದು ಪ

ಬಿಗಿದ ಹೆದೆ ಬೆನ್ನಿಂಗೆ ಧನು ಶರಗಳ ಸೆಕ್ಕಿ
ತಗತಗನೆ ಹೊಳೆಯುತಿಹ ಖಡ್ಗವ ಹೊರಗಿಕ್ಕಿ
ಝುಗಝುಗನೆ ಆಭರಣ ಹೊಳೆಯಲು ಕಳೆಯುಕ್ಕಿ
ಮಿಗಿಲೆನಿಪ ಆರುತಿಯೊಳ್ ಮುಕ್ತಾಕ್ಷತೆಯನಿಕ್ಕಿ ೧

ಹತ್ತು ಕೈಯೊಳು ಹೊತ್ತು ನೆಗೆಹಿದಳು ಚದುರೆ
ರತ್ನಖಚಿತದ ನತ್ತು ಹಣೆಬಟ್ಟು ಬೆದರೆ
ಮತ್ತೆ ಕಿರುಬೆರಳ ಮುತ್ತು ಮುತ್ತುದುರೆ
ಎತ್ತತ್ತಲೂ ಆರತಿಯ ಬಲು ಬೆಳಕು ಚದುರೆ ೨

ಎತ್ತಿ ಹಾಡುತ ಒಲಿದು ಬಗಳೆ ಗುರುವಿಂಗೆ
ತಥ್ಥೆಯ್ಯ ತಥ್ಥೆಯ್ಯ ತಥ್ಥೆಯ್ಯ ಕುಣಿದು
ಎತ್ತಲಾಯಿತೋ ದೇಹ ಪರವಶವದಾಗೆ
ಮತ್ತೆ ಕಂಡಳು ತನ್ನ ಚಿದಾನಂದಾತ್ಮಗೆ ೩

## ೪೦೩

ಜಯದೇವ ಜಯದೇವ ಜಯ ಬಗಳಾ ರಮಣ
ಜಯ ಜಯತು ಜಯ ಜಯತು ಜಯ ನಿರಾವರಣ ಪ

ಆಧಾರವ ಹತ್ತಿ ಸ್ವಾಧಿಷ್ಠಾನವ ತೋರಿ
ಭೇದಿಸಿ ಮಣಿಪೂರಕ ಅನಾಹತ ಸಾರಿ
ಶೋಧಿಸಿ ವಿಶುದ್ಧಿ ಆಜ್ಞೆಯವನೇರಿ
ಹರಿದು ತ್ರಿಕೋಣೆಯ ಸಹಸ್ರಾರ ಮೀರಿ ೧

ತೋರಲು ಪ್ರಭೆಗಳು ತುಂತುರು ತುಂತುರುಗಳಿಂದ
ಮೀರಿಯೆ ರವಿ ಶತಕೋಟಿಯ ಕಳೆ ಬೆಳಗುತ ಚೆಂದ
ಬೀರುತ ಬೆಳಕನು ಪುಂಖಾನುಪುಂಖದಿ
ಚಾರು ಮಂಗಳ ಮೂರ್ತಿ ಘನ ಬ್ರಹ್ಮಾನಂದ ೨

ಅವ್ಯಕ್ತಾ ಚಲ ಗೋಚರ ಅಗಮ್ಯ ವಸ್ತು
ನಿರ್ವಿಕಲ್ಪ ನಿತ್ಯ ನಿರ್ಮಲ ಸಂವಿತ್ತು
ನವ್ಯ ಕಲ್ಪ ಸಿದ್ಧ ಪರ್ವತ ನಿಜ ಕರ್ತೃ
ದಿವ್ಯ ಚಿದಾನಂದಾವಧೂತ ಬಗಳ ಪರವಸ್ತು ೩

## ೪೦೪

ಜಯದೇವಿ ಜಯದೇವಿ ಜಯ ದುರಿತ ಬ್ರಹ್ಮಾಸ್ತ್ರ
ಜಯಜಯ ಜಯತು ಪ್ರತಿಯಿಲ್ಲದಸ್ತ್ರಾ ಪ

ಉಟ್ಟಿಹ ಕಾಶಿಯ ಉಡಿಗೆ
ತೊಟ್ಟಿಹ ಎದೆ ಕಟ್ಟು
ಕಟ್ಟಿದ ಖಡ್ಗ ಕಠಾರಿ
ರಕ್ತದ ತಿಲಕವಿಟ್ಟು
ಮುಷ್ಟಿಯಲಿ ಮುದ್ಗರ ಶೂಲ
ಧನು ಶರವಳವಟ್ಟು
ಬಿಟ್ಟ ಕಂಗಳ ಕಿಡಿಯು
ಛಟಛಟ ಛಟವಿಟ್ಟು ೧

ಏರಿಸಿ ಪಟ್ಟೆಯ ಹಲಗೆ
ಎಡಬಲ ನೋಡದೆ
ಹರಿಯ ಘನ ಶತ್ರುವಿನ
ನಾಲಗೆ ಹಿಡಿದೆಳೆಯೆ
ವೀರ ಮಂಡಿಯ ಹೂಡಿ
ಅವುಡನೇ ಕಡಿಕಡಿದೇ
ಹಾರಿಸಿದೆ ತಲೆಗಳನು
ಹಾ ಎನುತಲಿ ಬಿಡದೆ ೨

ಮುಕುಟ ಕಾಂತಿಯಮಿಹಿರ
ಕೋಟಿಯ ಕಳೆಯು ಹಳಿಯೆ
ಲಕಲಕನೆ ಬೆಳಗುತಿಹ
ಕುಂಡಲ ಸರಪಳಿಯೆ
ಚಕಚಕನೆ ಮೂಗುತಿಯ
ಮುತ್ತು ಹೊಳೆಹೊಳೆ ಹೊಳೆಯೇ

ಸಬಲೆ ಎನಿಪ ಚಿದಾನಂದ
ಬಗಳಾಂಬ ತಿಳಿಯೆ ೩

## ೪೦೫

ಜಯದೇವಿ ಜಯದೇವಿ ಜಯ ಬಗಳಾಮುಖಿಯೇ
ಜಯವೆಂದು ಬೆಳಗುವೆನು ಜಯಭಕ್ತ ಸಖಿಯೇ ಪ

ಪೀತಾಂಬರಧಾರಿಣಿ ಪೀತಭೂಷಣೆ
ಪೀತ ಪುಷ್ಪವು ನಿತ್ಯ ಪೀತೋಪಚರಣೆ
ಪೀತಕುಂಡಲ ಹಾರಪೀತ ವರ್ಗಾವರಣೆ
ಪೀತಮೂರ್ತಿಯ ನೆನೆವೆ ಪೀತ ಪ್ರಿಯೆ ಸ್ಮರಣೆ ೧

ಬತ್ತೀಸಾಯುಧ ಪಿಡಿದೆ ಭಯಂಕರಿ ಉಗ್ರೇ
ಶತ್ರುನಾಶಕಿ ನೀನು ಭಕುತ ಸಾಹಸ್ರೇ
ಮತ್ತೆ ಹುಡುಕುತ್ತಿರುವೆ ದುಷ್ಟರನು ಶೀಘ್ರೆ
ನಿತ್ಯ ನಾ ಭಜಿಸುತಿಹೆ ಮನವ ಏಕಾಗ್ರೇ ೨

ಬ್ರಹ್ಮ ಚಿದಾನಂದ ಬಗಳಾಮುಖಿ ರಾಣಿ
ಹಮ್ಮಳಿದ ಮಹಿಮರಾ ಮೆಚ್ಚಿನ ಕಟ್ಟಾಣಿ
ಬ್ರಹ್ಮರಂಧ್ರದೊಳು ವಾಸಿಸುತಿಹ ದಿನಮಣಿ
ಬಿಮ್ಮನೆ ನಮಗೊಲಿಯೆ ಶೀಘ್ರದಿಂ ಕೃಪಾಣಿ ೩

## ೪೦೬

ಜೋ ಜೋ ಎನ್ನಿ ನಿರ್ವಿಕಾರಿಯ
ಜೋ ಎಂದು ತೂಗಿರಿ ಬ್ರಹ್ಮಾಸ್ತ್ರ ದೊರೆಯ ಪ

ವಾದಾತೀತಳಿಗೆ ಹೃದಯ ತೊಟ್ಟಿಲ ಮಾಡಿ
ವೇದ ನಾಲಕು ಎಂಬ ನೇಣನೆ ಹೂಡಿ
ಸಾಧನ ಚತುಷ್ಟಯ ಹಾಸಿಗೆ ಹಾಸಿ
ಬೋಧಾನಂದಳನು ಭಾವದಿ ತಂದು ನೋಡಿ ೧

ಶುದ್ಧದ ಚವುರಿ ಸಡಿಲಿಸಿ ಮಗ್ಗುಲಲಿ ಶಾಂತರಸ ದೀಪಗಳ ಹಚ್ಚಿ
ಹೊಡೆಯುತಿಹ ಭೇರಿಗಳ ಘಂಟಾರವ ಹೆಚ್ಚೆ
ಎಡೆಬಿಡದೆ ಓಂಕಾರ ಮಂತ್ರ ಘೋಷಣವು ಮುಚ್ಚಿ
ಕಿಡಿ ನಯನೆಯಳನು ನೋಡಿ ಹರುಷ ತುಂಬೇರಿ ೨

ಹಿರಿದಾ ಖಡ್ಗದ ಹಲಗೆ ಬಲ ಭಾಗದಲಿಟ್ಟು
ಶರಶಾರ್ಜ ಬತ್ತಳಿಕೆ ಎಡಭಾಗದಲ್ಲಿಟ್ಟು
ದುಷ್ಟ ಶತ್ರುಗಳ ಕಾಲದೆಸೆಗಿಟ್ಟು
ಪರಮಾಮೃತ ಪಾನ ಪಾತ್ರೆ ತುಂಬಿಟ್ಟು ೩

ಜೋ ಜೋ ಶತ್ರು ಸ್ತಂಭಿನಿ ಎನ್ನಿರಿ ನರರೆಲ್ಲ
ಜೋ ಜೋ ಗತಿಮತಿ ಸ್ತಂಭಿನಿ ಎನ್ನಿರಿ ಸುರರೆಲ್ಲ
ಜೋ ಜೋ ಜಿಹ್ವಾ ಸ್ತಂಭಿನಿ ಎನ್ನಿರಿ ಹರರೆಲ್ಲ
ಜೋ ಜೋ ಸ್ತಂಭಿನಿ ಎನ್ನಿರಿ ಧರೆಯೆಲ್ಲ ೪

ಜೋ ಜೋ ಸುರಗಿರಿ ಧೈರ್ಯದಾಯಿನಿ ಜೋ ಜೋ
ಜೋ ಜೋ ಹರಿ ಸಮ ಭಾಗ್ಯವೀವಳೆ ಜೋ ಜೋ
ಜೋ ಜೋ ಶಿವ ಸಮ ಸತ್ವವೀವಳೆ ಜೋ ಜೋ
ಜೋ ಜೋ ನಂಬಿದ ರಾಜ್ಯವೀವಳೆ ಜೋ ಜೋ ೫

ಭಕ್ತರಭಿಮಾನಿ ಭಕ್ತಮಾತೃಕೆ ಜೋ ಜೋ
ಭಕ್ತವತ್ಸಲೆ ಭಕ್ತ ಕರುಣಾಳು ಜೋ ಜೋ
ಭಕ್ತ ಜೀವನಿ ಭಕ್ತ ಬಂಧುವೆ ಜೋ ಜೋ
ಭಕ್ತ ಚಿಂತಾಮಣಿ ಭಾಗ್ಯಳೇ ಜೋ ಜೋ ೬

ಯೋಗಾರೂಢಕೆ ಏಕಾಕ್ಷರಿ ಜೋ ಜೋ
ಯೋಗಿ ಹೃದ್ವಾಸಿನಿ ಯೋಗ್ಯಳೇ ಜೋಜೋ
ಯೋಗಿ ಬೃಹತ್ಯಾಗಿ ವಿರಾಗಿ ಜೋಜೋ
ಯೋಗಿಗಳ ಭಂಡಾರಿ ಯೋಗೀಳೆ ಜೋಜೋ ೭

ಚಿದಬಿಂದುಗಳೆಂಬ ಮಂತ್ರ ಪುಷ್ಪ ಚೆಲ್ಲಿ
ಚೆದುರೆಯರು ಮಂಗಳಾರತಿ ಬೆಳಗುತಿಲ್ಲಿ
ಸದಮಳೆ ನೀ ಮಲಗು ಯೋಗ ನಿದ್ರೆಯಲಿ
ಚಿದಾನಂದ ತಾನಾದ ಬಗಳಾಂಬೆ ಸುಖದಲಿ ೮

## ೪೦೭

ಜೋ ಜೋ ಜೋ ಜೋ ಎನ್ನಿ ನಿರ್ವಿಕಾರಗೆ
ಜೋ ಎಂದು ತೂಗಿರಿ ಚಿದಾನಂದ ದೊರೆಗೆ ಪ

ಚಿದ್ಬಯಲಿನೊಳು ಹೃದಯ ತೊಟ್ಟಿಲ ಮಾಡಿ
ಬದ್ಧ ವೇದಾಂತದ ನೇಣ ಬಿಗಿದು
ಸದ್ಭಾವವೆಂಬ ಹಾಸಿಗೆಯ ಹಾಸಿ
ಶುದ್ಧಾತ್ಮನನು ಭಾವದಿ ತಂದು ನೀಡಿ ೧

ಅದ್ವೈತವೆಂಬ ಆಭರಣ ತೊಡಿಸಿ
ಸಿದ್ಧ ಭೂಮಿಕೆ ಎಂಬ ಅಡವನಿಡಿಸಿ
ಬುದ್ಧಿ ನಿರ್ಮಳವಾದ ತಲೆದಿಂಬನಿಡಿಸಿ
ನಿದ್ದೆ ಮಾಡೋ ಬ್ರಹ್ಮಾನಂದ ಬೋಧದಲಿ ೨

ಚಿತ್ಪ್ರಭೆಯ ದೀಪವನು ಎಡಬಲದಿ ಹಚ್ಚಿ
ಮೊತ್ತವಹ ದಶನಾದ ಭೇರಿಯರವ ಹಚ್ಚಿ
ಮತ್ತೆ ಓಂಕಾರ ಮಂತ್ರ ಘೋಷದಿ ಮುಚ್ಚಿ
ನಿತ್ಯಾತ್ಮನನು ನೋಡಿ ಹರುಷ ತುಂಬುತಲಿ ೩

ವಸ್ತು ಸಾಕ್ಷಾತ್ತೆಂಬ ಮುತ್ತೈದೆಯರೆಲ್ಲ
ಸ್ವಸ್ಥ ಚಿತ್ತೆಂಬುದನೆ ಸಿಂಗರಿಸಿಕೊಂಡು
ನಿಸ್ಸಂಗನಹ ಆತ್ಮ ಶಿಶುವನೊಡತಂದು
ಸುಸ್ವರದ ನಾದದಲಿ ಜೋಗುಳವ ಪಾಡುತಲಿ ೪

ಜೋ ಜೋ ಕಾಮಸ್ತಂಭವ ಎನ್ನಿ ನರರೆಲ್ಲ
ಜೋ ಜೋ ಕ್ರೋಧ ಸ್ತಂಭನ ಎನ್ನಿ ನರರೆಲ್ಲ
ಜೋ ಜೋ ಮೋಹ ಸ್ತಂಭನ ಎನ್ನಿ ನರರೆಲ್ಲ
ಜೋ ಜೋ ವಿಷಯ ಸ್ತಂಭನ ಎನ್ನಿ ನರರೆಲ್ಲ ೫

ಜೋ ಜೋ ಯಮನಿಯಮಾಸನ ಅರುಹಿದವನೆ
ಜೋ ಜೋ ಜೋ ಜೋ ಖೇಚರ ಮುದ್ರೆ ನಿಲಿಸಿದವನೆ
ಜೋ ಜೋ ಜೋ ಜೋ ಅವಿದ್ಯೆ ಖಂಡಿಸಿದವನೆ
ಜೋ ಜೋ ಜೋ ಜೋ ಜೀವನ್ಮುಕ್ತಿದಾತನೆ ೬

ಜೋ ಜೋ ಪರಮಾರೂಢನೆ ಪರಮೇಶ
ಜೋ ಜೋ ಪರಮ ಪರೇಶನೆ ಪಂಡಿತ
ಜೋ ಜೋ ನಿರುತ ವಸ್ತು ವ್ಯಕ್ತ ಅವ್ಯಕ್ತ
ಜೋ ಜೋ ಶರಣ ರಕ್ಷಕ ರಾಜ ಯೋಗೀಂದ್ರ ಜೋ ಜೋ ೭

ಸತ್ಯ ಸನಾಥ ವಿಶ್ವೋತ್ಪತ್ತಿ ಜೋ ಜೋ
ಪ್ರತ್ಯಗಾತುಮ ಪರಬ್ರಹ್ಮನೆ ಜೋ ಜೋ
ನಿತ್ಯ ಸಹಜಾನಂದ ಚಿನ್ಮಾತ್ರ ಜೋ ಜೋ
ಭಕ್ತರ ಭಂಡಾರಿ ಭಾಗ್ಯನೆ ಜೋ ಜೋ ೮

ಮಿಹಿರ ಶತಕಳೆಯೆಂಬ ಮಂತ್ರಪುಷ್ಪವ ಚೆಲ್ಲಿ
ಮಹಾ ಬೆಳಕಿನ ಮಂಗಳಾರತಿಯ ಬೆಳಗುತಲ್ಲಿ
ಅಚಲ ಸಮಾಧಿಯೆ ಆದ ಯೋಗನಿದ್ರೆಯಲಿ
ಮಹಾ ಚಿದಾನಂದಾವಧೂತ ಮಲಗಿರು ಸುಖದಲ್ಲಿ ೯

## ೪೦೮

ಧೂಪಾರತಿಯ ಮಾಡುವ ಬನ್ನಿ ಸರ್ವ
ರೂಪ ರಹಿತ ತನ್ಮಾತ್ರನಿಗೆ
ಕೆಟ್ಟ ವಾಸನೆಗಳು ಎಷ್ಟಿಹವೆಲ್ಲ ಪ

ಅಷ್ಟನು ಕುಟ್ಟಿ ಪುಡಿಯನು ಮಾಡಿದ
ಶಿಷ್ಟ ದಶಾಂಗಮ ಘಮ ಘಮ ಬೀರಲು
ಸುಟ್ಟು ಎತ್ತುವ ಧೂಪಾರತಿಯ ೧

ವಾಸನತ್ರಯವೆಂಬ ಗುಗ್ಗುಳ ಸಾಂಬ್ರಾಣಿ
ದ್ವೇಷ ಭ್ರಾಂತಿಗಳ ಪರಿಪರಿಯಾದ
ವಾಸನೆ ಎತ್ತೆತ್ತ ಮಕಮಕ ಎಸೆಯಲು
ಸೂಸಿ ಎತ್ತುವ ಸುಧೂಪಾರತಿಯ ೨

ಶರೀರದೊಳಗೆ ಹೊರಗೆಲ್ಲ ಸರ್ವತನುವಿನಲೆಲ್ಲ
ಬರಿಯ ಸುವಾಸನೆ ತುಂಬಿ ತುಂಬಿ
ಗುರು ಚಿದಾನಂದ ತಾನಾದಾತ್ಮಗೆತ್ತುವೆ
ಪರಮಮಂಗಳ ಸುಧೂಪಾರತಿಯ ೩

## ೪೦೯

ನಿರ್ಮಲ ಹೃದಯ ಮಂಟಪದೊಳಗೆ ನಿಶ್ಚಲ ಮಣೆಯಿಟ್ಟು
ಧರ್ಮ ಪಟ್ಟಾವಳಿಯ ಹಸೆ ಹಾಸಿ
ಧರ್ಮ ಪಟ್ಟಾವಳಿಯ ಹಸೆ ಹಾಸಿ ಮುಕ್ತಿಯನು
ಕರ್ಮ ಹರೆಯರು ಕರೆದರು ೧

ಪರಮ ಪುರುಷ ಬಂದು ಪರಿಣಾಮದಿ ಕುಳಿತು ಇಹನು
ಪರಮ ಪಾವನೆ ಹಸೆಗೇಳು

ಪರಮ ಪಾವನೆ ಹಸೆಗೆ ಏಳೆಂದು ಮುಕ್ತಿಯನು
ಪರಮ ಶಾಂತಿಯರು ಕರೆದರು ೨

ನಿತ್ಯತೃಪ್ತನು ಬಂದು ನಿಜದಲ್ಲಿ ಕುಳಿತಿಹನು
ನಿತ್ಯ ಆನಂದೆ ಹಸೆಗೆ ಏಳು
ನಿತ್ಯ ಆನಂದೆ ಹಸೆಗೆ ಏಳೆಂದು ಮುಕ್ತಿಯನು
ನಿತ್ಯ ಸತ್ಯೆಯರು ಕರೆದರು ೩

ಮಂಗಳ ಮೂರುತಿ ಬಂದು ಮಂಗಳವಾಗಿ ಕುಳಿತಿಹನು
ಮಂಗಳ ಮುಖಿಯೇ ಹಸೆಗೇಳು
ಮಂಗಳ ಮುಖಿಯೇ ಹಸೆಗೇಳು ಎಂದು ಮುಕ್ತಿಯನು
ಮಂಗಳ ಮುಖಿಯರು ಕರೆದರು ೪

ರೂಪ ರಹಿತನು ಬಂದು ರೂಪವಾಗಿ ಕುಳಿತಹನು
ರೂಪ ಮಹಾ ರೂಪೇ ಹಸೆಗೇಳು
ರೂಪ ಮಹಾ ರೂಪೇ ಹಸೆಗೇಳು ಎಂದು ಮುಕ್ತಿಯನು
ರೂಪವತಿಯರು ಕರೆದರು ೫

ಅಚ್ಯುತನೆ ತಾ ಬಂದು ಅಚ್ಚಾರಿಯಲಿ ಕುಳಿತಿಹನು
ಅಚ್ಯುತ ರೂಪಳೆ ಹಸೆಗೇಳು
ಅಚ್ಯುತ ರೂಪಳೆ ಹಸೆಗೇಳೆಂದು ಮುಕ್ತಿಯನು
ನಿಶ್ಚಿತ ಮತಿಯರು ಕರೆದರು ೬

ಸಾಕ್ಷಿರೂಪನೆ ಬಂದು ಸಾಕ್ಷಾತ್ತು ಕುಳಿತಿಹನು
ಸಾಕ್ಷಿಭೂತಳೆ ನೀನು ಹಸೆಗೇಳು
ಸಾಕ್ಷಿಭೂತಳೆ ನೀನು ಹಸೆಗೇಳೆಂದು ಮುಕ್ತಿಯನು
ಸೂಕ್ಷ್ಮಮತಿಯರು ಕರೆದರು ೭

ವೇದಾತೀತನೆ ವೇದ್ಯವಾಗಿ ಕುಳಿತಿಹನು
ವೇದಮಾತೆಯೆ ನೀನು ಹಸೆಗೇಳು

ವೇದಮಾತೆಯೆ ನೀನು ಹಸೆಗೆ ಏಳೆಂದು ಮುಕ್ತಿಯನು
ವೇದಸ್ಮೃತಿಯರು ಕರೆದರು ೮

ಜ್ಯೋತಿ ಚಿದಾನಂದನೆ ಬಂದು ಜೋಕೆಯಲಿ ಕುಳಿತಿಹನು
ಜ್ಯೋತಿ ಪ್ರದೀಪೆಯೇ ಹಸೆಗೇಳು
ಜ್ಯೋತಿ ಪ್ರದೀಪೆಯೇ ಹಸೆಗೇಳು ಏಳೆಂದು ಮುಕ್ತಿಯನು
ಜ್ಯೋತಿರ್ಮತಿಯರು ಕರೆದರು ೯

## ೪೧೦

ಬೆಳಗಿ ಆರತಿಯನೀಗ ಭಾಗ್ಯದಂಬಗೆ ಮುಂದೆ
ಸುಳಿದು ಆರತಿಯನೆತ್ತಿ ಶೂರೆ ಅಂಬಗೆ ಪ

ಮುತ್ತಿನೋಲೆ ಮೂಗುತಿಯ ಧರಿಸಿದಂಬಗೆ
ಕತ್ತಿಯನ್ನು ಹಿಡಿದಿರುವ ಶೂರೆ ಅಂಬಗೆ ೧

ಪದಕ ಕುಂಡಲಧಾರಿ ಪೂರ್ಣೆ ಅಂಬಗೆ
ಬೆದರದಲೆ ಶತ್ರುಗಳನು ಕೊಂದ ಅಂಬಗೆ ೨

ಶರಣರ ದ್ವಾರ ಕಾಯುತಲಿಹ ವೀರೆ ಅಂಬಗೆ
ಶರಧಿ ಕರುಣೆ ಚಿದಾನಂದ ಬಗಳಾಮುಖಿ ಅಂಬಗೆ ೩

## ೪೧೧

ಬೆಳಗಿತು ಆರತಿ ಗುರುವಿಗೆ ತಾನೆ ತನ್ನಿಂದ
ತೊಳಗುತ ಬೆಳಗುತ ಥಳಥಳಿಸುತ ತಾ ನಿತ್ಯದಿಂದ ಪ

ಬ್ರಹ್ಮವಿಷ್ಣು ರುದ್ರೇಶ್ವರ ಶಿವರಾಸ್ಥಾನ ಸ್ಥಾನಗಳಲ್ಲಿ
ಬ್ರಹ್ಮ ಆದಿಶಿವ ಅಂತ್ಯದವರೆಗೆ ಚೇತನಗೂಡುತಲ್ಲಿ ೧

ಒಳಹೊರಗೆಲ್ಲವ ವ್ಯಾಪಿಸಿ ತುಂಬಿಯೆ ಪೂರ್ಣವು ತಾನಾಗಿರುತ
ತಿಳಿದೆ ನೋಡಲಿ ರವಿ ಕೋಟಿಯ ಪ್ರಭೆ ಪ್ರಭೆಯನು ಬೀರುತ ೨

ಅತ್ತ ಮಿಂಚುತ ಇತ್ತ ಮಿಂಚುತ ಎತ್ತೆತ್ತಲು ಝಳಕು
ಚಿತ್ತ ಜ್ಯೋತಿ ಚಿದಾನಂದ ಗುರುವಿನ ಚಿಜ್ಯೋತಿಯ ಬೆಳಗು ೩

## ೪೧೨

ಮಂಗಳಂ ಜಯ ಸದಾ ಶುಭ ಮಂಗಳಂ
ಮಂಗಳಂ ಆರೂಢ ಮಹಾತ್ಮಗೆ ಪ

ಕಲುಷ ನಿರ್ಧೂತಗೆ ಕರ್ಮ ವಿಧ್ವಂಸಗೆ
ಬಲು ಅವಿದ್ಯಾಭ್ರಾಂತಿ ವಿನಾಶಗೆ
ಲಲಿತ ನಿಜ ಮುಕ್ತಗೆ ಲಕ್ಷ್ಯ ಅಲಕ್ಷ್ಯಗೆ
ಥಳಥಳಿಪ ತೇಜೋಮಯಾತ್ಮನಿಗೆ ೧

ಮಾಯೆ ನಿರ್ಮೂಲಗೆ ಮಲತ್ರಯ ವರ್ಜ್ಯಗೆ
ಕಾಯ ಭ್ರಾಂತಿಯನು ತೊಲಗಿಪಗೆ
ಸಾಯಸವಳಿದಗೆ ಸಾಕ್ಷಿಯಾಗಿಹಗೆ
ಮಾಯಾ ರಹಿತಗೆ ಶಿವಶರಣಗೆ ೨

ಸಿಂಧು ಆನಂದಗೆ ಶಿವನಾದವನಿಗೆ
ಎಂದೆಂದಿಗು ಇಹ ಏಕನಿಗೆ
ಬಿಂದು ಕಳಾತೀತಗೆ ಬೋಧದಖಂಡಗೆ
ಸುಂದರ ಚಿದಾನಂದ ಸೂಕ್ಷ್ಮಾತ್ಮನಿಗೆ ೩

## ೪೧೩

ಮಂಗಳಂ ನಿತ್ಯ ಮಂಗಳಂ ಶುಭ
ಮಂಗಳಂ ಮಹಾ ಮಂಗಳಂ ಪ

ಭಾನುವಿಗೆ ಆತ್ಮ ಭಾನುವಿಗೆ
ಧೇನುಗೆ ನತ ಧೇನುಗೆ
ಮೌನಿಗೆ ಶಬ್ದ ಮೌನಿಗೆ
ದಾನಿಗೆ ಮುಕ್ತಿ ದಾನಿಗೆ ೧

ಪಾಲಗೆ ಜಗ ಪಾಲಗೆ
ಕಾಲಗೆ ಭವ ಕಾಲಗೆ
ಶೀಲಗೆ ಭಕ್ತ ಶೀಲಗೆ
ಮೂಲಗೆ ಸರ್ವ ಮೂಲಗೆ ೨

ಬಂಧಗೆ ಹರ ಬಂಧಗೆ
ನಂದಗೆ ಆನಂದಗೆ
ಸಿಂಧುಗೆ ಜ್ಞಾನ ಸಿಂಧುಗೆ
ಚೆಂದಗೆ ಚಿದಾನಂದಗೆ ೩

## ೪೧೪

ಮಂಗಳ ಮಂಗಳ ಜಯ ಮಂಗಳ ಶುಭ
ಮಂಗಳ ಗುರುಮೂರ್ತಿ ವಿರೂಪಾಕ್ಷನಿಗೆ ಪ

ಶುಭ್ರಾಂಶುಧರನಿಗೆ ಶುಭ್ರವಸ್ತ್ರವನಿಟ್ಟು
ಶುಭ್ರತಿದೇಹ ಶುಭ್ರದಾಭರಣಗೆ
ಶುಭ್ರಸ್ತ್ರೀಧರ ಯಶಶ್ಶುಭ್ರನಿಗೆ ೧

ದರಹಾಸ ಮುಖನಿಗೆ ನಗಾಲಯನಾಗಿರ್ದ
ಧರಶಿಖಿ ಶಿವಪಾತ್ರ ಭರಣಿಪತಿಗೆ
ಧರಮುನಿ ವರದಗೆ ಧರರೂಪ ಪಾಲಗೆ
ಧರಧನುವನು ತಾಳ್ದ ಧರವಾಸಗೆ ೨

ಪುರಮಾರಹರನಿಗೆ ಪುರಗಿರಿ ಗೇಹನಿಗೆ
ಶರಣಜನ ಬಂಧು ಚರಣಾಂಗಗೆ
ಗುರು ಚಿದಾನಂದಗೆ ಗಣಪತಿ ಸಾಂದ್ರಗೆ
ದುರಿತ ಭವ ಭವ ದುರಿತನಿಗೆ ೩

## ೪೧೫

ಮಂಗಳ ಮಂಗಳ ಜಯ ಮಂಗಳ ಬ್ರಹ್ಮಾಸ್ತ್ರನಿಪಳಿಗೆ ಪ

ಕಂಬುಗೊರಳಳಿಗೆ ಮಂಗಳ ಚಳತುಂಬನಿಟ್ಟಾಕೆಗೆ ಮಂಗಳ
ಕುಂಭ ಕುಚಗಳಿಗೆ ಮಂಗಳ ಪೀತಾಂಭರಧರಳಿಗೆ ಮಂಗಳ ೧

ಮುತ್ತಿನವಾಲೆಗೆ ಮಂಗಳ ರತ್ನದ ನತ್ತಿಟ್ಟವಳಿಗೆ ಮಂಗಳ
ಮುತ್ತ ಕಟ್ಟಿಹಳಿಗೆ ಮಂಗಳ ಕಂಕಣೊತ್ತಿ ಇಟ್ಟಾಕೆಗೆ ಮಂಗಳ ೨

ಮುರುಡಿ ಇಟ್ಟವಳಿಗೆ ಮಂಗಳ ವಜ್ರದ ಹರಡಿ ಕಟ್ಟಿಹಳಿಗೆ ಮಂಗಳ
ಜರಿವ ವಡ್ಯಾಣವಧರಿಸಿದವಳಿಗೆ ಹೇಮದಸರಿಗೆ ಇಟ್ಟವಳಿಗೆ ಮಂಗಳ ೩

ಪಚ್ಚೆ ಮುಕುಟಗಳಿಗೆ ಮಂಗಳ ಮೆಚ್ಚಿ ಒಲಿದವಳಿಗೆ ಮಂಗಳ
ಬಿಚ್ಚಿಹ ಖಡ್ಗಿಗೆ ಮಂಗಳ ಅವುಡುಗಚ್ಚಿಕೊಂಡಿಹಳಿಗೆ ಮಂಗಳ ೪

ಸಾನಂದಳಿಗೆ ಮಂಗಳ ಚಿದಾನಂದ ರೂಪಿಗೆ ಮಂಗಳ
ತಾನಾದ ಬಗಳೆಗೆ ಮಂಗಳ ಭಕ್ತರ ಮಾನ ಕಾಯ್ದುವಳಿಗೆ ಮಂಗಳ ೫

## ೪೧೬

ಮಂಗಳ ಸದ್ಗುರುವರಗೆ ಮಂಗಳ ಸದ್ಗುರುವರೆಗೆ
ಮಂಗಳ ದುರ್ಗುಣ ಹರಗೆ ಮಂಗಳ ಬಗಳಾಂಬ ಚಿದಾನಂದ ದೊರೆಗೆ ಪ

ಪೀತದ ಪೀಠದ ಮೇಲೆ ಪೀತಾಂಬರಿಯು ಕುಳ್ಳಿರಲು
ಪೀತದಾರತಿಯನ್ನು ಕೈಯಲಿ ಪಿಡಿದು
ಪೀತದಾಭರಣೆ ಪೀತದಾವರಣೆಗೆ
ಪೀತದಾರತಿಯ ಬೆಳಗಿರೆ ೧

ಮುತ್ತಿನ ಪೀಠದ ಮೇಲೆ ಮುಕ್ತಾಂಗಿ ಕುಳಿತಿಹಳು
ಮುತ್ತಿನಾರತಿಯನ್ನು ಕೈಯಲ್ಲಿ ಪಿಡಿದು
ಮುತ್ತಿನಾಭರಣೆಗೆ ಚಿತ್ತ ಚಿದ್ರೂಪಿಣಿಗೆ
ಮುತ್ತಿನಾರತಿಯ ಬೆಳಗಿರೆ ೨

ಪದ್ಮಾಸನದ ಪೀಠದ ಮೇಲೆ ಪದ್ಮಾಸನೆ ಕುಳಿತಿಹಳು
ಪದ್ಮದಾರತಿಯನ್ನು ಕೈಯಲ್ಲಿ ಪಿಡಿದು
ಪದ್ಮಶ್ರೀ ಚಿದಾನಂದ ಸದ್ಗುರುವಿಗೆ
ಪದ್ಮದಾರತಿಯ ಬೆಳಗಿರೇ ೩

## ೪೧೭

ಮಂಗಳವು ಬಗಳೆ ನಾಮ ಪರಮ ಮಂಗಳ
ಮಂಗಳವು ಬಗಳ ಧ್ಯಾನ ನಿತ್ಯ ಮಂಗಳ ಪ

ಉಟ್ಟ ಪೀತಾಂಬರದುಡಿಗೆ ಕಾಶಿ ಮಂಗಳ
ತೊಟ್ಟ ಹೇಮ ಕಂಚುಕಿಯ ತೊಡವು ಮಂಗಳ
ದಟ್ಟ ದಟ್ಟವಿದ ಪಟ್ಟೆ ಮುತ್ತು ಮಂಗಳ
ಇಟ್ಟ ಮೂಗು ರತ್ನ ನತ್ತು ನಿತ್ಯ ಮಂಗಳ ೧

ಕಣ್ಣ ಚಂಚಲ ಕಡೆಯ ಸರಗು ಮಂಗಳ
ನುಣ್ಣನೆಯ ಗಲ್ಲದುಬ್ಬು ನುಡಿಯು ಮಂಗಳ
ಎಣ್ಣೆ ನೂಲು ಉಡುವಣಿಯು ವಜ್ರ ಮಂಗಳ
ಕನ್ನಡಿಯು ಕಾಲುಗೆಜ್ಜೆ ಕಡಗ ಮಂಗಳ ೨

ವಿಧ ವಿಧದ ಮಾಣಿಕ್ಯ ಮುಕುಟ ಮಂಗಳ
ಅದ್ಭುತದ ಹಿರಿಯ ಖಡ್ಗ ತೇಜ ಮಂಗಳ
ಪದುಮಭವನ ಜಿಹ್ವೆ ಹಿಡಿದ ಕರವು ಮಂಗಳ
ಚಿದಾನಂದ ಬಗಳೆ ಸ್ಮರಣೆ ಸರ್ವ ಮಂಗಳ ೩

## ೪೧೮

ಮಂಗಳಾರತಿ ಎತ್ತಿರೆಲ್ಲ ಮಹಾತ್ಮರೆಲ್ಲ ಮಂಗಳಾರತಿ ಎತ್ತಿರೆಲ್ಲ
ಮಂಗಳರೂಪಗೆ ಮಂಗಳ ಮಹಿಮಗೆ ಮಂಗಳಕರಗೆ ಮಂಗಳಪ್ರದಗೆ ಪ

ಹೃದಯ ಪಂಚಾರತಿ ಮಾಡಿ ತತ್ವಾಕ್ಷತೆ ನೀಡಿ
ಒದವಿದ ಬುದ್ಧಿ ಬತ್ತಿಯಮಾಡಿ ನಿರ್ಮಳ ಘೃತ ನೀಡಿ
ಮುದದಿಂ ಚಿಜ್ಜ್ಯೋತಿಯನೆ ಮುಟ್ಟಿಸಿ
ಸದಮಲ ಸರ್ವ ಬ್ರಹ್ಮವೆ ಎಂದು ೧

ನೆಲೆಗಾಣದಂತೆ ತೇಜ ತುಂಬೆ
ಹೊಳೆಯಲು ಬಿಂದು ಬೊಂಬೆ
ತಿಳಿದು ನೋಡಲಿ ಕಣ್ಣು ತುಂಬಿ ಉಳಿವು ಇನ್ನು ಎಂಬೆ
ಬಲುಪ್ರಭೆ ತಿಳಿಯೆ ಥಳಥಳ ಹೊಳೆಯೆ ತೊಳಗಿ ತೊಳಗಿ ಬೆಳಗಿ ಬೆಳಗಿ ೨

ನಾನಾ ವರ್ಣವೆ ಪೊಳೆಯಲು ಅತ್ತಲಿತ್ತಲು
ನಾನಾ ವರ್ಣವ ತಾಳುತ್ತ ಎತ್ತಾಲೆತ್ತಲು
ತಾನು ಚಿದಾನಂದ ಗುರು ಬೇರಾಗದೆ
ತಾನೆ ತಾನೆಯಾಗಿ ೩

## ೪೧೯

ಮಂಗಳಾರತಿ ಎತ್ತಿರೆಲ್ಲ ಮಹಾತ್ಮರೆಲ್ಲ
ಮಂಗಳಾರತಿ ಎತ್ತಿರೆಲ್ಲ
ಸಂಗಾತೀತ ಚಿದಾನಂದಾವಧೂತಾಂಗ ಶ್ರೀ
ಬಗಳಾಮುಖಿ ದೇವಿಗೆ ಪ

ಕರದೊಳು ಚೂಡೆ ಕಂಕಣವಿಟ್ಟು
ಕೊರಳೊಳು ಸರಿಗೆಯ ಧರಿಸಿ
ಶಿರದಿ ರತ್ನದ ಕಿರೀಟವಿಟ್ಟು ಸರ್ವಾಭರಣವ
ಧರಿಸಿ ದುರುಳರ ದುಷ್ಟರ ಛೇದಿಸಿ ಭ–
ಕ್ತರ ಪಾಲಿಪ ಬಗಳಾಮುಖಿಗೆ ೧

ನಿತ್ಯ ನಿರ್ಗುಣ ನಿರಾಮಯಗೆ ನಿಂದಕವಿದಾರಣೆಗೆ
ಭಕ್ತ ವತ್ಸಲೆ ಭುವನೇಶ್ವರಿ ಮಾತೆಗೆ
ಭಕ್ತಾಧಾರೆಗೆ ಪ್ರತ್ಯಗಾತ್ಮೆಗೆ ಪರಬ್ರಹ್ಮ ರೂಪಿಣಿ
ಭಕ್ತ ಪ್ರಾಣೆಗೆ ಬಗಳಾಮುಖಿಗೆ ೨

ಅದ್ವಯ ಆಗಮಗೋಚರಗೆ ಅಚಲಾನಂದಳಿಗೆ ಶುದ್ಧ
ಸಂವಿಜ್ಯೋತಿರ್ಮಯಳಿಗೆ
ಸರ್ವಸಾಕ್ಷಿಗೆ ಸದ್ಗುರು ಚಿದಾನಂದಾವಧೂತಗೆ ಸಿದ್ಧ
ಪರ್ವತವಾಸಿ ಬಗಳಾಮುಖಿಗೆ ೩

## ೪೨೦

ಮಂಗಳಾರತಿಯ ತಂದೆತ್ತಿರೆ
ಶುಭಮಂಗಳ ಜಗದಾದಿದೇವಿಗೆ ಪ

ಮಧುಕೈಟಭಾಸುರ ಮರ್ದನ ದೇವಿಗೆ
ಮದನ ಕೋಟಿ ರೂಪ ಮಹಾದೇವಿಗೆ
ಸದಮಲ ಬ್ರಹ್ಮರ ಹೃದಯದ ಆತ್ಮಗೆ
ಮದನಾರಿ ಭೂತೆಗೆ ಆರತಿ ಎತ್ತಿರೆ ೧

ಭಾನು ಸಾಸಿರ ಕೋಟಿ ತೇಜ ಮಹಾತ್ಮಳಿಗೆ
ದಾನವಾಂತಕಳಾದ ದಯಾಶೀಲಗೆ
ಮಾನನಿಧಿ ಭಕ್ತರನು ಮರೆಯದೇ ರಕ್ಷಿಪ
ಬಾಣಾರಿ ಜನನಿಗೆ ಆರತಿಯನೆತ್ತಿರೆ ೨

ರಕ್ತಬೀಜಾರಿಗೆ ರಾಕ್ಷಸಧ್ವಂಸಿಗೆ
ಭಕ್ತರ ಸಲಹುವ ಬಗಳಾಂಬೆಗೆ
ಮುಕ್ತಿ ಸದ್ಗುರು ಚಿದಾನಂದವಧೂತಗೆ
ಮುತ್ತಿನಾರತಿಯನೆತ್ತಿರೆ ೩

## ೪೨೧

ಮಾಡುವ ಬನ್ನಿ ನಾವು ನೀವು ಎಲ್ಲರು ಏಕಾರತಿಯ
ಗೂಢ ಚಿದಾನಂದನೊಳು ಕೂಡಿಕೊಂಬರ್ಥಿಯ ಪ

ನೀರು ಲವಣ ಕೂಡಿ ಒಂದೇ ನೀರು ನಿಜವೆ ಆದಂತೆ
ಕಾರಣಾತ್ಮಕನೆಲ್ಲ ಕರಗಿಹೋಗುವ ಏಕಾರತಿ ೧

ಉರಿಯುವ ಕರ್ಪೂರವ ತಗುಲಿ ಉರಿಯು ತಾನಾಗಿ ಬೆಳಗಿದಂತೆ
ನರನು ತಾನೇ ಸಾಕ್ಷಾತ್ ಹರನಾದುದೇ ಏಕಾರತಿ ೨

ಕೀಟಭೃಂಗ ಧ್ಯಾನದಿಂದ ಕೀಟ ಭೃಂಗವಾದ ತೆರದಿ
ಪಾಡಿ ಚಿದಾನಂದ ತಾನೇ ತಾನಾದುದೇ ಏಕಾರತಿ ೩

## ೪೨೨

ಲಾಲಿ ಪಂಪಾಂಬಿಕೆ ಲಾಲಿ ಭ್ರಮರಾಂಬಿಕೆ
ಲಾಲಿ ಬಗಳಾಂಬಿಕೆ ಲಾಲಿ ಲಾಲಿ
ಎಂದು ಪಾಡಿರಿ ಸಾಧು ಸಜ್ಜನರೆಲ್ಲ
ದೇವಿ ತಾನೇ ಎಂದು ಲಾಲಿ ಪ

ಅದ್ವಯಾಗಮ ದ್ಯುತಿಗೋಚರ ಅನಾದಿ
ಅಚಲಾನಂದವೇ ಲಾಲಿ
ಶುದ್ಧ ಸಮ್ಯಕ್ ಜ್ಯೋತಿರ್ಮಯ ಸ್ವರೂಪ
ಸುಚರಿತ್ರ ನಿಶ್ಚಲ ಲಾಲಿ
ಚಿದ್ವಯಲಿನೊಳು ಹೃದಯ ತೊಟ್ಟಿಲೊಳು
ಭಾವ ಹಾಸಿಗೆಯಲ್ಲಿ ಪವಡಿಸಿಹೆ ಲಾಲಿ
ಸಿದ್ಧರಿ ಮಲಗಿನ್ನು ಜೋಗುಳ ಪಾಡುವೆ
ಶ್ರೀ ಮಹಾಲಕ್ಷ್ಮಿಯೇ ಲಾಲಿ ೧

ನಿತ್ಯನಿರ್ಗುಣ ನಿಷ್ಕಲಂಕ ನಿರ್ವಿಕಲ್ಪ
ನಿಜನಿತ್ಯ ನಿರ್ಮಳೆ ಲಾಲಿ
ಸತ್ಯ ವಸ್ತುವೆ ಸನಾಥ ವಿಶೋತ್ಪತ್ತಿ
ಸರ್ವಪರಬ್ರಹ್ಮ ರೂಪ ಲಾಲಿ
ಪ್ರತ್ಯಗಾತ್ಮಳೆ ಪೂರ್ಣಪರಮ ಪರತರ ವಂದ್ಯೆ
ಪಾವನ ಚಾರಿತ್ರೆ ಲಾಲಿ
ಕರ್ತೃನೀ ಅನಂತ ಬ್ರಹ್ಮಾಂಡಾದಿಗಳಿಗೆ
ಕರುಣಾ ಸಮುದ್ರವೇ ಲಾಲಿ ೨

ಪೃಥ್ವಿ ಅಪ್ಪು ತೇಜ ವಾಯುರಾಕಾಶಕ್ಕೆ
ಪೃಥಕಾಗಿ ಹೊಳೆದಿಹಳೆ ಲಾಲಿ
ಸತ್ವರಜತಮಸು ಮೂರರೊಳಗೆ ನೀ
ಸಾಕ್ಷಿರೂಪದಲಿರುವೆ ಲಾಲಿ

ವೇದ ವೇದಾಂಗಗಳ ವಾಗ್ರೂಪಿನಲ್ಲಿ
ನೆಲೆಸಿ ರಂಜಿಪಳೆ ಲಾಲಿ
ತತ್ವವಿಂಶತಿ ಪಂಚಶರೀರಗಳೊಳಗೆ ನೀ
ತೊಳ ತೊಳಗಿ ಬೆಳಗುತಿಹೆ ಲಾಲಿ ೩

ಜಾಗೃತ ಸ್ವಪ್ನ ಸುಷುಪ್ತಿ ಮೂರವಸ್ಥೆ
ಜನಿತದಿ ಕಾಣಿಸಿ ಲಾಲಿ
ಪ್ರಾಜ್ಞ ತೈಜಸ ವಿಶ್ವ ಮೂರು ಮೂರುತಿಯಾಗಿ
ಪರಿಣಮಿಸಿ ತೋರುವೆ ಲಾಲಿ
ಶೀಘ್ರದಲಿ ಸದ್ಭಾವ ಸಚ್ಛಿಷ್ಯರಾದರ್ಗೆ
ಸ್ವಾನಂದ ಸುಖವೀವೆ ಲಾಲಿ
ರೌದ್ರದಲಿ ಭುಗುಭುಗು ಭುಗಿಲೆಂಬ ಕಳೆಗಳು
ಅತ್ಯುಗ್ರದಿ ಝುಂಗಿಸುವೆ ಲಾಲಿ ೪

ವಿದ್ಯಾವಿದ್ಯವ ತೋರಿ ದೃಶ್ಯಾದೃಶ್ಯಕೆ ಮೀರಿ
ಅದೃಶ್ಯರೂಪ ಶ್ರೀ ಲಕ್ಷ್ಮೀಲಾಲಿ
ಸಿದ್ಧಿಗಳೆಂಬುವ ಭೇದಿಪ ಹರಿಹರ
ಸರಸಿಜೋದ್ಭವ ಮಾತೆ ಲಾಲಿ
ಸಿದ್ಧ ಪರ್ವತವಾಸ ಸಾಹಸ್ರದಳ ಮಧ್ಯೆ
ಶ್ರೀ ಬಗಳಾಮುಖಿ ಲಾಲಿ
ಸದ್ಗುರು ಚಿದಾನಂದ ಅವಧೂತ
ಬಗಳಾಂಬ ಸಗುಣ ನಿರ್ಗುಣಮೂರ್ತಿ ಲಾಲಿ ೫

## ೪೨೩

ಶೋಭನವೇ ಶೋಭನವೇ
ಶೋಭನ ಗುರುವಿಗೆ ಬಗಳಾಂಬಳಿಗೆ ಪ

ಉರಿಬಿಟ್ಟಗ್ನಿಯು ಇಲ್ಲದಂತೆ
ಉರಿಯು ಅಗ್ನಿಯು ಒಂದೆಂಬಂತೆ
ಗುರುವು ಬಗಳಾಂಬನು ತಾನು ಕೂಡಿಯೆ
ತರಣಿ ಶತಕೋಟಿಯಲಿ ಹೊಳೆಯುತಿದೆ ೧

ಬಂಗಾರದಿ ಮಾಡಿಹ ಒಡವೆಗಳಂತೆ
ಬಂಗಾರ ಒಡವೆ ಒಂದೆ ಎಂಬಂತೆ
ಮಂಗಳ ಗುರು ಬಗಳಾಂಬನು ಕೂಡಿಯೆ
ತಿಂಗಳ ಶತಕೋಟಿಯಲಿ ಹೊಳೆಯುತಿದೆ ೨

ತೆರೆ ಬಿಟ್ಟ ಉದಕವು ಇಲ್ಲದಂತೆ
ತೆರೆ ಉದಕವು ಒಂದೆಂಬಂತೆ
ಗುರು ಚಿದಾನಂದ ಶ್ರೀ ಬಗಳೆ ಕೂಡಿಯೆ
ಶರಣರ ಹೃದಯದಿ ಥಳಥಳಿಸುತಿರೆ ೩

## ೪೨೪

ಶೋಭನವೇ ಶೋಭನವೇ
ಶೋಭನ ಚಿದಾನಂದ ಅವಧೂತಗೆ ಪ

ರೇಚಕ ಪೂರಕ ಕುಂಭಕವ
ರೇಚಿಪ ಪೂರಿಪ ಕ್ರಮದನುವಾ
ಸೂಚನೆಯರಿದಾ ಸುಷುಮ್ನದನುಭವ
ರೋಚಕವಾಗಿಹ ಕಳೆಸವಿವ ೧

ಹೃದಯಾಕಾಶದಿ ಲಕ್ಷ್ಯವಿಟ್ಟು
ಮುದದಿ ತೋರಲು ಪ್ರಭೆಮಿಂಚಿಟ್ಟು
ಬುದು ಬುದುಕಳೆ ಪ್ರಕಾಶಗಳೆದುರಿಟ್ಟು
ಒದವೆ ನಾದಧ್ವನಿ ಇಂಪಿಟ್ಟು ೨

ನಿರುಪಮ ನಿರ್ಗುಣ ನಿರ್ಭೀತ
ನಿರವಯ ನಿಶ್ಚಲ ನಿಜದಾತಾ
ವರ ಚಿದಾನಂದ ಸದ್ಗುರು ಅವಧೂತ
ಶರಣು ಜನ ಕಾವ ಪ್ರಖ್ಯಾತ ೩

## ೪೨೫

ಶೋಭಾನವೇ ಬಗಳಾಮುಖಿ ದೇವಿಗೆ
ಶೋಭಾನವೇ ಸದ್ಗುರುನಾಥಗೆ ಶೋಭಾನವೆನ್ನಿ ಶುಭವೆನ್ನಿ ಪ

ಸುತ್ತಿದ ಸರಿಗೆಯು ಒತ್ತಿದ ಚಿಂತಾ
ಕೆತ್ತಿದ ರಾಗಟೆ ಹತ್ತಿದ ಚವುರಿ
ಮತ್ತೆ ತುರುಬಿಗೆ ಪಂಚಕ ಮುಡಿದಿಹ
ಮುಡಿದೀ ಬಗಳಾಮುಖಿಗೆ ರತ್ನದಾರತಿಯ ಬೆಳಗಿರೇ ೧

ಶ್ರವಣ ಮನನ ನಿಧಿಧ್ಯಾಸನ ಸಾಧಿಸಿ
ಭವಭವಗಳ ತರಿದೆಲ್ಲವ ಭೇದಿಸಿ
ಶಿವಸಾಕ್ಷಾತ್ತಾಗಿ ಬೆಳಗುತ ಬೆಳಗುತ ಸದ್ಗುರುನಾಥಗೆ
ಪವಳದಾರತಿಯೆ ಬೆಳಗಿರೆ ೨

ವಾಲೆ ಬಳೆಗಳು ತಾಳಿಯು ಮೂಗುತಿ
ಸಾಲಿನ ಅಡ್ಡಿಕೆ ತಾಯಿತ ಸರಪಳಿ
ಮೇಲು ಪದಕವೆ ಮೆರೆದಿಹ ಮೆರೆದಿಹ ಬಗಳಾಮುಖಿಗೆ
ಲೋಲದಾರತಿ ಬೆಳಗಿರೆ ೩

ಬಾಲೋನ್ಮತ್ತ ಪಿಶಾಚಾಂಧರ ಬದಿರ ಲಕ್ಷಣ
ಮೂಕಾವಸ್ಥೆಯ ತಾ ತಾಳಿ ಅರವಸ್ಥೆಯ ಧರಿಸಿ
ಧರಿಸಿಹ ಸದ್ಗುರುನಾಥಗೆ
ತೈಲದಾರತಿಯ ಬೆಳಗಿರೆ ೪

ಹೊಸ ಮಿಂಟಿಕೆ ಪಿಲ್ಲೆ ಸವಂದಿಗೆ
ಜಸವುಂಗರ ಮೀನೆಸೆದಿಹ ಮುದ್ರಿಕೆ
ಮಿಸುನಿಯೊಡ್ಯಾಣವು ತೊಳಗುವ ತೊಳಗುವ ಬಗಳಾಮುಖಿಗೆ
ಶೀಲದಾರತಿಯ ಬೆಳಗಿರೆ ೫

ಧಗಧಗಿಸುವ ಪೀತಾಂಬರದುಡುಗೆಯ
ಝುಗ ಝುಗಿಸುವ ಮಹಾಸ್ವರ್ಣದ ಕಂಚುಕಿ
ನಿಗಮವೆಡಬಲದಲ್ಲಿ ಹೊಗಳುವ ಹೊಗಳುವ ಬಗಳಾಮುಖಿಗೆ
ಸುಗಮದಾರತಿಯ ಬೆಳಗಿರೆ ೬

ಝುಗ ಝುಗಿಸುವ ಪ್ರಭೆ ದೃಷ್ಟಿಸಿ ಶ್ರವಣದಿ
ಮೊಗೆ ಮೊಗೆದು ದಶನಾದವ ಸೇವಿಸಿ
ಬಗೆ ಬಗೆ ಆನಂದದಿ ಸುಖಿಸುವ ಸುಖಿಸುವ ಸದ್ಗುರುನಾಥಗೆ
ಸುಗಮದಾರತಿಯ ಬೆಳಗಿರೆ ೭

ಸಪ್ತಾವರಣ ಭಸ್ಮವ ಮಾಡಿ
ಸಪ್ತಭೂಮಿಕೆ ಪಾವಟಿಗೆಯನೇರಿ
ಗುಪ್ತ ಪ್ರಭಾತೀತವಾಗಿ ತೊಳಗುವ ತೊಳಗುವ ಸದ್ಗುರುನಾಥಗೆ
ತೃಪ್ತದಾರತಿಯ ಬೆಳಗಿರೆ ೮

ಕಂಕಣ ಹರಡಿಯ ಹಸ್ತದ ಕೈಯ್ಯಲಿ
ಅಂಕುರ ಪಟ್ಟಿಯು ಪರಿಘವು ಶರಧನು
ಅಂಕೆಯಿಲ್ಲದಾಯುಧ ಪಿಡಿದಿಹ ಪಿಡಿದಿಹ ಬಗಳಾಮುಖಿಗೆ
ಪಂಕಜದಾರತಿಯ ಬೆಳಗಿರೆ ೯

ಸಾರಿಯೆ ತ್ವಂ ಪದ ತತ್ವಮಸಿ ಪದ
ಮೀರಿಯೆ ಸಗುಣ ನಿರ್ಗುಣ ರೂಪವ ತೋರಿಚರಿಸುವ
ಚರಿಸುವ ಸದ್ಗುರುನಾಥಗೆ ಸಾರದಾರತಿಯ ಬೆಳಗಿರೆ ೧೦

ಪಿಡಿದೆಡಗೈಯಲಿ ವೈರಿಯ ಜಿಹ್ವೆಯ ಕೆಡುಹುತ ತುಳಿದೆ
ಹೊಡೆಯುತ ಖಡುಗದಿ ಕೊಡುತ ಬೇಡಿದವರಿಗೆ ಅಭಯವ
ಅಭಯವೀವ ಬಗಳಾಮುಖಿಗೆ ಸಡಗರದಾರತಿಯ ಬೆಳಗಿರೆ ೧೧

ಸಾಧನ ನಾಲ್ಕನು ಸಾಧಿಪ ಸಚ್ಛಿಷ್ಯರಿಗೆ
ಅಭಯವ ನೀಡುತ ಭಕ್ತರಿಗಾಧಾರವಾಗಿ ಕರುಣಿಪ
ಕರುಣಿಪ ಸದ್ಗುರುನಾಥಗೆ ಸಾಧುಗಳಾರತಿ ಬೆಳಗಿರೆ ೧೨

ಚಿದಾನಂದ ಪರಬ್ರಹ್ಮವು ತಾನೇ
ಮದಮುಖಿನು ಸಂಹರಿಸಲೋಸುಗ
ಸದನ ಬ್ರಹ್ಮ ರಂಧ್ರದಿ ಸ್ಥಾನವಾಯ್ತು
ಸ್ಥಾನವಾಯ್ತು ಬಗಳಾಮುಖಿಗೆ ಸುಧೆಯ ಆರತಿ ಬೆಳಗಿರೆ ೧೩

ಸಿದ್ದ ಪರ್ವತವಾಗಿಹ ಪ್ರ–
ಸಿದ್ಧ ಬಗಳಾಮುಖಿಯೆಂದೆಣಿಸುವ
ಸಿದ್ಧ ಚಿದಾನಂದಾವಧೂತ ಅವಧೂತ ಸದ್ಗುರುನಾಥಗೆ
ಸಿದ್ಧದಾರತಿಯ ಬೆಳಗಿರೆ ೧೪

## ೪೨೬

ಶ್ರೀ ಮಹಾಲಕ್ಷ್ಮಿಗೆ ಮಂಗಳ
ಸೋಮಶೇಖರಿ ಬಗಳೆಗೆ ಮಂಗಳ ಪ

ಭದ್ರಕಾಳಿ ಭವಾನಿ ಶಕ್ತಿಗೆ ಮಂಗಳ ಅತಿ
ಶುಭ್ರ ಕಾಂತಿ ಭುವನೇಶ್ವರಿ ಮಂಗಳ
ಕ್ಷುದ್ರ ಸಂಹಾರಿಣಿ ಶಂಕರಿ ಮಂಗಳ ಅತಿ
ಭದ್ರ ಸುಂದರಿ ಷೋಡಸಿ ಮಂಗಳ ೧

ಶುಂಭ ಮರ್ದಿನಿ ಭೈರವಿ ಮಂಗಳ ವಿಶ್ವ ಕು–
ಟುಂಬಿನಿ ಸುರನಂತೆ ಮಂಗಳ
ಕುಂಭಕುಚೇ ಪೀತಾಂಬರಿ ಮಂಗಳ ಶ್ರೀ ವಿ–
ಜೃಂಭಿಣಿ ಶಂಕರಿ ಮಂಗಳ ೨

ಆನಂದ ರೂಪಿಣಿ ರೌದ್ರಿಣಿ ಮಂಗಳ ಪೂರ್ಣ
ಜ್ಞಾನ ರೂಪಿಣಿ ಸುಧಾರಸೆ ಮಂಗಳ
ಮೌನಿಯೋಗಿನಿ ಕರಾರ್ಚಿತೆ ಮಂಗಳ ಬಗಳ
ಜ್ಞಾನಿ ಚಿದಾನಂದಾವಧೂತೇ ಮಂಗಳ ೩

## ೪೨೭

ಸದ್ಗುರುನಾಥಗೆ ಮಂಗಳ ಭಾಸ ಶತ
ಸೂರ್ಯ ತೇಜಗೆ ಮಂಗಳ
ನಿರ್ಗುಣ ನಿರ್ವಿಕಾರಗೆ ಮಂಗಳ ಸ್ವಪ್ನ
ಜಾಗ್ರತಿ ಸುಷುಪ್ತಿ ನಿಗ್ರಹಗೆ ಮಂಗಳ
ಭರ್ಗೋ ದೇವಗೆ ಭಯಂಕರನಿಗೆ ಮಂಗಳ ಅತಿ
ಶೀಘ್ರ ಭಕ್ತರ ಪಾಲಿಪಗೆ ಮಂಗಳ ೧

ನಿತ್ಯ ನಿರ್ಮಲ ನಿಜಬೋಧಗೆ ಮಂಗಳ ಘನ
ವಸ್ತು ಸಾಕ್ಷಾತ್ಕಾರನಿಗೆ ಮಂಗಳ
ಸತ್ಯ ಸನಾಥ ಸಾಕ್ಷಿಗೆ ಮಂಗಳ
ಶುದ್ಧ ಚಿತ್ರಭಾಗಮ್ಯಗೆ ಮಂಗಳ ೨

ಪರಮ ಚೈತನ್ಯ ಪರಮೇಶಗೆ ಮಂಗಳ ಸತ್ಯ
ಶರಣ ರಕ್ಷಕ ಯೋಗಿಗೆ ಮಂಗಳ
ಪರಮ ಆರೂಢ ಪರಮೇಶಗೆ ಮಂಗಳ ನಿಜ
ಗುರು ಚಿದಾನಂದಾವಧೂತಗೆ ಮಂಗಳ ೩

# ೪೨೮

ಸುವ್ವಿ ಎಂದು ಪಾಡಿರೆ ಸುಜ್ಞಾನ ದೇವರ
ಭವಹರಿವುದು ಭಯವಿಲ್ಲ ಸುವ್ವಿ
ಪಂಚ ಶಕ್ತಿಗಳೆಂಬ ಪರಮ ಮುತ್ತೈದೆಯರು
ವಂಚನೆಗೆ ದೂರಾಗಿ ವರ್ತಿಸುತ ಸುವ್ವಿ
ವಂಚನೆಗೆ ದೂರಾಗಿ ವರ್ತಿಪ ಐದೆಯರು
ಮುಂಚೆ ಬೇಗದಲಿ ಮಡಿಯಾಗಿ ಸುವ್ವಿ ೧

ಕ್ಷೇತ್ರದ ಒರಳಲ್ಲಿ ಕ್ಷರನೆಂಬ ಅಕ್ಕಿಯು
ಕ್ಷೇತ್ರಜ್ಞನೆಂಬ ಒನಕೆಯ ಸುವ್ವಿ
ಕ್ಷೇತ್ರಜ್ಞನೆಂಬ ಒನಕೆಯ ಪಿಡಿದು
ಪಾತ್ರನಾಗೆಂದು ಹರಸುತ ಸುವ್ವಿ ೨

ಆರು ಮೂರಾದವನ ಐದು ಎಂಟಾದವನ
ಬೇರೇಳು ನಾಲ್ಕೆರಡು ಬಗೆಯಾದವನ ಸುವ್ವಿ
ಬೇರೇಳು ನಾಲ್ಕೆರಡು ಬಗೆಯಾದನೆಲ್ಲನು
ವಾರಣದಿ ನೀವೆಲ್ಲ ತಳಿಸಿರೆ ಸುವ್ವಿ ೩

ವಾಸನೆಯ ಮೆರುಗನು ಒಳಿತಾಗಿ ತಳಿಸುತ್ತ
ಸೂಸದಂತೆಲ್ಲವ ಮಗುಚುತ್ತ ಸುವ್ವಿ
ಸೂಸದಂತೆಲ್ಲವ ಮಗಚುತ್ತ ಅಕ್ಕಿಯ
ರಾಶಿಯನು ಮಾಡಿ ಬಿಡಿರವ್ವ ಸುವ್ವಿ ೪

ಪರವಸ್ತುವಾದವನ ಪರಬ್ರಹ್ಮವಾದವನ
ಪರಮಾತ್ಮನೆಂಬ ಪುರುಷನ ಸುವ್ವಿ
ಪರಮಾತ್ಮನೆಂಬ ಪುರುಷ ಚಿದಾನಂದನ
ಪರಮ ನೈವೇದ್ಯದ ಪಾಕಕ್ಕೆ ಸುವ್ವಿ ೫

# ಕೆಳದಿ ವೆಂಕಣ್ಣ ಕವಿಯ
# ಕೀರ್ತನೆಗಳು

೪೨೯–೪೪೭

## ದೇವ ದೇವತೆಗಳ ಸ್ತುತಿ

### ೪೨೯

ಆವ ಕಾರ್ಯಕೂ ಮುಂಚಿನ ಪೂಜೆ ನಿಮ್ಮ
ತಾಯಿ ತಂದೆಯು ಕಲಿಸಿದ ಪೂಜೆ ಪ

ಜಾತಕರ್ಮಕೆ ನಾಮಕರಣಕೆ ಚೌಲಕೆ
ಸಾತಿಶಯಾಕ್ಷರ ಪ್ರಾರಂಭಕೆ
ನೂತನ ವಿದ್ಯಾರಂಭಕೆ ಮುಂಜಿಗೆ
ಯಾತಕೂ ಶ್ರೀ ಗಣಪತಿ ಜಯ ಜಯವೆಂದೂ ೧

ಮದುವೆಗೆ ಋತುಶಾಂತಿಗೆ ಸೀಮಂತಕೆ
ಮುದದಿಂದ ಜನನವ ಬರೆವುದಕೆ
ಸದಮಲ ಯಜ್ಞಾರಂಭಕೆ ಸಮರಕೆ
ಮೊದಲೇ ಶ್ರೀ ವಿಘ್ನೇಶ್ವರ ಜಯ ಜಯವೆಂದೂ ೨

ದಾನಕೆ ಧರ್ಮಕೆ ಪರ ಉಪಕಾರಕೆ
ಜ್ಞಾನಮಾರ್ಗಕೆ ಗಾನಕೆ ಗೀತೆಗೆ
ನಾನಾವಿಧ ಸುವ್ರತ ತೀರ್ಥಯಾತ್ರೆಗೆ
ನೀನೆ ಗತಿ ಗಣಪತಿ ಜಯ ಜಯವೆಂದೂ ೩

ಕೆರೆ ಕಾಲುವೆ ಕೂಪಗಳ ವಿಸ್ತಾರಕೆ
ಸುರಗೃಹ ರಥ ಉತ್ಸವ ಪೂಜೆಗೆ
ಸರಸ ಸರೋವರಗಳ ನಿರ್ಮಾಣಕೆ
ಸಿರಿ ಗಣಪತಿ ಪಾವನಮೂರ್ತಿ ಜಯವೆಂದೂ ೪

ಹರ ನಿಮ್ಮ ಪೂಜಿಸಿ ಪುರಮೂರ ಜಯಿಸಿದ
ಗರುಡಗೆ ಅಮೃತವು ಸಿದ್ಧಿಸಿತು

ವರರಾಮಚಂದ್ರ ನಿಮ್ಮಡಿಯ ಪೂಜಿಸಿ ದಶ
ಶಿರನ ಗೆಲಿದನೆನೆ ಗಣಪತಿ ಜಯವೆಂದೂ ೫

ದ್ವಾಪರಯುಗದಲಿ ಧರ್ಮರಾಯನು ನಿಮ್ಮ
ನೇ ಪೂಜಿಸಿ ಕೌರವರ ಗೆಲಿದಾ
ಭೂಪರ ಜೈಸಿ ತುರಗವ ತಂದ ಸಾಂಬನು
ಶ್ರೀಪತಿನುತ ಗಣಪತಿ ಜಯ ಜಯವೆಂದೂ ೬

ವರದಾನದಿಯ ತೀರವಾಸ ಶ್ರೀ ಕೆಳದಿಯ
ಪುರವರಾಧೀಶ ರಾಮೇಶ್ವರನ
ಪರಮಮೋಹದ ಪುತ್ರ ಪಾವನತರಗಾತ್ರ
ವರದ ಶ್ರೀ ಗಣಪತಿ ಜಯ ಜಯ ಜಯವೆಂದೂ ೭

## ೪೩೦

ಅದ್ರಿಸಂಭವೆ ಸರ್ವಸಂಭ್ರಮದೊಳು
ಭಾದ್ರಪದ ಶುದ್ಧ ತದಿಗೆಯ ದಿವಸದಿ
ಸದ್ರಾಜಮಾರ್ಗದಿ ನಡೆತರಲು
ನಡೆತರೆ ಸತ್ಯಭಾಮೆ ರುಕ್ಮಿಣಿಯೊಳೀ
ಭದ್ರೆ ಯಾರೆಂದು ನುಡಿದಳು ೧

ಕೋಟಿ ಸೂರ್ಯಕಾಂತಿಯ ನವರತ್ನ
ಕಿರೀಟಾಗ್ರದಿ ಚಂದನ ರೇಖೆಯ
ಮೀಟೆನೆ ತಳೆದು ಬಾಹವಳಾರೆ ಅಕ್ಕ
ಕೈಟಭವೈರಿಯ ಸತಿಕೇಳೆ ಮಧು
ಕೈಟಭ ದಾನವರ ಗೆಲಿದ ಶಶಿ
ಜೂಟನ ವಲ್ಲಭೆ ಶಂಕರಿ ಶಾಕಂಬರಿಯೀಕೆ ಕಾಣೆ ೨

ದುಂಡುಮುತ್ತಿನ ಸರಪಣಿ ವಜ್ರದ
ಕುಂಡಲ ಕಿವಿಯೊಳು ಥಳಥಳಿಸಿ ಪ್ರ–
ಚಂಡ ಸಿಂಹವನೇರಿ ಬಾಹವಳಾರೆ ಅಕ್ಕ
ಪುಂಡರೀಕಾಕ್ಷನ ಸತಿ ಕೇಳೆ
ಚಂಡಾಮುಂಡಾಸುರರನು ಗೆಲಿದು ಭೂ
ಮಂಡಲವ ಕಾಯ್ದ ದೇವಿ ಭವಾನಿಯೀಕೆ ಕಾಣೆ ೩

ವೀರಮುದ್ರಿಕೆ ಕಂಕಣ ಕಡಗವ
ದೋರೆ ಹಿಂಬಳೆ ದಂಡು ಮುತ್ತಿನ
ಹಾರವ ಧರಿಸಿ ಬಾಹವಳಾರೆ ಅಕ್ಕ
ನಾರಾಯಣನರಸಿ ನೀ ಕೇಳೆ
ಧೀರನಿಶುಂಭನ ಗೆಲಿದಮರರ ಪರಿ
ವಾರವ ಪೊರೆದ ಪರಶಿವೆ ಪರಮೇಶ್ವರಿ ಕಾಣೆ ೪

ಮೆರೆವೇಕಾವಳಿಗುಂಡಿನಸರ
ಪರಿಪರಿ ಚಕ್ರಸರ ನಕ್ಷತ್ರದ
ಸರಗಳ ಧರಿಸಿ ಬಾಹವಳಾರೆ ಅಕ್ಕ
ಕರಿವರದನ ಅರಸಿ ನೀ ಕೇಳೆ
ಧುರದೊಳೆ ಧೂಮ್ರಾಕ್ಷನ ವಧಿಸಿದ
ಗಿರಿರಾಜ ಕುಮಾರಿ ಮಂಗಳಗೌರಿ ದೇವಿ ಈಕೆ ಕಾಣೆ ೫

ಅಚ್ಚ ಮುತ್ತಿನ ಸರಗಳ ನಡುವೆ
ಪಚ್ಚೆಯ ರತುನದ ಪಂಚಸರಗಳ
ನಿಚ್ಚಳದಿ ಧರಿಸಿ ಬರುವವಳಾರೆ ಅಕ್ಕ
ಅಚ್ಯುತನ ಅರಸಿ ನೀ ಕೇಳೆ
ಅಚ್ಚರಿಯನೆ ಶುಂಭ ನಿಶುಂಭರ
ಕೊಚ್ಚಿದ ರುದ್ರಾಣಿ ಶಿವೆ ಶರ್ವಾಣಿ ಈಕೆ ಕಾಣೆ ೬

ಚೆಂಗಾವಿಯ ಸೀರೆಯನುಟ್ಟು
ರಂಗುರತುನದೊಡ್ಯಾಣವನುಟ್ಟು

ಭೃಂಗಕುಂತಳನರ್ತಿಸೆ ಬಾಹಳಾರ ಅಕ್ಕ
ಅಂಗಜನ ಮಾತೆ ನೀ ಕೇಳೆ
ಸಂಗರದಲಿ ರಕ್ತಬೀಜನ ಗೆಲ್ದ
ಗಂಗಾಧರನರಸಿ ಕಾಳಭುಜಂಗವೇಣಿ ಈಕೆ ಕಾಣೆ ೭

ಝುಗಝುಗಿಸುವ ಕುಂಕುಮರೇಖೆ
ಮಗಮಗಿಸುವ ಮೃಗಮದ ತಿಲಕದಿ
ಅಗಿಲುಗಂಧದೊಳೊಪ್ಪುತ ಬಾಹಳಾರೆ ಅಕ್ಕ
ನಗಧರನಂಗನೆ ನೀ ಕೇಳೆ
ಜಗಳದೆ ಮಹಿಷನ ಮಿಗೆ ಮರ್ದಿಸಿ
ದಗಣಿತ ಸನ್ಮಹಿಮಾಸ್ಪದೆ ಸರ್ವೇಶ್ವರಿ ಈಕೆ ಕಾಣೆ ೮

ಕೆಂದಾವರೆಯಂದವ ನಿಂದಿಪ
ಬಂಧುರಪದದಂದುಗೆ ಕಲಿರೆನೆ
ಕುಂದಣದ ಸರಪಣಿಯಿಟ್ಟು ಬಾಹಳಾರೆ ಅಕ್ಕ
ಮಂದರಧರನಂಗನೆ ಕೇಳರ–
ವಿಂದಜ ಸಂಕ್ರಂದನಮುಖಿ ಸುರ
ವೃಂದವ ಪೊರೆವ ಮಾಹೇಶ್ವರಿ ಈಕೆ ಕಾಣೆ ೯

ಮರುಗ ಮಲ್ಲಿಗೆ ಸುರಗಿ ಸೇವಂತಿಗೆ
ಪರಿಮಳಿಸುವ ಸಂಪಗೆ ಕೇದಗೆ–
ಯರಳನೆ ಮುಡಿದು ಬಾಹವಳಾರೆ ಅಕ್ಕ
ಮುರಹರನಂಗನೆ ನೀ ಕೇಳೆ
ವರ ಕೆಳದಿಯ ಪುರದೊಳು ನೆಲಸಿದ
ವರದ ರಾಮೇಶ್ವರನಂಗನೆ ಪಾರ್ವತಿ ಈಕೆ ಕಾಣೆ ೧೦

## ೪೩೧

ಇನ್ನಾರಿಗುಸುರುವೆನು
ಎನ್ನ ಸುಖದುಃಖವನು
ಪನ್ನಗಾಭರಣ ಶ್ರೀರಾಮೇಶಲಿಂಗ ಪ

ಸುರಪತಿಗೆ ಅಂಡವರತವು ಅಗುನಿ ಆಶ್ರಯಿಸಿ
ದರನೆ ಭಕ್ಷಿಪನು ಯಮ ನಿಷ್ಕರುಣಿಯು
ನಿರುತಿ ರಾಕ್ಷಸ ವರಣ ನೀರೊಳಿಹ ವಾಯು ಸಂ–
ಚರಿಪ ಭಾಗ್ಯೋನ್ಮತ್ತನಾತ್ಮಘಾತಕನು ೧

ನಾರಾಯಣಗೆ ನಿದ್ರೆ ನಾಗೇಂದ್ರಶಯನಗೇ
ವಾರಿಜಭವಗೆ ಪ್ರಣವ ಜಪಕಾಲವು
ವೀರಭದ್ರನೆ ಕೋಪಿ ಪಾರ್ವತಿಯೆ ಚಂಡಿ ಮದ
ವೇರಿ ಮುಕುಟವನು ತೂಗುವನು ಗಣವರನು ೨

ಸರಸಿಜಾಪ್ತಗೆ ಸಮಯವಿಲ್ಲ ಶಶಿ ತನ್ನೊಳಂ
ಕುರಿಸಿದ ಕಲಂಕ ಕಳಕೊಳಲಾರನು
ವರ ಕೆಳದಿ ರಾಮೇಶ ನೀನೇ ಚಿತ್ತಕೆ ತಂದು
ಮರೆಯೊಕ್ಕವನ ನೋಡಿ ಪೊರೆಯದಿದ್ದ ಮೇಲೆ ೩

## ೪೩೨

ಇನ್ನೇನು ಗತಿ ಎನಗೆ ಈ ಉದರಪೋಷಣಕೆ
ನಿನ್ನ ಸೇವೆಯನಿತ್ತು ಸಲಹೊ ರಾಮೇಶ ಪ

ಊರೂರ ತಿರುಗಿ ಭಿಕ್ಷವ ಬೇಡಲಾರೆ ನಾಂ
ಘೋರ ವಿಷವನು ಮೊದಲೆ ಕುಡಿಯಲಾರೆ
ನೀರ ಹೊರಲಾರೆ ಬಾಗಿಲ ಕಾಯಲಾರೆ ೧

ಧರಿಸುವರೆ ವಸ್ತ್ರವಿಲ್ಲದೆ ಲೋಕದೋಳ್ ದಿಗಂ-
ಬರನಾಗಿ ನಿನ್ನಂತೆ ಚರಿಸಲಾರೆ
ಕರಿ ವ್ಯಾಘ್ರಚರ್ಮವನು ಪೊದೆದು ವರ್ತಿಸಲಾರೆ
ಧರೆಯರಿಯೆ ನಟನಾಗಿ ಕುಣಿದಾಡಲಾರೆ ೨

ಚಲ್ಲೆದ್ದು ಕುಂಟಣಿತನವ ರಚಿಸಲಾರೆ ನಾ
ಮಲ್ಲಗಾಳಗವ ನಾ ಮಾಡಲಾರೆ
ಕಲ್ಲೆದೆಯದೇಕೋ ಕೆಳದಿಯ ಪುರಾಧೀಶ್ವರನೆ
ಫುಲ್ಲಶರಮದ ಭಂಗ ರಾಮೇಶಲಿಂಗ ೩

## ೪೩೩

ಗಿರಿರಾಜತನೂಜಾತೆ
ವೇದ ವಿಖ್ಯಾತೆ
ಪರಮಂಗಳದಾತೆ
ಪದ್ಮಜಮುಖಿ ಸುರಗಣ ಪರಿಪೂಜಿತೆ
ಶಂಕರಪ್ರೀತೆ
ಧುರದಿ ಮಧುಕೈಟಭರ ವಧಿಸಿ ವಿ-
ಸ್ತರದ ಜಲದೊಳು ಸ್ಥಿರಮೆನಲು ಭಾ-
ಸುರ ಧರಿತ್ರಿಯ ನಿಲಿಸಿ ಸರ್ವಾಮರರ
ಪೊರೆದಮರೇಂದ್ರಸನ್ನುತೆ
ಲೋಕೈಕಮಾತೆ ೧

ನಾರದಗಾನಲೋಲೆ
ಶ್ರೀಚಕ್ರಸಂಚಾರಿಣಿ ಶುಭಲೀಲೆ
ದಿವ್ಯಮೌಕ್ತಿಕ
ಹಾರೆ ಕುಂಕುಮನಿಟಿಲೆ
ಮುಕುರಕಪೋಲೆ
ಧೀರಸುರಪತಿಮುಖ್ಯಸುರಪರಿ

ವಾರ ಜಯವೆಂದಾರುತಿರೆ ಜು
ಝೂರ (?) ಮಹಿಷಾಸುರನ ಮರ್ಧಿನಿ
ಮೂರು ಲೋಕವ ಪೊರೆವ ಮಂಗಲೆ
ಕಸ್ತೂರಿಫಾಲೆ ೨

ಎಸಳುಗಂಗಳ ನೀರೆ
ಪರಾತ್ಪರೆ
ಮಿಸುಪ ಕಂಕಣಹಾರೆ
ಬಂದುಗೆಯ ಹೂವಿನಂತೆಸೆವ
ಸುಶೋಣಾಧರೆ
ಬಿಸಜಬಾಣನ ಪೊಸಮಸೆಯ ಕೂ
ರಸಿಯೆನಲು ಮಿಸುಮಿಸುಪ ಕಂಗಡೆ
ಎಸವ ಪೊಸವೆಳಗಿಂದ ದೆಸೆಗಳ
ವಿಸರವನು ಪಸರಿಸುವ ಶ್ರೀಕರೇ
ಮೋಹನಾಕಾರೇ ೩

ಸುಲಲಿತ ಮಧುರವಾಣಿ
ಮೋಹನಕರ
ಜಲರುಹ ಸದೃಶಪಾಣಿ
ಮಂಗಲಸೂತ್ರೋ-
ಜ್ವಲೆ ಹರಿ ನೀಲವೇಣಿ
ಸಿಂಹವಾಹಿನಿ
ನಳನಳಿಪ ನಳಿತೋಳ ಥಳ ಥಳ
ಥಳಿಸುವಳಿಕುಂತಳದ
ದರಸಮಗಳದ
ತಿಲಸುಮನಾಸಿಕದ
ಅರಗಿಳಿನುಡಿಯ
ರುದ್ರಾಣಿ ಗುಣಮಣಿ
ಪರಮಕಲ್ಯಾಣಿ ೪

ಸರಸಿಜದಳನಯನೆ
ಸಾಮಜಯಾನೆ
ಸರಸಮಂಗಲಸದನೆ
ಶಂಕರಿಪೂರ್ಣೆ
ಶರದಿಂದುನಿಭವದನೆ
ಕೋಕಿಲಗಾನೆ
ಪರಮಪಾವನತರ ಸು-
ವರದಾನದಿಯ ತೀರದಿ ಮೆರವ ಕೆಳದಿಯ
ಪುರದ ರಾಮೇಶ್ವರನ ವಲ್ಲಭೆಯೆನಿಸಿ ಭ-
ಕ್ತರ ಪೊರೆವ ಪಾರ್ವತಿ
ಕಲಹಂಸಗಮನೆ ಪರಮರುದ್ರಾಣಿ ೫

## ೪೩೪

ಗಿರೀಶಮಾಮವ ಕರುಣ ಸುಧಾಬ್ಧೆ
ಹರಶಂಕರ ಪಾವನ ವೇಷ ರಜತಾದ್ರಿ
ವರವರ ತುಹಿನಾಂಶು ಶೇ-
ಖರವಿಭೋ ಮಹೇಶ್ವರ ಪ

ಸುರತಟಿನೀಧರ ನಗಜಾಪ
ಕಮಲಾಪತಿ ಸನ್ನುತ ಘನರೂಪ
ಸ್ಫುರದುರಗಾಧಿಪ ಸುಕಲಾಪ
ಸಮುದಂಚಿತ ಮಂಗಲತರರೂಪ ೧

ಘನತರ ತ್ರಿಪುರ ದಹನ ಶೂರ
ವೃಷವಾಹನ ದುರ್ಗಾರ್ಧಶರೀರ
ಮದನಾಂತಕವಾರಿಧಿಗಂಭೀರ ೨

ಪ್ರವಿಮಲ ಮೃಗಧರ ಸರ್ವೇಶ
ಶಮಿತಾಂಧಕ ಸಾಧಿತ ಬಹುದೋಷಾ
ಶಶಿಕಂಧರ ಬಂಧುರ ಶುಭಕೋಶ
ಸಾಕ್ಷಾತ್ಕೆಳದೀಶ್ವರ ರಾಮೇಶ ೩

## ೪೩೫

ನಿನ್ನ ನಾನೇನೆಂದೆನೋ ರಾಮೇಶ್ವರ
ನಿನ್ನ ನಾನೇನೆಂದೆನೋ ಸಕಲ ಲೋಕ
ವನ್ನು ಪೊರೆವ ಪಾರ್ವತೀಶನೆಂದೆನಲ್ಲದೆ ಪ

ತಾರಕಾಸುರನ ಪುತ್ರರ ಬಾಧೆಯನು ತಾಳ
ಲಾರದೆ ಹರಿಮುಖ್ಯ ನಿರ್ಜರರು
ಶ್ರೀರುದ್ರ ಸಲಹೆಂದು ಪಾದಕೆ ಮಕುಟವ–
ನೂರೆ ಪೊರೆದ ತ್ರಿಪುರಾರಿಯೆಂದೆನಲ್ಲದೆ

ಊರ ಸುಟ್ಟವನೆಂದೆನೆ ಬಾಣನ ಪಡಿ
ಹಾರಕನಿವನೆಂದೆನೆ ವಿಧಿ ಶಿರವ ಕೈ–
ಯ್ಯಾರೆ ಕಡಿದನೆಂದೆನೆ ಭಕ್ತವತ್ಸಲ
ವಾರಿಜಭವನುತಿಲೋಲನೆಂದೆನಲ್ಲದೆ ೧

ನಾರದಸಹಿತ ಮತ್ತ್ಯಾರು ಕಾಣದಂದದಿ
ಓರುಗಲ್ಲರಸಿನ ಮನೆಗೆ ಪೋಗಿ
ತೋರುವ ಭಿತ್ತಿಯ ಕೊರೆದಾತನಿಷ್ಟವ
ಪೂರಿಸಿದನುಪಮಮಹಿಮನೆಂದೆನಲ್ಲದೆ
ಚೋರರ ಗುರುವೆಂದೆನೆ ಪಾರ್ಥಚಾಪದಿಂ–
ದೇರುವಡೆದನೆಂದೆನೆ ಬತ್ತಲೆಮದ
ವೇರಿ ಕುಣಿದನೆಂದೆನೆ ಅರ್ಜುನಗೊಲಿ
ದಾರಾಜಿಸುವ ಮಹಾನಟನೆಂದೆನಲ್ಲದೆ ೨

ಸುರರು ದಾನವರೆಲ್ಲ ನೆರೆದು ವಾದಿಸಿ ಕ್ಷೀರ
ಶರಧಿ ಮಥನವ ವಿರಚಿಸಲು
ಉರು ಹಾಲಾಹಲಮೊಗೆದುರುಹಲು ಸರ್ವರ
ಪೊರೆದ ಶ್ರೀನೀಲಕಂಧರನೆಂದೆನಲ್ಲದೆ
ಗರವ ಕುಡಿದನೆಂದೆನೆ ಪೆಣ್ಣಿತ್ತನ
ಶಿರವನರಿದನೆಂದೆನೆ ಊರೂರೊಳು
ತಿರಿದುಗರುವನೆಂದೆನೆ ದುಷ್ಟ ಶಿಕ್ಷಕ
ವರ ಕೆಳದಿಯ ರಾಮೇಶ್ವರನೆಂದೆನಲ್ಲದೆ ೩

## ೪೩೬

ನಿನ್ನ ಸೇವೆಯನೊಂದನಿತ್ತು ಸಲಹೋ
ಎನ್ನ ಮನ ನಿನ್ನಲ್ಲಿ ನಿಲುವಂತೆ ಮಾಡಿ ಪ

ಅನ್ನವನು ಬೇಡಿಕೊಂಬುವದೆಂತು ವಿಪುಳ ವಿಷ
ವನ್ನು ಕುಡಿದಿಹ ನೀಲಕಂಠನೊಡನೆ
ಸನ್ನುತಾಂಬರವ ಬೇಡುವುದೆಂತು ಕರಿಚರ್ಮ–
ವನ್ನು ಪೊದೆದಿಹ ದಿಗಂಬರನೊಡನೆ ಶಂಭೋ ೧

ಮಿರುಗುವಾಭರಣಗಳ ಬೇಡಿಕೊಂಬುದೆಂತು
ಉರಗಕುಂಡಲಹಾರ ವಲಯನೊಡನೆ
ಪರಮ ಭಾಗ್ಯವ ಬೇಡಿಕೊಂಡೆ ನಾನೆಂತು ವಿಧಿ
ಶಿರದಿ ಭಿಕ್ಷವ ಬೇಡಿ ತಿರಿದುಂಡನೊಡನೆ ೨

ಕರಿತುರಗ ಮುಖ್ಯವಾಹನವ ಬೇಡುವುದೆಂತು
ನಿರುತ ಬಸವನ ಮೇಲೆ ಚರಿಪನೊಡನೆ
ಕರುಣದಿಂದೆನಗೆ ಕೊಡಲೇನುಂಟೊ ಕೆಳದಿಪುರ–
ದೆರೆಯ ರಾಮೇಶ ಶ್ರೀಕರ ಪಾರ್ವತೀಶ ೩

## ೪೩೭

ಧ್ಯಾನವನೆ ಮಾಡಿ ನವರತ್ನ ಸಿಂಹಾಸನ
ಸಾನಂದದಿಂದ ನಿಮಗರ್ಪಿಸುವೆನು
ಶ್ರೀ ನಿಧಿಯೆ ಪಾದ್ಯಾರ್ಘ್ಯ ಮಧುಪರ್ಕಗಳನು ಸು–
ಮ್ಮಾನದಿಂದರ್ಪಿಸುವೆ ಗೌರಿ ದೇವಿ ಜಯ ೧

ತುಂಗಭದ್ರಾ ಸರಸ್ವತಿ ಯಮುನೆ ಕಾವೇರಿ
ಗಂಗಾದಿ ಶುಭತೀರ್ಥ ಸಲಿಲದಿಂದ
ಮಂಗಲಸ್ನಾನವನೆ ರಚಿಸಿ ಜಡೆವೆಣೆದು ಕುಸು
ಮಂಗಳಂ ಮುಡಿಗೆ ಮುಡಿಸುವೆನಂಬಿಕೆ ೨

ಚಂದ್ರಗಾವಿಯ ಸೀರೆ ಕುಪ್ಪಸವ ತೊಡಿಸುವೆನು
ಚಂದದಿಂದರಿಸಿನವ ಲೇಪಿಸುವೆನು
ಚಂದ್ರಕಸ್ತೂರಿ ತಿಲಕ ಕುಂಕುಮದ ರೇಖೆಯನು
ಅಂದದಿಂದಿಡುವೆ ಶ್ರೀ ಗೌರಿ ನಿಮಗೆ ೩

ಕಣ್ಣ ಕಪ್ಪಿಟ್ಟು ಕರಯುಗಕೆ ಗಂಧವ ತಿವುರಿ
ಚಿನ್ನದಾಭರಣ ನಿಕರವನಿಡುವೆನು
ರನ್ನ ದುಂಗುರ ಹಾರ ಪದಕದಿಂದ ಶೃಂಗರಿಸಿ
ನಿನ್ನ ಪದಯುಗವ ಪೂಜಿಪೆನು ಗೌರಿ ಜಯ ೪

ಮರುಗ ಮಲ್ಲಿಗೆ ಜಾಜಿ ಸುರಗಿ ಸೇವಂತಿಗೆಯು
ಕರವೀರ ಚಾರು ಪುನ್ನಾಗ ಪೂಗ
ಸಿರಿಸ ಸುರಹೊನ್ನೆ ಸಂಪಗೆ ಮೊದಲಾದ ಪೂ
ಸರವ ಸಿರಿಮುಡಿಗೆ ಮುಡಿಸುವೆನು ಗೌರಿ ಜಯ ೫

## ೪೩೮

ಪಾಲಯಮಾಂ ಪರಮೇಶ
ಚಿತಕಾಲಿ ಸಂತತಮಂಬಿಕೇಶ
ಭೂರಿಲೀಲ ಶಂಕರವಿಯತ್ಕೇಶ
ಕರುಣಾಲಯಹೃತಪಶುಪಾಶ
ಧೃತಶೂಲ ವಿಶಾಲ ಕಪಾಲ ಕರಾಲಕಂ–
ಕಾಲಿಕಾಕೂಲ (?) ವಿಲೋಲಾಸ್ಥಿಮಾಲಾ ಪ

ವಾರಣಾಸುರ ಚರ್ಮಚೇಲ
ಸುರವಾರಸೇವಿತ ಗಾನಲೋಲ
ಭಕ್ತಾಧಾರ ಸಕಲ ಜಗನ್ಮೂಲ
ನಿರ್ವಿಕಾರ ಮೃಕಂಡು ಕಸಾಲ
ಹಾರ ಹೀರ ಮಂದಾರ ಪಟೀರ ನೀಹಾರ
ಗೋಕ್ಷೀರ ಕರ್ಪೂರ ಸುಧಾರಸಗೌರ ೧

ವ್ಯೋಮತರಂಗಿಣೀಜೂಟ
ಜಿತಕಾಮಪಾಲಿತ ಸರ್ವಖೇಟ
ವಿತತಾಮಲಾಂಬರ ಪುಷ್ಪವಾಟ
ರಘುರಾಮಪೂಜಿತ ಪಾದಪೀಠ
ಪೂರ್ಣಕಾಮಾತಿಧಾಮಾಭಿರಾಮ ನಿಸ್ಸೀಮ
ಸುತ್ರಾಮ ಮುಖ್ಯಾಮರಸ್ತೋಮಲಲಾಮ ೨

ಗೋಪತಿರಾಜಿತುರಂಗ
ಘೋರಪಾಪಾಂಧಕಾರಪತಂಗ
ದಿವ್ಯತಾಪಸಹೃದಯಾಬ್ಜಭೃಂಗ
ವಿಶ್ವವ್ಯಾಪಕನಿಗಮಾಂತರಂಗ
ಯಾಮಿನಿಪಕಲಾಪಾದ್ರಿಚಾಪರಮಾಪತಿರೂಪ
ನಿರ್ಲೇಪ ಕೆಳದಿ ರಾಮೇಶ ಚಿದ್ರೂಪ ೩

## ೪೩೯

ಬಟ್ಟ ಮುತ್ತಿನ ಸರವ ಕೊರಳೊಳಿಟ್ಟು ನೋಡುತ
ಪುಟ್ಟ ಪುಟ್ಟ ಪಾದದಿಂದ ದಟ್ಟಡಿಯನಿಕ್ಕುತ
ಅಟ್ಟಟ್ಟು ಕರೆದರೆ ಬಾರದೆ ಅಂಬೆಗಾಲನಿಕ್ಕಿ ಕೊಡವುತತಿ
ಗೂಳುಗುಳೆಂದು ಮುಟ್ಟಿ ನಲಿದಾಡುತ ತಟ್ಟಿಗೆ ಮುಚ್ಚಿಗೆಯೆಂದು
ತಟ್ಟನೆ ಕೈಯನಿಡುತ ಪುಟ್ಟಮಕ್ಕಳೊಡನೆ ಚಂಡಾಡಿ
ನಲಿದಾಡುವ ದಿಟ್ಟರಂಗಯ್ಯ ೧

ರನ್ನ ದುಂಗುರ ಪದಕ ತಾಳಿಯನ್ನು ಹಾಕುವೆ
ಸಣ್ಣ ಮಕ್ಕಳ ಕೂಡೆಲ್ಲಾ ಚಿನ್ನಿಕೋಲನಾಡುತ
ಕನ್ನೆವೆಣ್ಣುಗಳ ಕಂಡು ಕಣ್ಣ ಸನ್ನೆ ಮಾಡುತ
ಕಣ್ಣಮುಚ್ಚಾಲೆ ಆಟವ ಆಡಿ ನಲಿದಾಡುತ ತಾ
ಹೊನ್ನ ಹಿಡಿ ಹೊನ್ನಾಟವನಾಡುತ ಶ್ರೀರಂಗಧಾಮ ಪನ್ನಗಶಯನ ೨

ಕಾಲಿನಂದುಗೆ ಘಲಿರೆನೆ ನಳಿತೋಳನಾಡುತ
ಬಾಲೆಯರ ಕೂಡೆ ಬಹು ಲೀಲೆಯ ಮಾತಾಡುತ
ಶಾಲೆಗಳ ಸೆಳದು ಮರದ ಮೇಲೆ ಕುಳಿತು ನೋಡುತ
ಹಾಲು ಬೆಣ್ಣೆ ಕಳ್ಳನೆಂಬ ದೂರುಗಳ ಕೇಳುತ
ಲೋಲಾಕ್ಷಿಯರೊಳನಿಂಥಾ ಜಾಲಿಗಳ ಮಾಡುವ ಬಾಲಗೋಪಾಲ ೩

ಕಂಡು ನಿನ್ನನು ಪ್ರೇಮದೊಳಪ್ಪಿಕೊಂಡು ನೋಡುವೆ
ಹಿಂಡು ಬೊಗರಿಲಿತ್ತಲಿಗ್ಗೆ ಚಂಡ ಕೊಡುವೆ ಬಾರಯ್ಯ
ಭಂಡಿಯನೊದದ ಪಾದಪದುಮವನ್ನೇ ತಾರಯ್ಯ
ಗುಂಡುವಾನಿಟ್ಟ ನಳಿ ತೋಳನೊಮ್ಮೆ ತೋರಯ್ಯ
ಪುಂಡಲೀಕಾಕ್ಷಿಯರು ನಿನ್ನ ಕಂಡರೆ ಸೇರರೂ ಕೃಷ್ಣ ೪

ಕರದ ಕಂಕಣ ಝಣರೆನಲು ಮುಂಗುರಳ ತಿದ್ದುತ
ಕರದ ಕಂಬಾಲಿನೆಲ್ಲವ ಸುರಿದು ಸೂರೆ ಮಾಡುತ
ತರುಣಿಯರು ನೋಡಲವರ ಪುರುಷರಂತೆ ತೋರುತ

ಸರಸವಾಕಿನಿಂದಲವರ ಮರುಳು ಮಾಡಿ ಕರವುತ
ಸರಿಯ ಮಕ್ಕಳೊಡನೆ ಜೊಲ್ಲು ಸುರಿಸುತ ಮಾತಾಡುವಂಥಾ ಸರಸಗೋಪಾಲ।

ಮರುಗ ಮಲ್ಲಿಗೆ ಸಂಪಗೆಯ ಪೂಸರವ ಮುಡಿಸುವೆ
ಕೊರಳ ಮುತ್ತಿನ ಸರವ ನಿನಗೆ ಕರದು ಕೊಡುವೆ
ಬಾರಯ್ಯ ಅರಳೆಲೆ ಮಾಗಾಯನಿಟ್ಟ ಸಿರಿಮುಖವ
ತೋರಯ್ಯ ಪರನಾರಿಯರೊಡನಿಂಪಾಸರ ಛಂದವೇನಯ್ಯ
ಪುರದ ನಾರಿಯರ ಕೂಡೆ ಸರಸವನಾಡು ಉಡುಪಿಪುರದ ಶ್ರೀಕೃಷ್ಣ ೬

ಚರಣಕೆ ಅಂದುಗೆ ಗೆಜ್ಜೆ ಸರವನಿಡುವೆ ತಾಯಿಟ್ಟು
ಕೊರಳಿಗೆ ಮರಿಯುಗುರು ಸರ್ಪಣಿ ಸರವನೆ ಹಾಕುವೆ ಕೆಳದಿಪುರ ಶ್ರೀಕೃಷ್ಣ

## ೪೪೦

ಬಿಲ್ವಪತ್ರೆಯ ಪೂಜೆಗೊಲಿವನು ಜಗದ್
ವಲ್ಲಭನಾದ ರಾಮೇಶ್ವರನು ಪ

ಕೋಟಿ ಕನ್ಯಾದಾನವ ಮಾಡಿದ ಫಲ
ಕೋಟಿ ತುರಗದಾನದ ಫಲವು
ಕೋಟಿ ಸಂಖ್ಯಾ ಗಜದಾನದ ಫಲ ಶಶಿ
ಜೂಟಗೊಂದೆ ಬಿಲ್ವಪತ್ರೆಯೇರಿಸಿದರೆ ೧

ಕೋಟಿ ಗಂಗಾಸ್ನಾನವ ಮಾಡಿದ ಫಲ
ಕೋಟಿ ಪ್ರಯಾಗ ಸ್ನಾನದ ಫಲವು
ಕೋಟಿ ಗೋದಾನದ ಫಲ ಬರುವುದು ಶಶಿ
ಜೂಟಗೊಂದೆ ಬಿಲ್ವಪತ್ರೆಯೇರಿಸಿದರೆ ೨

ಲಕ್ಷ ಪಂಚಾಕ್ಷರಿ ಜಪವ ಮಾಡಿದ ಫಲ
ಲಕ್ಷಭೂಮಿಯ ಪ್ರದಕ್ಷಿಣ ಫಲವು

ಲಕ್ಷಾಶ್ವಮೇಧಯಾಗವ ಮಾಡಿದ ಫಲ
ತ್ರ್ಯಕ್ಷಗೊಂದೆ ಬಿಲ್ವಪತ್ರೆಯೇರಿಸಿದರೆ ೩

ವೇದಪುರಾಣವ ಪಠಿಸಿದ ಫಲ ಸರ್ವ
ಮೇದಿನಿ ದಾನವನಿತ್ತ ಫಲವು
ಭೂದಿವಿಜರ ಸಂರಕ್ಷಿಸಿದ ಫಲ ಶ್ರೀ
ಮಾದೇವಗೇಕ ಬಿಲ್ವವನೇರಿಸಿದರೆ ೪

ಸೋಮವಾರದ ದಿನ ನೇಮದಿಂದಲಿ ಬಹು
ಕೋಮಲ ಬಿಲ್ವಪತ್ರೆಗಳ ತಂದು
ಶ್ರೀ ಮಹಾದೇವಗರ್ಪಿಸಿದಂಥ ಭಕ್ತರ್ಗೆ
ರಾಮೇಶಲಿಂಗ ಮುಕ್ತಿಯನೀವನು ೫

## ೪೪೧

ರಾಮಾ ರಾಮಾ ಎಂಬ ನಾಮ ಜಿಹ್ವೆಯೊಳಿರುವ
ನೇಮವನೆ ಸ್ಥಿರನಿಜವ ಮಾಡೋ ರಾಮ
ರಾಮ ದಶರಥರಾಮ ಪಟ್ಟಾಭಿರಾಮ ರಘು
ರಾಮ ಸೀತಾರಾಮ ರಾಮ(ರಾಮ) ಪ

ಬಾಲತನವೆಂಬುದೆಂತು ಲೀಲೆಯಿಂದಲಿ
ಸಂತು ಮೇಲೆ ಯೌವನವು ಬಂತೋ ರಾಮ
ಲೋಲಲೋಚನೆಯರ ವಿಶಾಲರತಿಸುಖದೊಳಗೆ
ವೋಲಾಡುತಿದ್ದೆನಲ್ಲೋ ರಾಮ
ಕಾಳು ಜರೆ ಮುಸುಕಿ ಕೈಕಾಲು ಕಸದಿಂ ಮುರುಪಿ
ನಾಲಿಗೆಯ ಧೃತಿ ತಪ್ಪಿತೋ ರಾಮ
ಕಾಲನವರಿಗೆ ಕರುಣವಿಲ್ಲ ನೀ ಕೈಬಿಟ್ಟ ಮೇಲೆ
ರಕ್ಷಿಸುವರಿಲ್ಲಾ ರಾಮ ೧

ಹೆತ್ತ ತಾಯಿ ಮೊಲೆವಾಲನುಂಡುದಕೆ ಪಡಿಗೆಟ್ಟೆ
ಸಪ್ತಶರನಿಧಿ ಸಾಲದೋ ರಾಮ
ಸತ್ತು ಹುಟ್ಟಿದ ದೇಹದಸ್ಥಿಗುಪಮಿಸೆ
ಮೇರುಮಸ್ತಕಕ್ಕತ್ಯಧಿಕವೋ ರಾಮ
ಚಿತ್ರಗುಪ್ತರು ಕರ್ಮಗಳನು ಬರೆಬರೆದು
ಬೇಸತ್ತು ಬೆಂಡಾದರಲ್ಲೋ ರಾಮ
ಅತ್ಯಂತ ಕರುಣರಸವೆನ್ನ ಮೇಲೆ ನಿನಗಿರ್ದರೆ
ಮುಕ್ತಿಯನು ಕೊಟ್ಟು ಸಲಹೋ ರಾಮ ೨

ತಂದೆ ತಾಯ್ಗಳು ನೀನೆ ಬಂಧುವರ್ಗವು ನೀನೆ
ಮುಂದೆ ರಕ್ಷಿಪನು ನೀನೆ ರಾಮ
ಮುಂದುಗಾಣದೆ ಬಹು ಮದಾಂಧತನದಲಿ
ನಡೆದು ಮಂದಮತಿಯಾಗಿದ್ದೆನೋ ರಾಮ
ಮುಂದಾದರೂ ತಂದೆ ತಾಯಿಯ ಜಠರದಿ
ಬಾರದಂದವನು ಮಾಡಿ ಸಲಹೋ ರಾಮ
ಚಂದ್ರಶೇಖರ ಕೆಳದಿ ರಾಮೇಶ್ವರನು ನೀನೆ
ಎಂದು ನಾನಿಂದು ತಿಳಿದೆ ರಾಮ ೩

## ೪೪೨

ಶಿವಮಂತ್ರವ ಜಪಿಸೋ ಮೂಢ
ಶಿವಮಂತ್ರವ ಜಪಿಸೋ
ಶಿವನೇ ನೀನಾಗುವೆಯೆಂದು ನಂಬುತ ಪ

ಸ್ನಾನ ಬೇಡ ಸಂಧ್ಯಾಕರ್ಮವು ಬೇಡ
ಧ್ಯಾನ ಬೇಡ ಧಾರಣೆ ಬೇಡ
ಮೌನ ಬೇಡ ಮಣಿಮಾಲಿಕೆ ಬೇಡ
ಧ್ಯಾನ ಬೇಡ ಪಶುವಧೆಗಳು ಬೇಡ ೧

ದೇಶಕಾಲ ಪಾತ್ರವ ನೋಡಬೇಡ
ಕಾಷಾಯಾಂಬರ ಧಾರಣೆ ಬೇಡ
ಭಾಸುರ ಜಡೆಯನು ಬೆಳೆಸಲು ಬೇಡ
ಈ ಶರೀರವನೆ ದಂಡಿಸಬೇಡ ೨

ಕಾಲನ ದೂತರು ಎಳೆಯದ ಮುನ್ನ
ನಾಲಿಗೆ ತನ್ನಾಧೀನವಾಗಿರುವಾಗ
ಏಳುಕೋಟಿ ಮಂತ್ರಕೆ ಮಣಿಯಾದ ವಿ-
ಶಾಲ ಕೆಳದಿ ರಾಮೇಶ್ವರನೆ ಗತಿಯೆಂದು ೩

## ೪೪೩

ಶ್ರೀ ಕಲ್ಯಾಣಿ ಸುಗುಣಮಣಿ ಗಿರಿಜೆ ಪ-
ರಾಕೆ ಬಾಗಿಲ ತೆಗೆಯೆ
ಸಾಕು ನೀನಾರು ನಿನ್ನಯ ನಾಮವನು ಪ-
ರಾಕು ಮಾಡದೆ ಪೇಳಯ್ಯ ೧

ಕಾಮಿನಿಯರೊಳು ಕಟ್ಟಾಣಿ ಪಾರ್ವತಿ ಕೇಳೆ
ಕೌಮಾರಿ ಕಾಣೆ ಜಾಣೆ
ಕೌಮಾರಿಯಾದರೊಳ್ಳಿತು ನಡೆ ಋಷಿಗಳ
ಸ್ತೋಮದ ವನಕಾಗಿ ೨

ಕಾಳ ಪನ್ನಗವೇಣಿ ಕಲಕೀರವಾಣಿ
ಕೇಳೆ ಶೂಲಿ ಕಾಣೆಲೆ ಕೋಮಲೆ
ಶೂಲಿ ನೀನಾದರೊಳ್ಳಿತು ನಡೆ ವೈದ್ಯರ
ಜಾಲವಿದ್ದೆಡೆಗಾಗಿ ೩

ನೀಲಕುಂತಳೆ ನಿಗಮಾಗಮನುತೆ ಕೇಳೆ
ನೀಲಕಂಠನು ಕಾಣೆ

ನೀಲಕಂಠನು ನೀನಾದರೆ ತರುಗಳ ಮೇಲೆ
ಕುಳ್ಳಿರು ಪೋಗಯ್ಯ ೪

ಏಣಾಕ್ಷಿ ಸೊಬಗಿನ ಸೋನೆ ಕೋಕಿಲಗಾನೆ
ಸ್ಥಾಣು ನಾನೆಲೆ ಜಾಣೆ
ನೀನಾದರೊಳ್ಳಿತು ನಡೆ ವಿಪಿನ
ಸ್ಥಾಣದೊಳಿರು ಪೋಗಯ್ಯ ೫

ಎಸಳುಗಂಗಳ ಬಾಲೆ ಎಸವ ಮೋಹನಮಾಲೆ
ಪಶುಪತಿ ಕಾಣೆ ಕೋಮಲೆ
ಪಶುಪತಿಯಾದರೊಳ್ಳಿತು ನಡೆಗೋಗಳ
ವಿಸರವ ಕಾವುದಕೆ ೬

ಜಾತಿನಾಯಕಿ ಕೇಳೆ ನೂತನವೇತಕೆ
ಭೂತೇಶ ಕಾಣೆ ಜಾಣೆ
ಭೂತೇಶನಾದರೊಳ್ಳಿತು ನಡೆ ಭೂತ
ವ್ರಾತದ ವನಕಾಗಿ ೭

ಮಿಂಚಿನ ಗೊಂಚಲ ಮುಂಚಿ ಪಳಂಚುವ
ಚಂಚಲನೇತ್ರಯುಗೆ
ಅಂಚಿತಮಾದ ವಿಪಂಚಿಯ ಸ್ವರವ ಪ
ಳಂಚುವಿಂಚರದಬಲೆ ೮

ಕರಗಿಸಿ ಕರುವಿಟ್ಟೆರದ ಚಿನ್ನದ ಬೊಂಬೆ
ಸುರುಚಿಕರ ಸುನಿತಂಬೆ
ಪರಿಪೂರ್ಣ ಶರದಿಂದುವದನೆ ಕುಂದರದನೆ
ವರಸುಗುಣಾವಲಂಬೆ ೯

ಕುಂಕುಮರೇಖಾಲಂಕೃತೆ ಪರತರೆ
ಪಂಕಜಸಮಪಾಣಿ

ಶಂಕರಿ ಪಾಪಭಯಂಕರಿ ಸರ್ವವ
ಶಂಕರಿ ಶುಭವಾಣಿ ೧೦

ಚಂಡಮುಂಡಾಸುರಖಂಡನ ಪಂಡಿತೆ
ಮಂಡಲತ್ರಯನಿಲಯೆ
ಮಂಡಿತ ನವರತ್ನಖಚಿತ ಮಹೋಜ್ವಲ
ಕುಂಡಲೆ ಮಣಿವಲಯೆ ೧೧

ವರದಾನದಿಯ ತೀರವಾಸ ಶ್ರೀ ಕೆಳದಿಯ
ಪುರದ ರಾಮೇಶ ಕಾಣೆ
ಪುರದ ರಾಮೇಶನಾದರೆ ನೆರೆಬಾಯೆಂದು
ಕರೆದಳು ಗಿರಿಜಾತೆ ೧೨

ಗಿರಿಜಾ ಶಂಕರರ ಸಂವಾದದ ಪದಗಳ
ಬರೆದೋದಿ ಕೇಳ್ದರಿಗೆ
ಪರಮ ಸೌಭಾಗ್ಯ ಸಂತಾನಗಳನು ಕೊಟ್ಟು
ಪೊರೆವನು ರಾಮೇಶ ೧೩

## ೪೪೪

ಶ್ರೀಕಾಂತ ಬಿನ್ನಹ ಸರ್ವ
ಲೋಕೈಕ ರಕ್ಷಕನಾಗಿ
ಯಾಕೆ ನೀರಪೊಕ್ಕೆಯಯ್ಯಾ ಶ್ರೀಕೃಷ್ಣರಾಯ
ಭೀಕರತಮನ ಕೊಂದು
ಶ್ರೀಕರವೇದವ ತಂದು
ಲೋಕೇಶನಿಗಿತ್ತೆ ಕಾಣೆ ಎಲೆ ಸತ್ಯಭಾಮೆ ೧

ಮಾರಜನಕನ ಕೌಸ್ತುಭ
ಹಾರ ಕೇಳು ಕಠಿಣ ಶ–

ರೀರವ ಪಡದೆ ಯಾಕೆ ಶ್ರೀಕೃಷ್ಣರಾಯ
ನೀರೊಳು ಧಾರಿಣಿ ಮುಳುಗೆ
ಚಾರು ಕೂರ್ಮಾಕಾರದಿಂದ
ಭೂರಮಣಿಯ ಪೊರೆದೆ ಎಲೆ ಸತ್ಯಭಾಮೆ ೨

ಧಾರಿಣಿಯ ಮಣ್ಣನಗೆದು
ಬೇರಮೆದ್ದು ಕರಿಣ ಕಾಂ-
ತಾರವ ಸೇರಿದೆ ಯಾಕೆ ಶ್ರೀಕೃಷ್ಣರಾಯ
ಕ್ರೂರದಾಡೆಯಗ್ರದಿ ವೈ-
ಯಾರದಿ ಭೂಮಿಯನೆತ್ತಿ
ಮೂರು ಲೋಕವ ಪೊರದೆ ಎಲೆ ಸತ್ಯಭಾಮೆ ೩

## ೪೪೫

ಶ್ರೀ ಗಣಪತಿಯ ಪದಾಬ್ಜಕೆ ನಮಿಸಿ
ರಾಗದಿಂದಲಿ ಶಾರದೆಯ ಸ್ಮರಿಸಿ
ನಾಗಭೂಷಣ ಪದಾಬ್ಜಯುಗಕೆ ತಲೆ
ವಾಗಿ ಬಾಲೆಯರಾಶೀರ್ವಾದದ ಪದಗಳ
ರಾಗದಿ ಪಾಡಿ ಪೊಗಳುವೆ ೧

ಸಾಲಿ ಸೀರೆಯನುಟ್ಟು ಸರಮುತ್ತ ಕಟ್ಟು
ಬಾಲಕಿಯರೊಳು ಕಟ್ಟಾಣಿ ನೀನಾಗು
ಮೇಲೆನೀ ಅಷ್ಟಪುತ್ರರನು ಪಡೆದು ಸುಖಿ
ಬಾಳು ಸ್ತ್ರೀಯರಿಗೆಲ್ಲಾ ದೊರೆಯಾಗಿರು
ಶ್ರೀ ಮೈಲಾರಲಿಂಗನ ಕೃಪೆಯಿಂದಾ ೨

ಪಲ್ಲಕ್ಕಿಯ ಸಾನಂದದೊಳೇರು
ಹಲ್ಲಣಿಸಿದ ಕರಿತುರಗವನೇರು
ಎಲ್ಲಾಭರಣವನಿಟ್ಟು ಸುಖದಿ ಪ್ರಾಣ

ದೊಲ್ಲಭಸಹಿತ ಸಂತೋಷದೊಳಿರು ಶ್ರೀ
ಕೊಲ್ಲೂರ ಮೂಕಾಂಬೆಯ ಕೃಪೆಯಿಂದಾ ೩

ಚಂದ್ರಕಸ್ತುರಿಯ ತಿಲಕಗಳನಿಟ್ಟು
ಚಂದದಿ ಕುಂಕುಮ ರೇಖೆಯನಿಟ್ಟು
ಇಂದೀವರನೇತ್ರಕೆ ಕಪ್ಪಿಟ್ಟು ಆ
ಚಂದ್ರಾರ್ಕವು ಸುಖಬಾಳು ಶೃಂಗೇರಿಯ
ಚಂದ್ರಮೌಳೀಶನ ಕೃಪೆಯಿಂದಾ ೪

ಅರಿಶಿನ ಚೂರ್ಣವನು ಲೇಪಿಸುತ
ಪರಿಮಳಗಂಧವ ಪಸರಿಸಿಕೊಳುತ
ಕರಿಯಮಣಿಯ ಮುತ್ತಿನ ಸರಗಳನಿಟ್ಟು
ಪರಮಸಂತೋಷದೊಳಿರು ಶ್ರೀ ಹಂಪೆಯ
ವಿರೂಪಾಕ್ಷನ ಕೃಪೆಯಿಂದ ೫

ಪರಿಮಳಿಸುವ ಪುಷ್ಪಸರಗಳ ಮುಡಿದು
ಗುರುಹಿರಿಯರ ಆಶೀರ್ವಾದವ ಪಡೆದು
ಹರುಷದಿ ಪುತ್ರಪೌತ್ರರ ಸಲಹುತ ಪತಿ
ಚರಣಸೇವೆಯ ಮಾಡಿ ಸುಖಮಿರು ಕುಕ್ಕೆಯ
ವರ ಸುಬ್ರಹ್ಮಣ್ಯನ ಕೃಪೆಯಿಂದ ೬

ಸರಸ್ವತಿಯಂತೆ ವಿದ್ಯಾವಂತೆಯಾಗು
ಸಿರಿಯಂತೆ ಸೌಭಾಗ್ಯವಂತೆ ನೀನಾಗು
ಅರುಂಧತಿಯಂತೆ ಪತಿವ್ರತೆಯಾಗುತ
ಪರಮಾನಂದದೊಳಿರು ಶ್ರೀ ಕೆಳದಿಯ
ಪುರದ ರಾಮೇಶನ ಕೃಪೆಯಿಂದ ೭

## ೪೪೬

ಶ್ರೀ ಗಣಪತಿಗೆ ವಂದಿಸಿ ಕೆಳದಿಯ ಪುರದ
ಭೋಗಮಂದಿರ ರಾಮೇಶ್ವರನ ರಂ
ಭೋಗಮಂದಿರ ರಾಮೇಶ್ವರನ ಸನ್ನುತಿಸುತ
ರಾಗದಿ ಪಾಡಿ ಪೊಗಳುವೆ ರಂ ೧

ವಾಣಿ ಪುಸ್ತಕ ವೀಣಾಪಾಣಿ ಪನ್ನಗನಿಭ
ವೇಣಿ ಕಲ್ಯಾಣಿ ಶುಕ ರಂ-
ವಾಣಿ ಶುಕವಾಣಿ ಬೊಮ್ಮನ
ರಾಣಿ ಸನ್ಮತಿಯ ಕರುಣಿಸು ರಂ ೨

ಧೃವ ಅಟ್ಟ ರೂಪಕ ಏಕತಾಳವು ಝಂಪೆ
ತ್ರಿವಡೆ ತಾಳಗಳೊಡಂಬಡಲು ರಂ-
ತ್ರಿವಡೆ ತಾಳಗಳೊಡಂಬಡೆ ಹೊಸ ಹರೆಯದ
ಯುವತಿಯರೊಲಿದು ಹಾಡಿದರು ರಂ ೩

ಗಂಗಾಧರ ಜಯ ಗೌರೀಪ್ರಿಯ ಜಯ
ಅಂಗಜಹರ ಜಯವೆನುತ ರಂ-
ಜಯವೆನುತಲಂಗನೆಯರು
ಪೊಂಗೋಲ ಪೊಯಿದು ಪಾಡಿದರು ರಂ ೪

ಕಪ್ಪುಗೊರಳ ಜಯ ಸರ್ಪಭೂಷಣ ಜಯ
ಮುಪ್ಪುರವನು ಜಯಿಸಿದವನೆ ರಂ-
ಜಯಿಸಿದನೆ ಜಯವೆಂದು
ಒಪ್ಪದೆ ಪಾಡುತಾಡಿದರೆ ರಂ ೫

ದಿಮಿದಿಮಿ ದಿಮಿಕಿಟ ತಕಕಿಟನ ಕಕಿಟ
ಕ್ರಮದಿ ನರ್ತಿಸುತಬಲೆಯರು ರಂ-

ಅಬಲೆಯರು ಚಿನ್ನದ ಕೋಲ
ಪ್ರಮುದದೊಳಾಡುತೊಪ್ಪಿದರು ರಂ ೬

ಅಚ್ಚ ಮುತ್ತಿನ ನಿಚ್ಚಳ ಸುಲಿಪಲ್ಲ
ಒಚ್ಚೇರೆಗಣ್ಣು ಬಾಲೆಯರು ರಂ–
ಬಾಲೆಯರು ಸಂಭ್ರಮದಿ ಮೈ
ಮೆಚ್ಚುತ ಕೋಲನಾಡಿದರು ರಂ ೭

ಭೃಂಗ ಕುಂತಳದ ಮತಂಗಜ ಗಮನದ
ರಂಗುದುಟಿಯ ರಮಣೆಯರು ರಂ
ರಮಣಿಯರು ಸೊಬಗನಾಂತು
ಹೆಂಗಳು ಪಾಡುತೊಪ್ಪಿದರು ರಂ ೮

ಜಲಜಗಂಧದ ನಳಿತೋಳ್ಗಳ ರಿಂಕಿದ
ನೆಲೆಮೊಲೆಗಳ ತುಂಬಿಗುರುಳ ರಂ
ಕರುಳ ಪದ್ಮಿನಿಯರು
ಚಳಕದಿ ಪಾಡುತಾಡಿದರು ರಂ ೯

ಪೊಂಬೊಗರಿಯ ತೆರದಿ ತುಂಬಿದ ಕುಚಗಳ
ಬಿಂಬಾಧರದ ಕಂಬುಗಳದ ರಂ
ಬಿಂಬಾಧರದ ಕಂಬುಗಳದ ಪದ್ಮಿನಿಯರು
ಸಂಭ್ರಮದಿಂದ ಪಾಡಿದರು ೧೦

ತೆಳುವಸುರಿನ ಕೊಬ್ಬಿದ ಕುಚಯುಗಳದ
ಕಲಹಂಸಗತಿಯ ಮೋಹನದ ರಂ
ಮೋಹನದ ಚಿತ್ತಿನಿಯರು
ಒಲಪಿನಂ ಪಾಡುತಾಡಿದರು ರಂ ೧೧

ಚಿನ್ನದ ಲತೆಯಂತೆ ಚೆನ್ನಾಗಿ ಬಳುಕುವ
ಸನ್ನುತಾಂಗದ ಶಂಖರವದ ರಂ

ರವದ ಶಂಖಿನಿಯರು
ಚೆನ್ನಾಗಿ ಪಾಡುತಾಡಿದರು ರಂ ೧೨

ಅಪಳ್ಗಣ್ಣ ಮಂದಗತಿಯ ಮದಗಂಧದ
ಶರೀರದ ಕೊಬ್ಬಿದ ಕೊರಳ ರಂ
ಕೊರಳಿನ ಹಸ್ತಿನಿ(ಯರು)
ತರುಣಿಯರೊಲಿದು ಪಾಡಿದರು ರಂ ೧೩

ಸಿರಿಮೊಗದೊಳು ಬೆಮರೊಗೆಯೆ ಮೇಲುದು
ಜಾರೆ ಕರದ ಕಂಕಣ ಝಣರೆನಲು ರಂ
ಕರದ ಕಂಕಣ ಝಣಝಣಝಣಝಣರೆನೆ
ತರಳೆಯರ್ಪಾಡುತಾಡಿದರು ರಂ ೧೪

ದುಂಡುಮುತ್ತಿನ ಹಾರವಲುಗಲು ವಜ್ರದ
ಕುಂಡಲಗಳು ನರ್ತಿಸಲು ರಂ
ನರ್ತಿಸಲಂಗನೆಯರ
ತಂಡ ಸಂಭ್ರಮದೊಳಾಡಿದರು ರಂ ೧೫

ಕರುಣಸಾಗರ ಜಯ ಕರಿಚರ್ಮಾಂಬರ ಜಯ
ವರದ ರಾಮೇಶ ಜಯವೆಂದು ರಂ–
ವರದ ರಾಮೇಶ್ವರ ಪಾರ್ವತಿ ಜಯವೆಂದು
ಹರುಷದಿ ಕೋಲನಾಡಿದರು ೧೬

## ೪೪೭

ಹೂವ ಕೊಡೆ ದೇವಿ ಹೂವ ಕೊಡೆ
ಯಾವಾಗಲೂ ನಿಮ್ಮ ಸಿರಿಮುಡಿಯೊಳಗಿರ್ಪ ಪ

ವರಮಹಾಲಕ್ಷ್ಮಿ ನಿಮ್ಮ ಸಿರಿಮುಡಿಯನೆ ಕಟ್ಟಿ
ಪರಿ ಪರಿ ಧೂಪ ಧೂಮಗಳನಿಕ್ಕಿ
ಪರಿಮಳಿಸುವ ಸಂಪಿಗೆಯ ಪೂಸರವ ಸಿಂ–
ಗರಿಸಿರಲಾಮಾಳಿಕೆಯೊಳು ಸಂಪಿಗೆ ಹೂವ ೧

ಮರುಗ ಮಲ್ಲಿಗೆ ಜಾಜಿ ಸುರಗಿ ಸೇವಂತಿಗೆ
ಸರಸಿಜ ಮೊದಲಾದ ಕುಸುಮದಿಂದ
ಪರಿಮಳಿಸುವ ನಿಮ್ಮ ಸಿರಿಮುಡಿಯೊಳಗಿರ್ಪ
ಅರಳಿದ ಮಲ್ಲಿಗೆ ಹೂವ ಕಂಡೆ ಹೂವ ೨

ವ್ಯೋಮಗಂಗೆಯೊಳಿಂದ ಹೇಮಕಾಮರಸವ
ಕಾಮಿನಿಯರು ಕೊಯ್ತಂದದನು
ಶ್ರೀ ಮಹಾದೇವಿ ನಿಮ್ಮ ತುರುಬಿಗೆ ಮುಡಿಸಿರ–
ಲಾ ಮಹಾಕುಸುಮ ಮಾಲಿಕೆಯೊಳು ತಾವರೆ ಹೂವ ೩

ಮುತ್ತಿನ ಲಹರಿಯ ರತ್ನದ ರಾಗಟೆಯ
ಸುತ್ತ ಮುತ್ತಲೂ ರಾರಾಜಿಸುವ
ಪುತ್ಥಳಿಯ ಚಿನ್ನದಂತೆ ಘಮಘಮಿಸುವ
ಉತ್ತಮವಾದ ಸುವರ್ಣದ ಕೇದಗೆ ಹೂವ ೪

ಜಾತಿ ರತ್ನದ ನಡುವೆ ಜ್ಯೋತಿಯ ತೆರನಂತೆ
ನೂತನವೆನಿಸಿ ಪ್ರಜ್ವಲಿಸುತಿಹ
ಶಾತಕುಂಭದ ಚೌರಿಯ ಮೇಲೆ ಮುಡಿಸಿದ
ಜಾತಿಮಲ್ಲಿಗೆ ಸಂಪಿಗೆ ಸೇವಂತಿಗೆ ಹೂವ ೫

ಇಂದೀವರದಳನಯನೆ ಶುಭಪ್ರದೆ
ಇಂದು ನಿಭಾನನೆ ಹೂವ ಕೊಡೆ
ಮಂದಗಮನೆ ನಿಮ್ಮ ತುರುಬಿನೊಳೊಪ್ಪುವ
ಮಂದಾರದ ಮೋಹನ ಮಾಲಿಕೆಯೆಂಬ ಹೂವ ೬

ಚಂದ್ರಗಾವಿಯ ಸೀರೆ ಚೆಲುವ ಮುತ್ತಿನಸರ
ದಿಂದಲೆಸೆವ ದೇವಿಹೂವ ಕೊಡೆ
ಮುಂದಲೆ ಮುತ್ತಿನ ಸರದ ಮೇಲೊಪ್ಪುವ
ಬಂಧುರಪೂಗಪುನ್ನಾಗ ಪಾರಿಜಾತದ ಹೂವ ೭

ದೇವಿ ನಿಮ್ಮನು ಪೂಜೆಗೈದು ಮೆಚ್ಚಿಸಬಲ್ಲ
ನಾವನೀ ಧರೆಯೊಳುಹೂವ ಕೊಡೆ
ಪಾವನಾತ್ಮಕಿಯ ಪರಾಕ ಮಾಡದೆ ವರ–
ವೀವ ಸಮಯವಿದು ಹೂವ ಕೊಡೆ ಹೂವ ೮

ಮುತ್ತೈದೆತನವನು ನಿತ್ಯ ಸೌಭಾಗ್ಯವ
ಉತ್ತಮ ಧನಕನಕಾಂಬರವ
ಪುತ್ರ ಸಂತಾನವ ಕೊಡುವೆನೆನುತ ಕರ–
ವೆತ್ತಿ ಅಭಯವಿತ್ತು ಹೂವ ಕೊಡೆ ಹೂವ ೯

ಎಂದೆಂದೂ ಈ ಮನೆಗೆ ಕುಂದದ ಭಾಗ್ಯವ
ಚಂದವಾಗಿಹ ಛತ್ರಚಾಮರವ
ಚಂದ್ರ ಸೂರ್ಯರ ಪೋಲ್ವ ನಂದನರನುದಯ–
ದಿಂದಲಿ ಕೊಟ್ಟು ರಕ್ಷಿಪನೆಂದು ಸೂಡಿದ ಹೂವ ೧೦

ವರದಾನದಿಯ ತೀರವಾಸ ಶ್ರೀ ಕೆಳದಿಯ
ಪುರವರಾಧೀಶ ರಾಮೇಶ್ವರನ
ಪರಮ ಪಟ್ಟದ ರಾಣಿ ಪಾರ್ವತಿ ನಿಮ್ಮಯ
ಸಿರಿಮುಡಿಯೊಳಗಿರ್ಪ ಹೂವ ಕೊಡೆ ಹೂವ ೧೧

## ಲೋಕನೀತಿಯ ಪದಗಳು

### ೪೪೮

ಅನ್ನದಾನವನ್ನೆ ಮಾಡು ಕನ್ಯದಾನವನ್ನೆ ಮಾಡು
ನಿನ್ನ ನಂಬಿದರ ಪೊರೆದುನ್ನತ ಹರ್ಷದಿ ಬಾಳು
ಸನ್ನುತ ಸರ್ವಲೋಕಗಳನ್ನು ರಕ್ಷಿಸುವನಾಗ ಪ್ರ-
ಸನ್ನ ಮೂರುತಿಯಾಗು
ರನ್ನದ ರಾಶಿಗಳನ್ನು ಚಿನ್ನದ ಆಭರಣಗಳನ್ನು
ಭೂಸುರರಿಗಿತ್ತು ಮನ್ನಿಸು ಉದಾರನಾಗು
ಮನ್ನೆಯರೆಲ್ಲರು ಬಂದು
ನಿನ್ನನೋಲೈಸಲೆಂದು ಅಪರ್ಣೆಪರಿಸಿದಳು ೧

ಕೋಟಿ ಗೋದಾನವ ಮಾಡು ಸಾಟಿಯಿಲ್ಲದಂಥಾ ಪಂಚ
ಕೋಟಿ ಗಜದಾನ ಶತಕೋಟಿಯಶ್ವದಾನಗಳ
ಮೀಟಾದ ಬ್ರಾಹ್ಮರಿಗಿತ್ತು ಕೀರ್ತಿವಂತನಾಗು ಕಿ-
ರೀಟ ಶೌರ್ಯದೊಳಾಗು ಮೀಟಾದ ಮಂತ್ರಿಗಳ ಕಿ-
ರೀಟ ರತ್ನಕಾಂತಿಗಳ ಕೋಟಿ ನಿನ್ನ ಪಾದದಲ್ಲಿ
ಧಾಟಿಯಾಗಿರುವನಾಗು
ಲೂಟಿಸಿ ವೈರಿಗಳನು ಗೋಟುಗೊಳಿಸುವ ಶಶಿ
ಜೂಟ ಭಕ್ತನಾಗು ೨

ಇತ್ತೆರದೆ ಬೀಸುತಿಹ ಮುತ್ತಿನ ಚಾಮರ ಶ್ವೇತ
ಛತ್ರ ಸೀಗುರಿಗಳ ಮೊತ್ತದ ಸಾಲೊಳಗೆ ಒ-
ಪ್ಪುತ್ತಲಿರುವವನಾಗು ಸತ್ಯವಂತನಾಗು ಸುವ್ರತ ನೀನಾಗು
ಪೆತ್ತವರ ನೋಡಿ ನಲಿವುತ್ತಿರಲು ಭೂಸುರರು
ಮುತ್ತಿನಕ್ಷತೆಯನಾಂತು
ಪೃಥ್ವಿಯ ವೊಳಗೆಲ್ಲಾ ಸ-
ರ್ವೋತ್ತಮ ಪುರುಷನಾಗೆನುತ್ತ
ಮಸ್ತಕದಿ ತಳಿವುತ್ತ ಪರಸಿದರು ೩

ಇಂದ್ರನಾಗು ಭೋಗದೊಳು ಸತ್ಯವಾಕ್ಯದೊಳು ಹರಿ-
ಶ್ಚಂದ್ರನಾಗು ಪಾಲನೆಯ ಮಾಡುವುದರೊಳಗೆ ಉ-
ಪೇಂದ್ರನಾಗು ಬುದ್ಧಿ ಕೌಶಲದೊಳು ತಿಳಿಯಲು ನಾ-
ಗೇಂದ್ರ ನೀನಾಗು
ಚಂದ್ರನಾಗು ಶಾಂತಿಯೊಳಗೆಂದು ವಂದಿಮಾಗಧರ
ವೃಂದ ಕರವೆತ್ತಿ ಜಯವೆಂದು ಪೊಗಳುತ್ತಿರಲಾ-
ಚಂದ್ರಾರ್ಕವು ಸೌಖ್ಯದಿ ಬಾಳೆಂದು ಸಾನಂದದೊಳಾಗ
ಇಂದಿರೆ ಪರಸಿದಳು ೪

ಧೀರನಾಗುದಾರನಾಗು ಸೂರಿಜನವಾರಕೆ ಮಂ-
ದಾರನಾಗು ಸಂಗರ ಶೂರನಾಗು ವೈರಿ ಜ-
ಝ್ಝೂರನಾಗು ಮಣಿಮಯ ಹಾರನಾಗು
ವೀರಾಧಿವೀರ ನೀನಾಗು
ಭೂರಮಣನಾಗು ಮಂತ್ರಿವಾರ ಸಂರಕ್ಷಕನಾಗು
ಕಾರುಣ್ಯಸಾಗರನಾಗು ಕಾಮಿತಫಲಿದನಾಗು
ಶ್ರೀ ರಾಮೇಶನಪಾದಾಬ್ಜ ವಾರಿಜ ಭಕ್ತನಾಗೆಂದು
ಶಾರದೆ ಪರಸಿದಳು ೫

## ೪೪೯

ಇನಿಯಗೆನ್ನೊಡನೆ ಪ್ರೀತಿಯೋ ಆ ತರುಣಿಯೊಳ್
ಘನತರ ಪ್ರೀತಿಯೊ ಪೇಳೆನಗೆ
ಕನಕಾಂಗಿಯವನೆನಿಸಿದ ಚಾರಿತ್ರವ
ನಿನಗರುಪುವೆಯದ ತಿಳಿದೆನಗುಸುರೆ ಪ

ಸುರಗಿ ಸಂಪಿಗೆ ಮಲ್ಲಿಗೆ ಜಾಜಿ ಮೊದಲಾದ
ಪರಿಪರಿ ಪುಷ್ಪಮಾಲೆಗಳಾಕೆಗೆ
ತರುಣಿ ಕೇಳಲ್ಲಿ ತಾ ಪುಷ್ಪದ ಸರಗಳ
ಕರುಣದಿಂದೆನ್ನ ಬಳಿಗೆ ಕಳುಹಿದ ಮೇಲೆ ೧

ನಾನಾ ವಿಧಧ ವಿಚಿತ್ರಾಂಬರಗಳ
ಆ ನಳಿನಾಕ್ಷಿಗೆ ಕಳುಹಿದನೆ
ಮಾನಿನಿಯೊಂದೆ ವರ್ಣದ ವಸ್ತ್ರಗಳ ಸು
ಮ್ಮಾನದಿಂದೆನ್ನ ಬಳಿಗೆ ಕಳುಹಿದ ಕಾಣೆ ೨

ಏಕಾವಳಿ ಪಂಚರತ್ನದ ಸರಗಳ
ನೇಕ ಹಾರಗಳ ಶೃಂಗಾರವಾಕೆಗೆ
ರಾಕೇಂದುಮುಖಿ ನನಗೊಂದೆ ಹಾರವುಯಿದ
ಶ್ರೀ ಕೆಳದಿ ರಾಮೇಶ್ವರ ತಾನೆ ಬಲ್ಲ ೩

## ೪೫೦

ಎಂಥವನೆ ಆಗಲಿ ಪತಿಯೆ ಸಾಕ್ಷಾತ್ ಶಿವನು
ಪತಿಯಿಲ್ಲದೇ ಬೇರೆ ಗತಿಯಿಲ್ಲ ಸತಿಗೆ ಪ

ಪತಿತನಾಗಲಿ ಪಾತಕಿಯಾಗಿರಲಿ
ಅತಿಮುದುಕನು ಪ್ರಾಯದವನಾಗಿರಲಿ ೧

ಬಡವನಾಗಲಿ ಭೂಪತಿಯಾಗಿರಲಿ
ಕುಡುಕನಾಗಲಿ ಕಡುಗೋಪಿಯಾಗಿರಲಿ ೨

ವರ ಕೆಳದಿಯ ರಾಮೇಶ್ವರನ ಪದವನು
ಸ್ಮರಿಸಿದಂಥ ಗಂಡ ಬರುವನು ಮುನ್ನ ೩

## ೪೫೧

ಎಂಥಾ ಜಾಣೆಯೋ ಸುಪ್ರವೀಣೆಯೋ ಮುನ್ನಾಕೆ
ಎಂಥಾ ನೋಂಪಿಯನೋಂತ ಫಲವೋ

ಕಾಂತನ ಪರಕೀಯ ಕಾಂತೆಯೆಡೆಗ ಬಿಡ–
ದಂತೆ ಸಂತಸದೊಳೇಕಾಂತ ಸುಖದೊಳಿರ್ಪ ಪ

ನುತ ಹಂಸತೂಲತಲ್ಪದೊಳು ನಾನಾ ಬಂಧ
ಗತಿಯಲಿ ಕಾಮಕೇಳಿಯನೆಸಗಿ
ರತಿಸುಖಪಾರವಶ್ಯದೊಳೊಂದು ವರುಷದ
ಮಿತಿಯನು ತ್ರುಟಿಕಾಲವೆಂದುಸುರುವಳು ತಾ ೧

ಹೆಣ್ಣು ಜನ್ಮದಿ ಹುಟ್ಟಿದುದಕೆ ಫಲವದು
ಕನ್ನೆಯರೊಳಗೆ ಕಟ್ಟಾಣಿಯಾಕೆ
ಮುನ್ನೆಷ್ಟುಗಾಲ ತಪವ ಮಾಡಿ ತಾನಿಂಥಾ
ಪುಣ್ಯವ ಪಡೆದಳಾಕೆಯ ಜನ್ಮ ಸಫಲವೋ ೨

ವರುಷವಾಗಲಿ ಒಂದು ದಿನವಾದರಾಗಲಾ
ತರುಣಿಯ ಭೋಗದಂತಿರಬೇಡವೆ
ಇರುಳು ಹಗಲು ಕಾಣದಂತೆ ಶ್ರೀ ಕೆಳದಿಯ
ಪುರದ ರಾಮೇಶನೊಳ್ಪರಸದೊಳಿರುವಳಿಂ ೩

## ४೫೨

ಏತಕೆ ಮರುಳಾದೆಯೋ ಆ ಹೆಣ್ಣಿನಿ–
ನ್ನೇತಕೆ ಭ್ರಮಿಸಿದೆಯೋ
ಜಾತಿನಾಯಕಿಯರೊಳ್ಕತೆಯೆನುತಲಿ ಬಿ–
ಟ್ಟ ತರುಣೀ ಸುಮ್ಮನೇತಕೆ ಮನಸೋತಿನ್ ಏತಕೆ ಪ

ರೂಪಿನೊಳಗೆ ಚಂದವೆ ಕಾಮಶಾಸ್ತ್ರ ಕ–
ಲಾಪ ಬಲ್ಲವಳೇ
ತಾ ಪತಿವ್ರತೆ ಪರರೆಲ್ಲಾ ಜಾರೆಯರೆನು–
ತೀಪತಿ ಬೊಗಳುವ ಪಾಪಿ ಕುರೂಪನೀಂ ೧

ಗುಣದೊಳಗೊಳ್ಳಿದಳೇ ಕಲೆನೆಲೆಗಳ
ಭಣಿತೆಯ ಬಲ್ಲವಳೇ
ಎಣಿಸಿ ನೋಡಿದರೇನು ಹುರುಳಿಲ್ಲ ಚಲವಿಲ್ಲ
ತೃಣಕಿಂತ ಕಡೆಯಾದ ಬಣಗು ಭಿಕಾರಿ ನೀಂ ೨

ಬರಲಿದಿರೇಳುವಳೆ ಪದವ ತೊಳೆದು
ಸೆರಗಿನಿಂದೊರಸುವಳೇ
ತರುಣಿಯರುಗಳ ಮನಸ ಕಂಡವರುಂಟೆ
ದುರುಳೆಯೆಂಬುದನೆಲ್ಲಾ ರಾಮೇಶ ಒಲ್ಲ ೩

## ೪೫೩

ಏನನಾದರೂ ಬರೆಯೋ ಎನ್ನ ಪಣೆಯೊಳಗೆ
ನೀನಿಷ್ಟ ಬರೆಯಬೇಡವೋ ಮೂಢ ವಿಧಿಯೇ ಪ

ಬಾಲತನದಲಿ ಬಹಳ ಭಾಗ್ಯ ಸಂಪದಗಳನು
ಮೇಲೆ ಯೌವನ ಬರಲು ಬಡತನವನು
ಲೋಲಾಕ್ಷಿಯರಿಗೆ ಮರುಳಾಗಿ ಸಂಚರಿಪುದನು
ಹಾಲು ಅನ್ನವನಿಕ್ಕಿದವರಿಗೆ ಮುನಿವುದನು ೧

ಮುಪ್ಪಿನಲಿ ಯೌವನದ ಸ್ತ್ರೀಯ ಸಂಭೋಗವನು
ತುಪ್ಪವಿಲ್ಲದ ಭೋಜನದ ರುಚಿಯನು
ಅಪ್ಪುತಿಹ ಮಕ್ಕಳಿಲ್ಲದ ಕುಸಂಸಾರವನು
ಕಪ್ಪುಗೊರಲನ ನೆನೆಯದೇ ದಿನವ ಕಳೆವುದನು ೨

ಪರರೊಡವೆಯನು ತಿಂದ ಶರೀರವನೆ ಪೊರೆವುದನು
ಪರರ ನಿಂದೆಯ ಮಾಡಿ ಬಾಳುವುದನು
ವರ ಕೆಳದಿ ರಾಮೇಶ ನಿನ್ನ ಪಾದಾಂಬುಜವ
ಸ್ಮರಿಸಿದಂತನ್ಯಮತದಲ್ಲಿ ಸಂಭವಿಪುದನು ೩

## ೪೫೪

ಕವಿತಾರಸದ ಸೊಬಗ ಕವಿಗಳೆ ಬಲ್ಲರಲ್ಲದೆ
ಯುವತಿಯರು ಕವಿಯ ಹೃದಯವ ಕಂಡರುಂಟೆ ಪ

ಕಾಗೆ ಬಲ್ಲುದೆ ದಿವ್ಯಚೂತಫಲರಸದಿನಿಯ
ಗೂಗೆ ಬಲ್ಲುದೆ ಸೂರ್ಯನುದಯವನ್ನು
ರೋಗಿ ಬಲ್ಲನೆ ಸುಧಾರಸದ ಸುಸ್ವಾದವನು
ಭೋಗಿ ಬಲ್ಲನೆ ಯೋಗಮಾರ್ಗ ರೀತಿಯನು ೧

ಕಣ್ಣಿಲ್ಲದವಗೆ ಕನ್ನಡಿಯಿದ್ದು ಫಲವೇನು
ಹೊನ್ನಿದ್ದರೇನು ಲೋಭಿಯ ಕೈಯಲಿ
ಹೆಣ್ಣಿದ್ದರೇನು ಪೌರುಷವಿಲ್ಲದ ನರಗೆ
ಪುಣ್ಯಹೀನಗೆ ಕನಕಶಿಲೆಯಿದ್ದರೇನು ೨

ಗಾನರಸಮಾಧುರ್ಯವನು ಬಧಿರಬಲ್ಲನೆ
ಆನೆ ಬಲ್ಲುದೆ ಚಂದನದ ರಸವನು
ಮಾಣಿಕದ ಮಾಲಿಕೆಯ ಮರ್ಕಟನು ಬಲ್ಲುದೆ
ನೀನೊಬ್ಬ ಬಲ್ಲೆ ಕೆಳದಿ ರಾಮೇಶಲಿಂಗ ೩

## ೪೫೫

ನಾ ಕರೆವುದಕಿಂತ
ತಾನಾಗಿ ಕರೆವಳ ಕಂಡರೆ ಸೊಗಸು
ನಾನೆ ನೀನು
ನೀನೇ ನಾನು
ಏನನುಮಾನವೋ ಬಾರೆಂದೆನುತಲಿ ಪ

ಕಣ್ಣ ಸನ್ನೆಯ ಮಾಡಿ ಕರೆವುತ
ಬಣ್ಣಿಸಿ ಬೇಟವ ತೋರುತ್ತ
ನಿನ್ನನಾ ಬಿಡೆನೆಂದು ನಗುತ ಮಾತಾಡುತ ೧

ನೆಂಟರಿಷ್ಟರು ಕಾಣದಂದದಿ ಬಂದು
ಗಂಟೆರಡನು ಸಡಲಿಸುತಲಿ ನಿಂದು
ಬಂಟನಾದರೆ ನೀನೆರೆಬಾರೆಂದು ೨

ಕುಂಭ ಕುಚಂಗಳ ತೋರುತ್ತ
ತಾಂಬೂಲವ ಹಸಮಾಡುತ್ತ
ನಂಬುಗೆ ರಾಮೇಶ್ವರನಿದಕೆನುತ ೩

## ೪೫೬

ಮನವೇ ಸುಮ್ಮನೆ ಇರಬೇಡ ಅರೆನಿಮಿಷವಾದರು
ಮನವೇ ಸುಮ್ಮನೆ ಇರಬೇಡ ಪ

ಕನಸಿನಂತಿಹ ಸಂಸಾರವ ನೆಚ್ಚಿ
ಘನತರ ಪಾಪಕೆ ಗುರಿಯಾಗಬೇಡ ||ಅ||

ರೊಕ್ಕದಾಸೆಯ ಬಿಡಬೇಕು ಸ್ತ್ರೀ ಮೋಹಕೆ
ಸಿಕ್ಕದೆ ನಡಕೊಳಬೇಕು
ಅಕ್ಕರು ದೇಹದೊಳಿರದಿರಬೇಕು
ಶಕ್ತಿಯ ಮೀರಿ ಧರ್ಮವ ಮಾಡಬೇಕು
ಮುಕ್ಕಣ್ಣ ಹರನ ಪೂಜಿಸಬೇಕು
ಮುಕ್ತಿ ಮಾರ್ಗವ ಪಡಕೊಳಬೇಕು ೧

ಸರ್ವನಿಸ್ಪೃಹನಾಗಬೇಕು ಸಂಸಾರದಿ
ಚರಿಸುತಲೂ ಇರಬೇಕು

ಗುರುಹಿರಿಯರ ಕಂಡು ನಡೆಯಲು ಬೇಕು
ಪರರ ನಿಂದಿಸಿ ನುಡಿಯದೆ ಇರಬೇಕು
ಬರೆ ಸುಖ ದುಃಖವು ಸಮಗಾಣಬೇಕು
ಇರುಳು ಹಗಲು ಶಿವ ಶಿವ ಎನ್ನಬೇಕು ೨

ತನ್ನ ತಾನೆ ತಿಳಿಯಬೇಕು ತೋರುವ ಲೋಕ
ವನ್ನು ದೃಶ್ಯವೆಂದಿರಬೇಕು
ತನ್ನಂತೆ ಸಕಲರ ನೋಡಲು ಬೇಕು
ಮಾನ್ಯರ ಕಂಡರೆ ಮನ್ನಿಸಬೇಕು
ಅನ್ಯನಾದರು ಹಿತವನೆ ಮಾಡಬೇಕು
ಪ್ರಸನ್ನ ರಾಮೇಶನನೆನೆಹಿರಬೇಕು ೩

ವಣಗಿದ ಕಂಭದೊಳೊಗೆದು
ಬಣಗು ದಾನವನ ಗೆಲಿದು
ಕುಣಿಕುಣಿದಾಡಿದೆಯಂತೆ ಯಾಕಯ್ಯ ಶ್ರೀಕೃಷ್ಣ
ಸೆಣಸಿದ ರಾಕ್ಷಸನ ಗೆಲಿದು
ವಿನಯದೆ ಪ್ರಹ್ಲಾದಗೊಲಿದು
ಅಣಿಯರ ಲೋಕವ ಕಾಯ್ದೆ ಎಲೆಸತ್ಯಭಾಮೆ ೪

ಬಲು ಚಂದವಾಯಿತಯ್ಯ ಲೋಕಾ-
ವಳಿಯೊಳು ದೊಡ್ಡವನಯ್ಯ
ಬಲಿಯ ಕೂಡೆ ದಾನವ ಬೇಡುವರೆ ಕೃಷ್ಣ
ಬಲಿಯ ದಾನವನ್ನೇ ಬೇಡಿ
ಇಳೆಯ ಮೂರಡಿಯ ಮಾಡಿ
ಸಲಹಿದೆ ಸರ್ವಸುರರ ಎಲೆ ಸತ್ಯಭಾಮೆ ೫

ಧರಣೀಪಾಲಕರ ಗೆಲಿದ
ಗರ್ವವಿರಲಿ ಹೆತ್ತತಾಯ
ಶಿರವನರಿದ ದುರುಳರುಂಟೆ ಹೇಳಯ್ಯ ಕೃಷ್ಣ
ಗುರುವಚನವನ್ನು ಮೀರೆ

ನರಕಲೋಕವೆಂದು ಕಾಯ
ಶಿರವನರಿದು ಮರಳಿ ಪಡೆದ ಎಲೆ ಸತ್ಯಭಾಮೆ ೬

ಮೂರು ಲೋಕವರಿಯೆ ಸೀತಾ
ನಾರಿಯ ಕಳೆದುಕೊಂಡು
ಊರೂರ ತಿರುಗಿದೆಯಂತೆ ಯಾಕಯ್ಯಾ ಕೃಷ್ಣ
ನೀರೊಳು ಸೇತುವ ನಿಲಿಸಿ
ವೀರ ರಾವಣನ ಜಯಿಸಿ
ವಾರಿಜಾಕ್ಷಿಯ ತಂದೆನೆ ಎಲೆ ಸತ್ಯಭಾಮೆ ೭

ದುರುಳ ಪರಮಹಂಸರಂತೆ
ಕರದಿ ನೇಗಿಲ ಹಿಡಿದೆ
ಶರಖಡ್ಗಗಳಿಲ್ಲವೇನೋ ಶ್ರೀಕೃಷ್ಣರಾಯ
ಸುರರಿಪು ಪ್ರಲಂಬಾದಿಗಳ
ಶಿರವನರಿದು ಜೈಸಿದಂಥಾ
ಗುರುತಿನ ಆಯುಧ ಕಾಣೆ ಎಲೆ ಸತ್ಯಭಾಮೆ ೮

ಮಂದಿಯ ಮುಂದೆ ಬತ್ತಲೆ
ನಿಂದು ಓಡಾಡಿದೆಯಂತೆ
ಚಂದವಾಯ್ತು ನಿನ್ನ ನಡತೆ ಹೇಳೆಲೋ ಕೃಷ್ಣ
ಹಿಂದೆ ತ್ರಿಪುರದ ನಾರೀ
ವೃಂದವ ಮೋಹಿಸಿ ಸರ್ವ
ವೃಂದಾರಕರ ಪೊರದೆ ಎಲೆ ಸತ್ಯಭಾಮೆ ೯

ದೊರೆತನವು ನಿನ್ನದೆಂದು
ಧರಣೀದೇವತೆಯು ಬಂದು
ಮೊರೆಯಿಟ್ಟಳದೇಕೋ ಪೇಳೋ ಶ್ರೀಕೃಷ್ಣರಾಯ
ತುರಗವನೇರಿ ಖಡ್ಗವ
ಧರಿಸಿ ಯವನ ಸೈನ್ಯವನ್ನು
ಮುರಿದು ಧರೆಯ ಪೊರೆದೆ ಕಾಣೆ ಎಲೆ ಸತ್ಯಭಾಮೆ ೧೦

ಇಂತು ಕೇಳ್ದ ಸತ್ಯಭಾಮಾ
ಕಾಂತೆಯ ಮಾತಿಗೆ ಮೆಚ್ಚಿ
ಕಾಂತೆಯರೊಳು ಕಟ್ಟಾಣಿ ಬಾರೆಂದು ಕರೆದು
ಕಂತುಜನಕ ಕೆಳದಿಪುರದ
ಕಾಂತ ಗೋಪಾಲಕೃಷ್ಣನು
ಸಂತಸವ ಮಾಡಿದನಿನ್ನೆಂತು ಪೇಳ್ವೆನೆ ೧೧

## ೪೫೭

ಯಾಕಿಷ್ಟು ದಯವಿಲ್ಲ ಎನ್ನಮೇಲೆ
ನೀ ಕರುಣಿಸಿದರಾಗದ ಕಾರ್ಯವುಂಟೆ ಪ

ಬಾಲೆಗೊಲಿದು ಹಾಲಕುಡಿದವನೆಂದೆನೆ
ಸೂಳೆಯ ಮನೆಗೆ ನಾ ಹೋಗೆಂದೆನೆ
ಲೋಲಾಕ್ಷಿಯ ಕುಚದೊಳೆ ಮಾತಾಡೆಂದೆನೆ
ಚೋಳನಂತೆ ಹೊನ್ನ ಮಳೆಯ ಕರೆಯೆಂದೆನೆ ೧

ಊರುಗಲ್ಲೊಳು ಕನ್ನವ ಕೊಯಿದನೆಂದನೆ
ಊರನೆ ಕೈಲಾಸಕ್ಕೊಯಿಯೆಂದೆನೆ
ಕ್ರೂರ ಬಾಣನ ಬಾಗಿಲ ಕಾಯ್ದನೆಂದೆನೆ
ನೀರ ಮಂಡೆಯೊಳು ಪೊತ್ತವನೆಂದು ಪೇಳ್ದೆನೆ ೨

ಮಲ್ಲಗಾಳಗವನು ಮಾಡಿದನೆಂದೆನೆ
ಬಿಲ್ಲಿನಿಂ ಬಡಿಸಿಕೊಂಡವನೆಂದೆನೆ
ಎಲ್ಲರರಿಯೇ ತಿರಿದುಂಡವನೆಂದನೆ
ಕಲ್ಲುಮನವೇ ಕೆಳದಿರಾಮೇಶ್ವರಲಿಂಗ ೩

## ೪೫೮

ಸುಖವಾದರುಬರಲಿ
ಈ ಕ್ಷಣ ದುಃಖವಾದರು ಬರಲಿ
ಅಕಲಂಕ ಚರಿತನು ಸಕಲ
ರಕ್ಷಕನು ಮಕರಾಂಕರಿಪು ಶಿವ
ಸುಖನಾಗಿರುತಿರೆ ಪ

ಬಾಳಬಲ್ಲವನೆನಲಿ
ಮೂರ್ಖನು ಖೂಳನು ಇವನೆನಲಿ
ಕಾಲಕಾಲ ಕರುಣಾಲವಾಲನ
ನೀಲಕಂಠನ ನಾಮ ನಾಲಗೆಯಲ್ಲಿರೆ ೧

ನಿಂದಿಸಿದವರುಗಳು
ಗುರುಗಳು ಬಂಧು ಬಾಂಧವರವರು
ಸಿಂಧುರ ಬಂಧುರ ಚರ್ಮಾಂಬರನ–
ರ್ಧೇಂದುಮೌಳಿ ತಾ ಬಂದು ರಕ್ಷಿಸುತಿರೆ ೨

ದೊರೆ ಮುನಿದರದೇನು
ಮರ್ತ್ಯ ಜರೆದು ನುಡಿದರೇನು
ಸುರರು ದಾನವರು ಮುನಿದರಂಜುವೆನೆ
ವರ ಕೆಳದಿಯ ರಾಮೇಶ್ವರನು ರಕ್ಷಿಸುತಿಹರೆ ೩

# ಸಂಪ್ರದಾಯದ ಹಾಡುಗಳು

## ೪೫೯

ಅವಳೊಡನೆ ಮುನಿವ ಬಗೆಯೇನೋ ಪೇಳೋ ಪ

ಸಿರಿಮುಡಿಗೆ ಸಂಪಿಗೆಯ ಕೊರಳ್ಗೆ ಕಸ್ತೂರಿಯನು
ವರಫಾಲದೆಡೆಗೆ ಕುಂಕುಮ ರೇಖೆಯ
ಧರಿಸಿ ಪಾಟೀರ ಕರ್ದಮವನಂಗಕೆ ತಿವುರಿ
ಕರದಿ ವೀಣೆಯ ಪಿಡಿದು ನಲಿದು ಪಾಡುವಳು ೧

ವರರತ್ನ ಕಂಕಣವು ಬಾಹು ಭೂಷಣವಾಯ್ತು
ಮಿರುಪಮುದ್ರಿಕೆ ಸ್ವರ್ಣ ಕಟಕವಾಯ್ತು
ಕರದ ಕೊನೆಯೊಳಗೆ ದೋರೆಯವನಿಟ್ಟಳು ತನ್ನ
ಬೆರಳ್ಗೆ ವೈಢೂರ್ಯದುಂಗುರವ ಧರಿಸಿದಳು ೨

ಸುರರ ದಾನವರ ತೌರವರನಾಕಾಶವನು
ಉರಗತತಿಯನು ಕುಂಭಸಂಭವನನು ಹರನ
ಹರಸುತರ ಸುರಗಿರಿಯ ಕೋಪಿಸಿ ಕೆಳದಿ
ಪುರದ ರಾಮೇಶ ನಿನ್ನ ಬರವ ಹಾರೈಸುವಳು ೩

## ೪೬೦

ಇನಿಯಗೆನ್ನೊಡನೆ ಮುನಿಸೋ ಪ್ರೀತಿಯೋ ಪೇಳೆ
ವನಜಾಕ್ಷಿಯವನೆಸಗಿದುದಾ ಪೇಳ್ವೆನೆ ಪ

ಮೃಗಮದ ತಿಲಕವ ಪಣೆಗೆ ತಾನಿಡಲಿಲ್ಲ
ಅಗಿಲುಗಂಧವ ಮೈಗೆ ತೀಡಲಿಲ್ಲ ಸೊಗಸು ಸಂಪಿಗೆ ಸರವ
ಮುಡಿಸಿ ಝುಗಝುಗಿಪ ಮುತ್ತಿನ ಸರವ
ಹಾಕದೆ ಎನ್ನ ಮುಗುಳು ಮೊಲೆಗೆಸೆಳ್ಳುಗುರಿಕ್ಕದಿದ್ದ ಮೇಲೆ ೧

ಗುರುಕುಚರ್ಚಿತ ಮೃಗಮದ ಪತ್ರವ ಸೆರಗಿನಿಂದೊರಸಿದನೆ
ಕುಂಕುಮಗಂಧವ ಭರದಿ ಲೇಪಿಸಿದನೆ ತಾನೆ
ತಾಂಬೂಲವ ಹರುಷದಿ ಕರದಿತ್ತನೆ
ಆಲಿಂಗಿಸಿ ಪರಮ ಸಂತೋಷದಿ ತಿರುಗಿ ನೋಡಿದನೆ ೨

ಧರಿಸಿದ ಮಿಸುನಿಯ ಆಭರಣಂಗಳ ಭರದಿಂದ ತೆಗೆದ ತಾನೆ
ಚಿನ್ನದುಂಗುರವ ಬೆರಳಿಗೆ ನಲಿದಿಟ್ಟನೆ
ತರುಣಿ ಬಾರೆಂದು ನಂಬುಗೆಗೊಟ್ಟನೆ
ಶ್ರೀ ಕೆಳದಿಯ ಪುರದ ರಾಮೇಶ ಎನ್ನನೆರೆದು ಮನ್ನಿಸಿದನೆ ೩

## ೪೬೧

ಎಲ್ಲಿ ಕಲಿತೆಯೋ ಇಂಥಾ ಜಾಲೆಗಳನು ಆ
ಲಲ್ಲೆಗಾರತಿಯ ಕೂಡಾಡಿ ಬಂತದಕೇನು ಪ

ಅವಳ ಕುರುಳಿವಳ ಮುಗುಳ್ನಗೆಯನೆ ಬಯಸುವುದು
ಇವಳ ನಯನಗಳವಳ ಮುದ್ದು ಮೊಗವಾ
ಅವಳಕ್ಷಿ ಇವಳ ತೋಳ್ಗಳನೆಂದು ನಿನ್ನ ಸಖಿ
ವಿವರಿಸಿ ಬರೆದುದ ನೀನೋಡಿದುದ ಸಖಿ ಪೇಳ್ದ ೧

ತರುಣಿ ಹಾರವನು ಮತ್ತೋರ್ವಳುಂಗುರವನು
ಸರ್ವಾಭರಣವ ಧರಿಸಿದಳೋರ್ವಳು
ಭರದಿ ಮೂವರೊಳಗಾರನು ಕಳುಹಲೆಂದು ಸಖಿ
ಬರೆಯಲದ ನೀ ನೋಡಿಕೊಂಡುದನೆ ಸಖಿ ಪೇಳ್ದ ೨

ಇನ್ನಾದರೆಯು ಪರಸತಿಯರ ಬೇಟವ ಬಿಟ್ಟು
ನಿನ್ನ ನಂಬಿದಳೆಂದು ಮನಕೆ ತಂದು
ಎನ್ನ ಕರದೊಳಗೆ ಕರವಿಟ್ಟು ಮನ್ನಿಸೋ ಕೆಳದಿ
ಪನ್ನಗಾಭರಣ ಶ್ರೀ ರಾಮೇಶಲಿಂಗ ೩

## ೪೬೨

ಕಾಮಿನಿಯರು ನೆರದೊಂದಾಗಿ
ಪ್ರೇಮದಿ ಧವಳಾರವ ಪಾಡಲು
ಶ್ರೀ ಮಹಾಲಕ್ಷ್ಮಿ ಜಯವೆಂದು
ಜಯವೆಂದು
ಶ್ರೀಕೃಷ್ಣರಾಯಗೆ
ಹೇಮದಾರತಿಯ ಬೆಳಗಿರೆ ೧

ಸಿಂಧುರಗಮನೆಯರತಿ ಹರುಷದಲಿ
ಚಂದದಿ ನಲಿದಾಡುತ ಪಾಡುತ
ಇಂದಿರಾರಮಣ ಜಯವೆಂದು
ಜಯವೆಂದು
ಶ್ರೀ ಮಹಾಲಕ್ಷ್ಮಿಗೆ
ಕುಂದಣದಾರತಿಯ ಬೆಳಗಿರೆ ೨

ಕರದ ಕಂಕಣ ಝಣಝಣರೆನಲು
ಗುರುತು ಚವಲುಗಾಡಲು ಮುತ್ತಿನ
ಕೊರಳಹಾರಗಳು ಹೊಳೆಯಲು
ಹೊಳೆಯಲು
ಶ್ರೀಕೃಷ್ಣರಾಯಗೆ
ಕುರುಜಿನಾರತಿಯ ಬೆಳಗಿರಿ ೩

ಹಾರಪದಕ ಕಂಕಣದವರು ವೈ-
ಯ್ಯಾರದ ಹೊಸ ಹರೆಯದಂಗನೆಯರು
ರಾರಾಜಿಪ ಚಂದ್ರಮುಖಿಯರು
ಮುಖಿಯರು
ಶ್ರೀ ಮಹಾಲಕ್ಷ್ಮಿಗೆ
ಕುರುಜಿನಾರತಿಯ ಬೆಳಗಿರೆ ೪

ಕಸ್ತೂರಿ ತಿಲಕದ ಸೊಬಗಿಯರು ಸು–
ವೃತ್ತಸ್ತನತಟದ ಜವ್ವನೆಯರು
ಆರ್ತಿಯಿಂ ಪಾಡಿ ಪೊಗಳುತ
ಪೊಗಳುತ
ಶ್ರೀ ಕೃಷ್ಣರಾಯಗೆ
ಮುತ್ತಿನಾರತಿಯ ಬೆಳಗಿರೆ ೫

ಬೆರಳುಂಗುರ ಥಳ ಥಳಥಳಿಸಿ
ಸಿರಿಮೊಗದೊಳು ಕಿರಿಬೆಮರೊಗೆಯಲು
ಹರುಷದಿ ಪಾಡಿ ಪೊಗಳುತ
ಪೊಗಳುತಲಿ
ಶ್ರೀ ಮಹಾಲಕ್ಷ್ಮಿಗೇ
ಸರಸಿಜದಾರರತಿಯ ಬೆಳಗಿರೆ ೬

ಕನ್ನಡಿಗದಪಿನ ಚದುರೆಯರು ಚೊಕ್ಕ
ಚಿನ್ನದ ಸರಪಣಿಯಿಟ್ಟಂಗನೆಯರು
ಚೆನ್ನಾಗಿ ಪಾಡಿ ಪೊಗಳುತ
ಪೊಗಳುತ
ಕೆಳದಿಯ ಶ್ರೀ ಕೃಷ್ಣಗೆ
ರನ್ನದಾರತಿಯ ಬೆಳಗಿರೆ ೭

## ೪೬೩

ಗಂಗೆಯ ಶಿರದಿ ಪೊತ್ತವಗೆ
ಮಂಗಳಪ್ರದಗೆ ಶಂಕರಗೆ
ಪುಂಗವರಾಜವಾಹನಗೆ
ಮಂಗಳಾರತಿಯನೆತ್ತಿರೆ ೧

ಪಾಕಾರಿ ಪೂಜಿತಪಾದಗೆ
ಮಾಕಾಂತನೇತ್ರಾರ್ಚಿತಗೆ
ಶ್ರೀಕರಗೇಕೋರುದ್ರಗೆ
ಏಕಾರತಿಯನೆತ್ತಿರೆ ೨

ಪಂಚಬಾಣನ ಗೆಲಿದವಗೆ ತ್ರಿ
ಪಂಚನೇತ್ರಗೆ ಪಂಚಮುಖಿಗೆ
ಪಂಚಕೃತ್ಯಾಧೀಶ್ವರಗೇ
ಪಂಚಾರತಿಯನೆತ್ತಿರೆ ೩

ಕಮಲಸಂಭವನುತಿ ಪಾತ್ರಗೆ
ಕಮಲಾಪ್ತಕೋಪ್ತಕೋಟಿಭಾಸುರಗೆ
ಕಮಲಾಹಿತ ಭೂಷಣಗೆ
ಕಮಲದಾರತಿಯನೆತ್ತಿರೆ ೪

ನಾಗೇಂದ್ರಚರ್ಮಾಂಬರಗೆ
ನಾಗೇಂದ್ರ ಹಾರಶೋಭಿತಗೆ
ನಾಗೇಂದ್ರ ಶಯನಸನ್ನುತಗೆ
ನಾಗಾರತಿಯನೆತ್ತಿರೆ ೫

ಸರ್ಪಕಂಕಣ ಸದಾಶಿವಗೆ
ಮುಪ್ಪುರವನು ಗೆಲಿದವಗೆ
ಕಪ್ಪು ಗೊರಲಗೆ ಕಾಮದಗೆ
ಕಪ್ಪುರದಾರತಿಯನೆತ್ತಿರೆ ೬

ಜಯ ಜಯ ಕೆಳದಿ ಪುರೇಶ
ಜಯ ಜಯ ಶ್ರೀ ಪಾರ್ವತೀಶ
ಜಯ ಜಯ ಶ್ರೀ ರಾಮೇಶ್ವರ
ಜಯವೆಂದಾರತಿಯನೆತ್ತಿರೆ ೭

## ೪೬೪

ಗಿರಿರಾಜಕುಮಾರಿ ದೇವಿ
ಪರಮ ಮಂಗಳಗೌರಿ
ಪರಮ ಪಾವನೆ ಶ್ರೀಹರಿ ಸೋದರಿ
ಸುರರಿಪು ಮಧುಕೈಟಭ ಸಂಹಾರಿ
ಶ್ರೀಕರಿ ಗೌರಿ ಹಸೆಗೇಳು ಹಸೆಗೇಳು ೧

ಕುಂಭಸಂಭವವಿನುತೆ ದೇವೀ
ಶಾಂಭವಿ ಶುಭಚರಿತೆ
ಜಂಭಭೇದಿ ಮುಖ ಸುರವರಪೂಜಿತೆ
ಕಂಬುಕಂಠಿ ಶುಭಗುಣಗಣ ಶೋಭಿತೆ
ಲೋಕೈಕಮಾತೆಹಸೆ ೨

ಸರಸಿಜದಳನಯನೆ ದೇವಿ
ಸರಸಕುಂದರದನೆ
ಸರ್ವಮಂಗಳೆ ಸರ್ವಾಭರಣೆ
ಸುರಮುನಿ ಪರಿಭಾವಿತೆ ಶುಭಚರಣೆ
ಕರಿರಾಜಗಮನೆ ಹಸೆ ೩

ಶರನಿಧಿಗಂಭೀರೆ ದೇವಿ
ಸರಸಮೋಹನಾಕಾರೆ
ಕರುಣಸಾಗರ ಕನಕಾಂಬರಧರೆ
ಪರಿಪಾಲಿತ ನಿರ್ಜರ ಪರಿವಾರೆ
ಮಣಿಮಯಹಾರೆ ಹಸೆ ೪

ಪನ್ನಗನಾಭವೇಣಿ ದೇವಿ
ಸುನ್ನತೆ ರುದ್ರಾಣಿ
ಕನ್ನಡಿಗದಪಿನ ಶಿವೆ ಶರ್ವಾಣಿ
ಲೋಕೈಕ ಜನನಿ ಹಸೆ ೫

ನಗರಧರಪರಿಪಾಲೆ ದೇವಿ
ಸುಗುಣಗಾನಲೋಲೆ
ಅಗಣಿತಮಹಿಮಾಸ್ಪದೆ ಶುಭ ಲೀಲೆ
ಮೃಗಮದ ತಿಲಕ ವಿರಾಜಿತೆ ಪಾಲೆ
ಕುಂಕುಮನಿಟಿಲೆ ಹಸೆ ೬

ಪಂಕಜ ಸಮಪಾಣಿ ಶ್ರೀ ಹರಿ–
ಣಾಂಕವದನೆ ವಾಣಿ
ಅಂಕಿತಮಣಿಗಣ ಭೂಷಣ ಭೂಷಣಿ
ಶಂಕರೀ ಕೆಳದಿಪುರವಾಸಿನಿ
ಪಾರ್ವತಿ ಕಲ್ಯಾಣಿ ಹಸೆ ೭

## ೪೬೫

ದೇವಾದಿ ದೇವಗೆ
ಭಕ್ತ ಸಂಜೀವಗೆ
ಶ್ರೀ ವಿಘ್ನೇಶ್ವರಗೆ ಜಯವೆಂದು
ಜಯವೆಂದು
ಪಾರ್ವತೀಪುತ್ರಗೆ
ಪಾವನಗಾತ್ರಗೆ
ಫಣಿಯಜ್ಞ ಸೂತ್ರಗೆ
ಹೂವಿನಾರತಿಯ ಬೆಳಗಿರೆ ೧

ಸಿಂಧುರಗಮನೆಯರು
ಕುಂದಾಭರದನೆಯರು
ಇಂದುಶೇಖರಗೆ ಜಯವೆಂದು
ಜಯವೆಂದು
ಇಂದ್ರಾದಿವಂದ್ಯಗೆ

ನಿರ್ಜಿತಚಂದ್ರಗೆ ಸದ್ಗುಣಸಾಂದ್ರಗೆ
ಕುಂದಣದಾರತಿಯ ಬೆಳಗಿರೆ ೨

ವಾರಣದವನೆಗೆ
ಧೀರಹೇರಂಬಗೆ
ರಾವಣಾಸುರನ ಜಯಿಸಿದ
ಜಯಿಸಿದ
ಶರಣ ಮಂದಾರಗೆ
ಶರಧಿ ಗಂಭೀರಗೆ
ಕೌಸ್ತುಭಹಾರಗೆ
ಮೇರುವೆಯಾರತಿಯ ಬೆಳಗಿರೆ ೩

ಸುರರು ಹೂಮಳೆಗರೆಯೆ
ತರುಣಿಯರ್ಪಾಡಲು
ಸುರದುಂದುಭಿ ಮೊಳಗೆ ಜಯವೆಂದು
ಜಯವೆಂದು
ಸಿಂಧುರವರ್ನಗೆ
ಶೂರ್ಪಸುಕರ್ನಗೆ
ಸರ್ವತ್ರಪೂರ್ಣಗೆ
ಕುರುಜಿನಾರತಿಯ ಬೆಳಗಿರೆ ೪

ಪಂಕಜಾಂಬಿಕೆಯರು
ಭೋಂಕನೆ ಪಾಡಲು
ಶಂಕರನ ಪುತ್ರ ಜಯವೆಂದು
ಪಾವನವೇಷಗೆ
ವರದ ಗಣೇಶಗೆ
ಕುಂಕುಮದಾರತಿಯ ಬೆಳಗಿರೆ ೫

ರಮ್ಯವಾದಲತಿಗೆಯರಸವ ಪಾದಕೆ ತೊಡೆದು
ಕರ್ಮೃಣ್ಣೆಯನು ಕಂಠಕನುಲೇಪಿಸಿ

ಸುಮ್ಮಾನದಿಂದ ಪಟವಾಸ ಚೂರ್ಣವತಳಿದು
ನಿಮ್ಮ ಪೂಜಿಸುವೆನು ಗೌರಿದೇವಿ ೬

ವರಧೂಪದೀಪ ಪರಿಪರಿಯ ನೈವೇದ್ಯ ಭಾ-
ಸುರ ಸುತಾಂಬೂಲ ಸೀಗುರಿದರ್ಪಣ
ನಿರುಪಮ ಛತ್ರ ಚಮರಾದಿ ಸೇವೆಯನು ಸ್ವೀ-
ಕರಿಸಿ ಪಾಲಿಸೆ ಎನ್ನ ಗೌರಿ ದೇವಿ ಜಯ ೭

ಇಂತು ಪರಿಪರಿಯ ರಾಜೋಪಚಾರಗಳಿಂದ
ಸಂತತವು ನಿಮ್ಮ ಪಾದವ ಪೂಜಿಸಿ
ನಿಂತು ಕರವನೆ ಮುಗಿದು ಧ್ಯಾನಿಸುತ ನಲಿನಲಿದು
ಸಂತಸದಿ ನಿಮ್ಮ ಸ್ತುತಿಸುವೆನು ಗೌರಿ ಜಯ ೮

ಮತ್ತೇಭಗಮನೆಗೆ ಮಾಹೇಂದ್ರಸನ್ನುತೆಗೆ
ಅತ್ಯಂತ ಪರಮ ಪಾವನ ಚರಿತೆಗೆ
ನಿತ್ಯ ಸೇವೆಯನು ಮಾಡುವರ ರಕ್ಷಿಸುವಂಥ
ಪ್ರತ್ಯಕ್ಷಮೂರ್ತಿ ಶ್ರೀಗೌರಿ ನಿಮಗೆ ಜಯ ೯

ಕಲಕೀರವಾಣಿಗೆ ಕಾಳಾಹಿವೇಣಿಗೆ
ಕಲಧೌತಕಮಲ ಶೋಭಿತಪಾಣಿಗೆ
ನಳಿನದಳನೇತ್ರೆಗೆ ನಾರಾಯಣೆಗೆ ನಮ್ಮ-
ನೊಲಿದು ರಕ್ಷಿಸುವಂಥಾ ಶ್ರೀಗೌರಿಗೆ ಜಯ ೧೦

ಕುಂಭಸಂಭವನುತೆಗೆ ಜಂಭಾರಿಪೂಜಿತೆಗೆ
ರಂಭಾಸುನರ್ತನಪ್ರಿಯೆಗೆ ಶಿವೆಗೆ
ರಂಭೋರುಯುಗಳೆಗೆ ಬಿಂಬಾಧರೆಗೆ ನಮ್ಮ
ಬೆಂಬಿಡದೆ ರಕ್ಷಿಸುವ ಗಿರಿಜಾತೆಗೆ ಜಯ ೧೧

ಮುತ್ತೈದೆತನಗಳನು ನಿತ್ಯಸಂಪದಗಳನು
ಉತ್ತಮಾಂಬರ ಛತ್ರಚಾರಮವನು

ಅತ್ಯಂತ ಪ್ರೀತಿಯಿಂದಿತ್ತು ರಕ್ಷಿಸಿ ಭಕ್ತ
ವತ್ಸಲೆ ಶ್ರೀ ಗೌರಿದೇವಿ ತಾಯೆ ೧೨

ಎಂದೆಂದು ಈ ಮನೆಗೆ ಕುಂದದೈಶ್ವರ್ಯವನು
ಚಂದವಾಗಿಹ ಪುತ್ರ ಪೌತ್ರರನ್ನು
ಸಾಂದ್ರಕೃಪೆಯಿಂದಿತ್ತು ಸಲಹೆ ಕೆಳದಿಯ ಪುರದಿ
ನಿಂದ ಶ್ರೀ ಪಾರ್ವತಾದೇವಿ ತಾಯೆ ಜಯ ೧೩

## ೪೬೬

ನರರಿಗೆಲ್ಲಿಯ ಭವಬಂಧ ಜ್ಞಾನಿಗಳಾದ
ನರರಿಗೆಲ್ಲಿಯ ಭವಬಂಧ
ತರಣಿಬಿಂಬವ ತಮಮುಸುಕಲು ಬಲ್ಲುದೆ
ಹರಹರ ಪಾಹಿ ಶಂಕರ ರಾಮೇಶ್ವರನೆಂಬ ಪ

ಸರಸಿಜಾಪ್ತನ ಕರಗಳೊಳು ಬಲು
ಪರಮಾಣುಗಳು ವರ್ತಿಸುವೊಲು
ಪರಿಪೂರ್ಣಬ್ರಹ್ಮವೊಂದರೊಳು ಬ್ರಹ್ಮಾಂಡಗ
ಳಿರುವವನಂತ ಕೋಟಿಗಳೆಂದು ತಿಳಿದಂಥಾ ೧

ಬಿಂದಿಗೆ ಬಿಲುಬಿಲೆ(?) ಗಳನಂದುನ
ಬಂದಂತೆ ಸೃಜಿಸಿ ಮತ್ತದನು
ಪೊಂದಿಸುವಂತೆ ವಿಶ್ವವನು ಪುಟ್ಟಿಸಿ ಲೀಲಾ
ಸ್ಪಂದದಿಂದಡಗಿಪನೀಶನೆಂದರಿದಂಥಾ ೨

ವಿರುಪ ಕಾಂಚನಮೋರಂತೆ ನಾನಾ
ಪರಿಯ ಆಭರಣವಾದಂತೆ
ಪರಮಾತ್ಮನೋರ್ವನನೇಕನಾಮಂಗಳ
ಧರಿಸಿಹ ಸರ್ವವು ಬ್ರಹ್ಮವೆಂದರಿದಂಥಾ ೩

ಇರುವುದೀಲೋಕದೊಳೆರಡು ತಮ್ಮ ಸಂಗಡ
ಬರುವುದು ಪರಲೋಕಕೆರಡು
ಇರುವುದನೇ ಇಟ್ಟು ಬರುವುದು ಬಯಸುತ
ಪರಹಿತಚರಿತದಿ ನಿರುತ ವರ್ತಿಸುವಂಥ ೪

ಸಾಸಿರದಳ ಕಮಲದೊಳ್ ಇಹ
ಭಾಸುರ ಪ್ರಣವ ಪೀಠದೊಳು
ಈ ಸಕಲಕೆ ಸಾಕ್ಷಿಕನಾದ ಕೆಳದಿ ಪು-
ರೇಶ ರಾಮೇಶನ ನಿರತ ಧ್ಯಾನಿಸುವಂಥಾ ೫

## ೪೬೭

ನಿನ್ನವಳ ಬಗೆಯ ಪೇಳುವೆನು ಕೇಳೋ
ಮನ್ನಿಸೋ ಮಾನಿನೀಮಣಿಯನು ಕೃಪಾಳೋ ಪ

ಕನ್ನಡಿಯ ನೋಡಿದಳೋ ಕರುಳ ನೇವರಿಸಿದಳೋ
ಚಿನ್ನದುಂಗುರವ ಬೆರಳೊಳಗಿಟ್ಟಳೋ
ಕಣ್ಣಕಪ್ಪಿಟ್ಟು ತಿಲಕವ ತಿದ್ದಿಕೊಂಡಳೋ
ರನ್ನದೊಡವುಗಳ ಸಖಿಯರಿಗೆ ಕರದಿತ್ತಳೋ ೧

ಜಾತಿಮುತ್ತಿನ ಸರವ ಹಾಕಿಕೊಂಡಳೋ ಕೊರಳ್ಗೆ
ಜಾತಿಮಲ್ಲಿಗೆಯ ಮಾಲೆಯ ಮುಡಿದಳೋ
ಪ್ರೀತಿಯಿಂ ಸಾಕಿದ ಗಿಣಿಯ ತರಿಸಿ ನೋಡಿದಳೋ
ನೂತನದ ಚಂಗಾವಿ ಸೀರೆಯನೆ ನೆರಿದುಟ್ಟಳೋ ೨

ಚಿತ್ತಾರದ ಪಟದಲ್ಲಿ ನಿನ್ನ ರೂಪನೆ ಬರೆದು
ಅರ್ತಿಯಿಂ ಕೈಮುಗಿದು ನೋಡುತಿಹಳೋ
ಹೊತ್ತುಗಳೆವುದಕೆ ಹರಣಲ್ಲಿ ಬಂದುನೆರದುಳುಹೊ
ಚಿತ್ತಜನಮದಭಂಗ ಕೆಳದಿ ರಾಮೇಶಲಿಂಗ ೩

## ೪೬೮

ರತಿಸಮಯಕ್ಕೈದುತಿಹ ಸತಿರಚಿಸಿದುದ ಪೇಳ್ವೆ
ಮತಿವಂತೆ ಅದರ ಭಾವವ ತಿಳಿದು ಪೇಳೆ ಪ

ಕರಯುಗದಿ ವಜ್ರಮಯ ಕಂಕಣವ ಧರಿಸಿದಳು
ಅರಗಿಣಿಯ ನವಿಲ ಸೆರೆಯನು ಬಿಟ್ಟಳು
ಭರದಿ ಸಾಕಿ (ಸೆನಗಳ ?) ಕರೆದು ಕಳುಹಿದಳು
ಸರಸದಿಂ ದೀಪವನೆ ಮರೆಯೊಳಿರಿಸಿದಳು ೧

ಯುವತಿ ಕೇಳ್ಸುಗುತ ಕರ್ಣದೊಳೆ ಧರಿಸಿರ್ದ
ಕುವಲಯವ ತೆಗೆದು ದೂರದೊಳಿಟ್ಟಳು
ತವೆ ಮಲ್ಲಿಕಾಮಂದಹಾಸವನೆ ಬೀರಿದಳು
ನವಮಣಿಹಾರವನೆ ಕೊರಳ್ಗೆ ಧರಿಸಿದಳು ೨

ಸುರತ ಸಮಯದೊಳೆ ದಶದಿಕ್ಕುಗಳ ನೋಡಿದಳು
ತರಣಿ ಶಶಿಗತಿಯ ಸಮಗಾಣಿಸಿದಳು
ಪರಮಸುಖಸಾಮ್ರಾಜ್ಯ ಭಾರ ಪಸರಿಸಲಾಗ
ವರ ಕೆಳದಿ ರಾಮೇಶನಡಿಯ ಸ್ಮರಿಸಿದಳು ೩

## ೪೬೯

ವನಿತೆ ನೀನು ಕರೆದು ತಾರೆ ರಾಮೇಶನು
ಮುನಿಸಿದನೆ ನೀರೆ ಪ

ಹಂಬಲಿಸುತಿದೆ ಮನ ಹೇಗೆ ನಾ ತಾಳಲೆ
ರಂಬಿಸಿ ಪೊರೆದವನ
ಕುಂಭ ಕುಚದ ಮೇಲೆ ಕೂರುಗುರಿನ ಬರೆ
ಯಂಬ ಶಶಿಯ ನೇಮಗಾರನ ೧

ಎನ್ನ ಮೇಲಿನಿತು ತಪ್ಪನಾದರೆ ತೋರಿ
ಭಿನ್ನವಿಸುವುದು ಆ
ಕನ್ನೆಯೋರ್ವಳ ಕೂಡುತ
ಮುನ್ನಿನ ಲೇಸನು ತೋರದೆ ಎನ್ನ ಮರೆತ ೨

ಧರೆಯೊಳತ್ಯಧಿಕವೆಂದು ಕೆಳದಿಪುರ
ದರಸುತನದಲೆ ನಿಂದು
ವರದನದಿಯ ತೀರವಾಸ ಶ್ರೀ ರಾಮೇಶ
ನೆರದುಳುವಿದ ಲೇಸ ನಟನೆಯಿಂದ ಮಹೇಶ ೩

## ೪೭೦

ಶ್ರೀ ಮಹಾದೇವದೇವಗೆ
ಸೋಮಶೇಖರನಿಗೆ
ವಾಮಾಂಕದೊಳು ಪಾರ್ವತಿಯ
ಪ್ರೇಮದಿಂದ ತಾಳ್ದವಗೆ
ಹೇಮದಾರತಿಯ ಬೆಳಗಿರೆ ೧

ಮಾರಮರ್ದನಗೆ ತ್ರಿಪು-
ರಾರಿಗೆ ಶ್ರೀಕರನಿಗೆ
ಶಾರದೆ ಲಕ್ಷ್ಮಿಯರು ವೈ-
ಯಾರದಿಂದ ಪಾಡುತ
ಮೇರುವೆಯಾರತಿಯ ಬೆಳಗಿರೆ ೨

ಕರುಣಾಸಾಗರಗೆ ಶ್ರೀ-
ಕರಗೆ ಸರ್ವೇಶಗೆ
ಪರಮ ಪಾವನಗೆ
ಪಾರ್ವತಿಗೆ ವನಿತೆಯರು
ಕುರುಜಿನಾರತಿಯ ಬೆಳಗಿರೆ ೩

ದೇವದುಂದುಭಿ ಮೊಳಗೆ
ದೇವತೆಗಳೆಲ್ಲಾ ನೆರೆದು
ಹೂವಿನ ಮಳೆಗರೆಯೆ
ಭಾವಕಿಯರು ಮಾದೇವಗೆ
ಹೂವಿನಾರತಿಯ ಬೆಳಗಿರೆ ೪

ಪಂಕಜಾಕ್ಷಿಯರು ಕೂಡಿ
ಝೋಂಕನೆ ಗಾನವ ಪಾಡಿ
ಕಂಕಣ ಕಡಗ ಝಣ ಝಣರೆನೆ ಶ್ರೀರಾಮೇಶಗೆ
ಕುಂಕುಮದಾರತಿಯ ಬೆಳಗಿರೆ ೫

## ಅಂಕಿತ ರಹಿತ ಹಾಡುಗಳು

### ೪೭೧

ತುಳಸಿಯ ವೃಕ್ಷಗಳ ದಳದಳಗಳ ಮೇಲೆ
ನೆಲಸಿಹನು ಹರಿಯು ಮುದದಿಂದ
ಮುದದಿ ತುಲಸಿಯ ಪೂಜೆಗಳ
ಮಾಡಬೇಕು ಸುಜನರು ೧

ತುಲಸಿಯ ಮೂಲದೆ ನದಿಗಳು
ತುಲಸಿಯ ದಳದೊಳೆ ಶ್ರೀಹರಿಯು
ತುಲಸಿಯ ಶಾಖೆಯೊಳೆ ಸುರರೆಲ್ಲಾ
ನೆಲೆಸಿಹರು ಶ್ರೀತುಲಸಿಯ
ಮಹಿಮೆಗೆಣೆಯುಂಟೆ ೨

ವೃಂದಾವನ ತುಲಸಿಗೆ
ಒಂದು ಪ್ರದಕ್ಷಿಣವ
ಚಂದದಿ ರಚಿಸಿದವರಿಗೆ

ಭೂಮಿಯ ಸುತ್ತಿ ಬಂದಂಥಾ
ಪುಣ್ಯ ದೊರೆವುದು ೩

ಜಲದೊಳು ಶೋಧಿಸಿದ
ತುಲಸಿ ದಳವನೆ ಹಾಕಿ
ಆ ಜಲವನು ಶಿರದಿ ತಳಿದರೆ
ತಳಿದರೆ ಗಂಗಾದಿ
ಸಲಿಲದಿ ಮಿಂದ ಸುಫಲವು ೪

ಭೌಮ ಭಾರ್ಗವ ವಾರದಿ
ಶ್ರೀ ಮಹಾಲಕ್ಷುಮಿಯು
ನೇಮದಿ ತುಲಸಿ ವನದೊಳು
ವನದೊಳಗಿರುವಳು ಧೀಮಂತರು
ಕೊಯ್ಯರದರಿಂದ ೫

ಇಳೆಯೊಳಗುಳ್ಳಂಥಾ
ಹಲವು ತೀರ್ಥಗಳಿಹವು
ತುಲಸಿಯ ಮೂಲದೆಡೆಯಲಿ
ಎಡೆಯಲಿ ತನ್ನತ್ತಿಕೆಯ
ತಳೆವುದು ಬಲ್ಲ ಸುಜನರು ೬

ಅರುಣೋದಯದಲೆದ್ದು
ಸಿರಿ ತುಲಸಿಯ ದರುಶನವ
ವಿರಚಿಪುದು ಬಲ್ಲ ಸುಜನರು
ಸುಜನರು ಪಾತಕ
ಹರಿವುದು ಹರಿಯ ಕೃಪೆಯಿಂದಾ ೭

ಸಾರಿಸಿ ರಂಗವಲಿಯ
ನೇರಗೈದಿಕ್ಕಿದ
ನಾರಿಯರಿಗೈದೆತನವನು

ತನವನು ವೃಂದಾವನ
ಶ್ರೀರಮಣಿಯಿತ್ತು ಪೊರೆವಳು ೮

ಮುತ್ತೈದೆತನವನು
ಪುತ್ರಸಂತಾನವ
ನಿತ್ಯ ಸೇವೆಯನು ರಚಿಸಲು
ರಚಿಸಲು ತುಲಸೀದೇವಿ
ಇತ್ತು ರಕ್ಷಿಪಳು ಕೃಪೆಯಿಂದಾ ೯

## ೪೭೨

ನಾನೇನಂದನೆ ಭಾವಕಿ ಒಳ್ಳೆ
ಆನಂದಮಯ ಹರಿಹರ ಮುನಿದಿತ್ತಬಾರ ಪ

ರಮಣಿ ಕುಚ ಕುಂಕುಮಾಂಕಿತ ವಕ್ಷ
ವಾರಿಧಿಶಯನ ಶ್ರೀವಾಸವಾರ್ಚಿತ
ನಾರದನುತ ಪಂಕಜದೈತ್ಯ ಸಂ–
ಹಾರ ಶ್ರೀ ಹರಿಹರನೆಂದೆನಲ್ಲದೆ
ಮಾರಮರ್ಧನನೆಂದೆನೆ ಮೆರೆವ ಸರ್ಪ
ಹಾರ ಕುಂಡಲನೆಂದೆನೆ ಶೋಭಿಸುವ ವೈ
ಯ್ಯಾರ ವಿಭೂಷಣ ಶಂಕರನೆಂದೆನಲ್ಲದೆ ೧

ಮಡದಿಯೋರ್ವಳ ನುಡಿ ಕಳ್ಳನೆಂದೆನಲ್ಲದೆ ಮಿಗೆ
ಜಡೆದಲೆಯವನೆಂದನೆ ಪುಲಿದೊಗಲ
ದೃಢದಿ ಹೊದ್ದಿಹನೆಂದೆನೆ ತ್ರೈಲೋಕ್ಯ
ದೊಡೆಯ ಮುರಾರಿ ಮಹದೇವನೆಂದೆನಲ್ಲದೆ
ಧರೆಯನಳೆದು ಕ್ಷತ್ರಿಯರ ಕೊಂದು ಶರಧಿಯ

ನಿರದೆ ಕಟ್ಟಿದ ಕೃಷ್ಣ ಬಹುರೂಪ
ವರಕವಿಗುರುವ ಕರದಿ ಪಿಡಿದು ರಕ್ಷಿಪ
ಬಿರುದಿನ ರಾಯ ರಾವುತನೆಂದೆನಲ್ಲದೆ ೨

ಗಿರಿಜಾರಮಣನೆಂದೆನೆ ಗುಹಾರಣ್ಯವಾಸ
ಎರಡು ರೂಪದಲಿರುವ ಮೂರುತಿಯೆಂದೆ ನಾ ನಂಬಿದ-
ವರಪೊರೆವ ಶ್ರೀಹರಿಹರಲಿಂಗನೆಂದನಲ್ಲದೆ ೩

## ೪೭೩

ಪಲ್ಲಕ್ಕಿ ಸೇವೆಯವಧಾನ ಆಳ
ಪಲ್ಲಕ್ಕಿಯಲಿ ಮಂಡಿಪುದು ಶಿವ ನಿಧಾನ ಪ

ಥಳಥಳಿಪ ಹೇಮನಿರ್ಮಿತವಜ್ರಮಯಚಕ್ರ-
ಗಳ ಚಿನ್ನದಚ್ಚಿನ ಸಹಸ್ರಕಂಭಗಳ ನೆಲೆ
ನೆಲೆಯ ರತ್ನದ ಕಲಶಕನ್ನಡಿ ಪತಾಕೆಗಳ
ಇಳಿವಿಟ್ಟ ಮುತ್ತಿನ ಸರಗಳಾ
ಒಳಹೊರಭವಂತಿಗಳ ಸುರಧಿಯ ಶ್ವೇತಾಶ್ವ-
ಗಳ ಮನೋಹರಮಾದ ಮದನ ಕೈಗಳ ಸುಭುಜ-
ವಲಯದೊಳ್ತಳದ ಪೂರುಷರ ಸರಪಂಸೆಗಳ
ತೊಳಪಗಜಪಕ್ಷಿಯಗ್ರಗಳಾ ದೇವ
ಲಲನೆಯರ ಚಾಮರದ ಕರದ ಚಲನೆಗಳಾ ೧

ವಂದಿಮಾಗಧರೆಲ್ಲ ಕರವೆತ್ತಿ ಪೊಗಳುತಿರೆ
ದಾಂಧಣಧಣಾ ಎಂದು ಮೊಳಗೆ ಮಂಗಳವಾದ್ಯ
ಚಂದ್ರಸೂರ್ಯರು ಜಗಜ್ಯೋತಿಯನು
ಪಿಡಿದಿರಲು ಗಂಧರ್ವತತಿ ಪಾಡುತಿರಲು
ಮುಂದೆ ರಂಭಾದಿ ಗಣಿಕೆಯರು ನರ್ತಿಸಲು ದೇ
ವೇಂದ್ರ ಮುಕ್ತಾಛತ್ರಮಂ ಪಿಡಿದಿರಲು ಧನದ

ಕುಂದಣದ ಪಾದುಕೆಯ ಪಿಡಿದಿರಲು
ವಾಯು ನಲವಿಂದ ಸೀಗುರಿಯ ವೀಜಿಸಲು
ಸುರರು ಮುಂದೆ ಜಯಜಯವೆಂದು ಓಲೈಸುತಿರಲು ೨

ಸುರರು ಹೂಮಳೆಗರೆಯೆ ಸುರದುಂದುಭಿಯು ಮೊಳಗೆ
ಪರಮಋಷಿವರರು ವೇದಂಗಳನು ಪಠಿಸೆ ತುಂ-
ಬುರನಾರದರು ವೀಣೆಯನು ಬಾಜಿಸಲು ಗಣನಿ-
ಕರ ಖಡ್ಗಶರವ ಪಿಡಿದಿರಲು
ಸರಸಿಜೋದ್ಭವನು ನಿಮ್ಮುನ್ನತಿಯನರುಹುತಿರೆ
ಸುರರಾಜಮಂತ್ರಿ ಸಮಯವ ಸೂಚಿಸುತಿರಲು
ವರಕೆಳದಿಪುರವಾಸ ರಾಮೇಶ ಜಯವೆಂದು
ಹರಿ ಹಸ್ತಲಾಘವನು ಕೊಡಲು ಗೌರಿ
ಹರುಷದಿಂ ಮುಂಬಿನೊಳು ರಂಜಿಸುತ್ತಿರಲು ೩

## ೪೭೪

ಪಾಲಿಸೆನ್ನನು ಪದ್ಮಪತ್ರ ವಿಶಾಲಲೋಚನೆ ಜಾಹ್ನವಿ
ಶೈಲಜಾತಾಭಗಿನಿಮಂಗಳೆ ಮೂಲಮಂತ್ರ ಸ್ವರೂಪಿಣಿ ಪ

ಹರನ ಜಡೆಯಿಂದಿಳಿದು ಬ್ರಹ್ಮನ ಕರದ ಪಾತ್ರೆಯೊಳ್ನೆಲೆಸಿದೆ
ಸುರರ ಸಂರಕ್ಷಿಸಲು ಭರದಿಂ ಸ್ವರ್ಗಲೋಕವ ಸಾರಿದೆ
ಧರೆಯ ಭಾರವ ತೊಳೆಯಲಲ್ಲಿಂ ಭರದಿ ಸುರಗಿರಿಗೈದಿದೆ
ಹರುಷದಲಿ ಹಿಮಗಿರಿಯ ಶೃಂಗದಿ ಪರಿದು ಪಾವನ ಮಾಡಿದೆ ೧

ವರ ಭಗೀರಥ ತರಲು ಕಾಶಿಯ ಪುರವರದಿ ನೀ ನೆಲಸಿದೆ
ಥರಥರದ ಪ್ರಾಕಾರ ಮಣಿಗೋಪುರದ ಸಾಲೊಳಗೊಪ್ಪಿದೆ
ನರರು ಮಾಡಿದ ಪಾಪರಾಶಿಯ ತೊಳೆದು ಪಿತೃಗಳ ಸಲಹಿದೆ
ಹರಿಗೊಲಿದು ಮಣಿಕರ್ಣಿಕಾಖ್ಯೆಯ ಧರಿಸಿ ಜಗದೊಳು ತೋರಿದೆ ೨

ಮುತ್ತಿನಾರತಿ ಎತ್ತಿ ನಲಿವುದ ಉತ್ತಮದ ಬಾಗಿನವನು
ಮತ್ತಕಾಶಿನಿಯರಿಗೆ ಕೊಡುತಲಿ ಅರ್ತಿಯಿಂ ಶೋಭನವನು
ಚಿತ್ತಶುದ್ಧದಿ ಪಾಡಿ ಪೊಗಳಿ ಸಮ್ಮತ್ತೆ ಜಾಹ್ನವಿ ನಮ್ಮನು
ಅರ್ತಿಯಿಂ ಸಲಹೆಂಬ ಸ್ತ್ರೀಯರ ಮೊತ್ತವನು ನಾ ಕಂಡೆನು ೩

ಚಾರುಮಣಿ ಕೋಟೀರಕುಂಡಲಿ ಹಾರಮಣಿಮಯ ನೂಪುರೆ
ವೀರಮುದ್ರಿಕೆ ಕಡಗ ಕಂಕಣದಿಂದಲೊಪ್ಪುವ ಶ್ರೀಕರೆ
ಹಾರ ಪದಕ ಸಮೂಹ ಕಾಂಚೀದಾಮ ವೈಭವ ಭಾಸುರೆ
ಭೂರಿ ಮರಕತ ರತ್ನಮಾಲ್ಯ ಕೇಯೂರ ಭೂಷಣ ಭಾಸ್ವರೆ ೪

ಆಣಿ ಮುತ್ತಿನ ಮೂಗುತಿಯು ಕಟ್ಟಾಣಿ ಗುಂಡಿನ ಸರಗಳು
ಮಾಣಿಕವು ಬಿಗಿದಿರ್ದ ರಾಗಟೆ ಚೌರಿ ಪೊಸ ಬಾವಲಿಗಳು
ಕ್ಷೋಣಿ ಗತಿಶಯವಾದ ಮುತ್ತಿನ ಮಲಕು ಮೋಹನ ಸರಗಳು ಕಲ್ಯಾಣಿ
ಗಂಗಾದೇವಿಗೆಸೆದವು ಪರಿಪರಿಯ ಭೂಷಣಗಳು ೫

ಕಾಲಸರಪಣಿ ಉಂಗುರವು ಅಣಿವೆಟ್ಟು ಪಿಲ್ಲಿಯ ಸಾಲ್ಗಳು
ಮೇಲೆನಿಪ ವೊಡ್ಯಾಣ ಕಿಂಕಿಣಿ ಗೆಜ್ಜೆಮೊಗ್ಗೆಯ ಸರಗಳು
ತೋಳಬಳೆ ಭುಜಕೀರ್ತಿ ಹಿಂಬಳೆ ಚಳಕೆಮಣಿದೋರೆಗಳು (?)
ಮೇಲೆ ರಂಜಿಪ ನಿಮ್ಮ ನೋಡಿ ಕೃತಾರ್ಥವಾಯ್ತೀಕಂಗಳು ೬

ಗಂಗೆ ಲಿಂಗಮಯಾಂಗೆ ಶುಭತರಂಗೆ ಜಾಹ್ನವಿ ನಿರ್ಮಲೆ
ರಂಗದುದ್ಧತರಂಗ ಶ್ರೀಕರ ಪಾವನೀಕೃತ ಭೂತಲೆ
ಭಂಗಿತಾಮಯಸಂಘೆ ಮಂಗಲಸೂತ್ರಯುತ ಕಂಠೋಜ್ವಲೆ
ಮಂಗಲಾತ್ಮಿಕೆ ಮಹಿತೆ ಕರುಣಾಪಾಂಗೆ ಶರದಿಂದೂಜ್ವಲೆ ೭

## ೪೭೫

ಮಂಜುಳಾ ಪಾಶಾಂಕುಶದ
ರಂಜಿತವರ ಬಾಹುದಂಡ

ಮಂಜುಳಹಾರ ಕೇಯೂರಾದಿಭೂಷ
ಮೌಂಜಿ ಕೃಷ್ಣಾಜಿನಧರನಿತ್ಯತೋಷ
ಕಂಜ ಬಾಂಧವ ಶತರೂಪಿಸಂಕಾಶ
ಕುಂಜರವದನಾ ಹಸೆಗೇಳು ೧

ದೇವದಾನವ ಮರ್ತ್ಯಪನ್ನಗ
ಸೇವಿತ ಪಾದ ಪಯೋಜ
ರಾವಣಾಸುರಗರ್ವಹರ ಗಾನಲೋಲ
ಪಾವನತರಸುರಕಾರ್ಯಾನುಕೂಲ
ಗ್ರಾವತನೂಜೆಯ ಪ್ರೇಮದ ಬಾಲ
ಶ್ರೀ ವಿಘ್ನರಾಜ ಹಸೆಗೇಳು ೨

ತಾಮರಸಾಂಬಕ ಸೂರ್ಯ ಸು-
ತ್ರಾಮಾಚ್ಯುತ ಚಂದ್ರ ವಂದ್ಯ
ಹೇಮಾದ್ರಿಸನ್ನಿಭ ಕೋಮಲಗಾತ್ರ
ರಾಮಣೀಯಕ ಕಾಂಚನಯಜ್ಞ ಸೂತ್ರ
ಸೋಮಶೇಖರನ ಸಮ್ಮೋಹದ ಪುತ್ರ
ಶ್ರೀಮದ್ಗಣೇಶ ಹಸೆಗೇಳು ೩

ಕಾಮಕರ್ಮಾತೀತ ಸನ್ಮುನಿ
ಜಾಲ ಮಾನಸರಾಜಹಂಸ
ಬಾಲಾರ್ಕಶತರೂಪಿಕಾಂತಿ ಶರೀರ
ಸ್ಥೂಲಕಂಧರ ದುಃಖದುರಿತವಿದೂರ
ಫಾಲಲೋಚನ ಚಂದ್ರಗರ್ವಾಪಹಾರ
ಬಾಲವಟುರೂಪ ಹಸೇಗೇಳು ೪

ಸಂತತ ಬಹುವಿಧಲೀಲಾ
ಸಂತತ ಮುದಿತಾದ್ರಿಬಾಲಾ
ಅಂತರಹಿತ ಶುಭಗುಣಗಣಸಾಂದ್ರ
ದಂತದೀಧಿತಿನಿರ್ಜಿತಶರಶ್ಚಂದ್ರ

ಕಾಂತವಿಗ್ರಹವಿಪದದ್ರಿಮಹೇಂದ್ರ
ಚಿಂತಿತಾರ್ಥಪ್ರದನೇ ಹಸೆಗೇಳು ೫

## ೪೭೬

ಮಂಗಲಂ ಜಯಮಂಗಲಂ
ತ್ರಿಜಗಂಗಳ ಪೊರೆವ ಶ್ರೀಮೂಕಾಂಬೆಗೆ ಪ

ಗೌರಿಗೆ ಗುಹಜನನಿಗೆ ಗಿರಿಜಾತೆಗೆ
ಧೀರಮಹಿಷ ದೈತ್ಯಮರ್ದಿನಿಗೆ
ಕಾರುಣ್ಯನಿಧಿಗೆ ಕಾಮಿತಫಲದಾತೆಗೆ
ನಾರದನುತೆಗೆ ನಾರಾಯಣಿಗೆ ೧

ಶರದಿಂದುಮುಖಿಗೆ ಶಂಕರಿಗೆ ಶರ್ವಾಣಿಗೆ
ದುರಿತ ದಾರಿದ್ರ್ಯಹರ್ತೆಗೆ ದುರ್ಗಿಗೆ
ಪರಮೇಶ್ವರಿಗೆ ಪಾವನಚರಿತೆಗೆ ಶುಭ
ಕರಿಗೆ ಸಮಸ್ತಮಂತ್ರೇಶ್ವರಿಗೆ ೨

ರಾಜಶೇಖರಿಗೆ ರಾಜೀವನೇತ್ರಗೆ ರಕ್ತ
ಬೀಜ ಶಾಸಿನಿಗೆ ಭುವನಮಾತೆಗೆ
ತೇಜೋಮಯಿಗೆ ತರಣಿಕೋಟಿ ಭಾಷೆಗೆ
ಶ್ರೀ ಜನಾರ್ದನನ ಸಹೋದರಿಗೆ ೩

ಕಾಳಿಗೆ ಕಾಮರೂಪಿಣಿಗೆ ಕೌಮಾರಿಗೆ
ಕಾಳರಾತ್ರಿಗೆ ಕಾತ್ಯಾಯನಿಗೆ
ವ್ಯಾಳಭೂಷಿಣಿಗೆ ಯೋಗಿನಿಗೆ ರುದ್ರಾಣಿಗೆ
ಭಾಳನೇತ್ರೆಗೆ ಭಯಹಾರಿಣಿಗೆ ೪

ಚಂಡಿಗೆ ಚಕ್ರಪಾಣಿಗೆ ಚಾತುರ್ಭುಜೆಗೆ
ಮುಂಡಿಗೆ ಧೂಮ್ರಲೋಚನಹರ್ತ್ರೆಗೆ
ಚಂಡಮುಂಡಾಸುರರಸುರಣರಂಗದಿ
ದಿಂಡುದರಿಂದ ಸರ್ವಮಂಗಲೆಗೆ ೫

## ೪೭೭

ಯಾದವರಾಯ ಮಾರಬೇಕು ಮೊಸರಾ
ಬಾರೆ ಗೊಲ್ಲ ಮೊಸರು ಮೊಸರೆನುತಲಿ ಮೇಲು–
ಗೇರಿಗೆ ಬರುತಿರೆ ಕಂಡು ನೀಲವರ್ಣದ ಗೋವಳ
ಸೆರಗು ಪಿಡಿದು ಲತಾಂಗಿಯ ತಡೆದಾ ೦

ಮೊಸರ ಮಾರಬಂದವಳಲಿ ಸೆಣಸದಿರು
ಶಶಿನೀರೆ ಎಲ್ಲೆಂದಡತನವೆ ಬೇಡ ಈ
ವಸುಧೆಯೊಳರಸಿಲ್ಲವೆ ನೀ ದೂರಸಾರಲೋ
ಪಶುಗಾಹಿ ಬಿಡು ಎನ್ನ ೨

ಲಂಡತನವು ನಮ್ಮೊಡನೆ ಕೊಳ್ಳವು ಹೋಗು
ಕಂಡ ಕಂಡವರಿಗಂಜುವುದ ಬಿಟ್ಟು ನನ್ನ
ದಂಡೆಯ ಪಿಡಿಯದಿರೋ ನಾ ಸಸಾರಲ್ಲೊ
ಗಂಡನುಳ್ಳವಳು ಕಾಣೋ ೩

ಉಟ್ಟ ಸೀರೆಯ ಪಿಡಿದೆಳೆಯದಿರೆಲವೋ
ಪಟ್ಟಣ ಕೊಡೆಯರಿಲ್ಲವೆ ಹೇಳಾ
ಪಟ್ಟಗಟ್ಟಿತೆ ನಿನಗೆ ನಾ ಹೇಳುವೆ
ಕಟ್ಟೆಯ ತಳವಾರಗೆ ೫

ಶಂಕಶೂರರುಹನ ಪಂಕಜಗಜನಿಮ್ಮ
ಡೊಂಕ ದುರುಬಿಗೆ ಅಂಜುವಳಲ್ಲ

ಬೋಂಕನೆ ಒಳಗಾದರೆ ಕಡೆಗೆ ನಮ್ಮ
ಮಂಕುಮಾಡಿತು ಗೋವಳಾ ೫

ಇತ್ತಿತ್ತ ಬಾರೆಲೆ ಸಖಿ
ಮುತ್ತಿನ ಹಾರವನೀವೆ ಎನ್ನ
ಒತ್ತಾರೆ ಕುಳಿತರೆ ಪದಕವನೀವೆ ಎನ್ನ
ಅರ್ತಿಯ ಸಲಿಸಿದರೆ ನಾ ನಿನಗೆ
ಮುತ್ತಿನೋಲೆಯನೀವೆನೆ ೬

ಅಣಿ ಮುತ್ತಿನ ಕಂಠಮಾಲೆಯ ನಿನಗೀವೆ
ಜಾಣೆಗೊಲ್ಲತಿ ಬಾಲೆ ಎಲೆ ಬಾಲೆ ನಿನ್ನ
ಜಾಣ ಜಡೆ ಲಕ್ಷ್ಮೀನಾರಾಯಣನ ನೆನೆವುತ ೭

## ೪೭೮

ವೃಂದಾವನಕೈತಂದನು ಆ-
ನಂದದಿಂ ಕ್ಷೀರಾಬ್ಧಿಯಿಂದ ಶ್ರೀಕೃಷ್ಣನು ಪ

ತೆತ್ತೀಸರೂಪಿ ದೇವತೆಗಳೋಲೈಸಲು
ಮುತ್ತಿನ ಚಾಮರಗಳನಿಕ್ಕಲು
ಮುತ್ತೈದೆಯರೆಲ್ಲಾ ಧವಳವ ಪಾಡಲು
ಅರ್ಥಿಯಿಂದಿಂದಿರೆ ಸಹಿತ ಶ್ರೀಕೃಷ್ಣನು ೧

ದ್ವಾರಾವತಿಯಿದ್ದು ಕ್ಷೀರಸಾಗರವಿದ್ದು
ಸಾರತರ ಶ್ವೇತದ್ವೀಪವಿದ್ದು
ಶ್ರೀ ವೃಂದಾವನ ಸುಖಮಂದಿರವೆನುತಲಿ
ಕ್ಷೀರಸಾಗರವಾಸಿಯಾದ ಶ್ರೀಕೃಷ್ಣನು ೨

ನಂದಗೋಕುಲವಿದ್ದು ಮಂದರಗಿರಿಯಿದ್ದು
ಚಂದವಾದ ವೈಕುಂಠಲೋಕವಿದ್ದು
ವೃಂದಾವನಪತಿಸುಖ ಗೃಹವೆನುತಲಿ
ಇಂದಿರಾದೇವಿಯಿಂ ಸಹಿತ ಶ್ರೀಕೃಷ್ಣನು ೩

ಸುರದುಂದುಭಿ ದಂಧಣರೆಂದು ಮೊಳಗಲು
ಸುರರು ಹೂವಿನ ಮಳೆಯನು ಕರೆಯ
ತರುಣ ತುಲಸಿಮಾಲೆಯಲುಗಲಿಂದಿರೆ ಸಹ
ಗರುಡನ ಹೆಗಲಿನಿಂದಿಳಿದು ಶ್ರೀಕೃಷ್ಣನು ೪

ಉರದ ಕೌಸ್ತುಭರತ್ನ ಥಳಥಳಥಳಿಸಲು
ಕೊರಳ ವೈಜಯಂತಿಯ ಸರವಲುಗೆ
ಸರಸಿಜ ಭವಮುಖ್ಯ ಸುರರೋಲೈಸಲು
ಪರಮ ಸಂಭ್ರಮದಿಂದ ಶ್ರೀಕೃಷ್ಣರಾಯನು ೫

## ೪೭೯

ಶ್ರೀಗಣಪತಿಗೆರಗಿ ಶಾರದೆಯನು
ರಾಗದಿಂದಲಿ ಸ್ಮರಿಸಿ ಶ್ರೀಗಿರಿಜಾತೆಯ
ಲೋಕೈಕ ಮಾತೆಯ ಬೇಗದಿ ಹಸೆಗೆ
ಕರೆದ ಸುಪದಂಗಳಾ ರಾಗದಿ ಪಾಡಿ ಪೊಗಳುವೆ ೧

ಮಿಸುನಿಯ ಮಂಟಪದಿ ರಾರಾಜಿಪ
ಪೊಸಪಸೆವಣೆಯನಿಟ್ಟು ಪೊಸದೇವಾಂಗವ ಮೇಲೆ
ಪಸರಿಸಿ ಹಾಕುತ ಶಶಿಮುಖಿಯರು
ನೆರೆದೊಂದಾಗಿ ಪಾಡುತ ಕುಶಲದಿ ಹಸೆಗೆ ಕರೆದರು ೨

ಕಡೆಯಾಣಿಯ ಚಿನ್ನದ ಜಗಜ್ಯೋತಿಯ
ಎಡಬಲದೊಳಗಿಟ್ಟು ಉಡುರಾಜಮುಖಿಯರು

ಮೃಗರಾಜಕಟಿಯರು ಕಡುಬೆಡಗಿಂದ
ಪಾಡುತ ನಲಿದಾಡುತ ಮೃಡನರಸಿಯ ಹಸೆಗೆ ಕರೆದರು ೩

ಚಿನ್ನದಪಿಲ್ಲಿಮಿಂಚು ಉಂಗುರಗಳು
ರನ್ನದಲ್ಲಣಿವೆಟ್ಟು ಉನ್ನತವಾದ ಕಾಲ್ಗಡಗ
ಸರ್ಪಣಿಗೆಜ್ಜೆಯನ್ನು ತಳೆದ ಪಾದಪದುಮ
ದಿಂದೊಮ್ಮೆವ ಪೂರ್ಣೇಂದು ಮುಖಿಯರು ॥ ಹ ೪

ವರರತ್ನಖಚಿತವಾದ ಗೆಜ್ಜೆಮೊಗ್ಗೆಯ
ಸರವೊಡ್ಯಾಣವು ಡಾಬು ಮಿರುಪಮಂಡೆಳೆಯುಡು
ದಾರ ಕಿಂಕಿಣಿಗಳ ಸರಫಲಿರೆನೆ ಚೆಂಗಾವಿ
ಸೀರೆಯನುಟ್ಟು ಗಿರಿರಾಜತನುಜೆ ॥ ಹ ೫

ಚಳಿಕೆ ಹಿಂಬಳೆದೊರೆಯ ಚೂಡಾಕಟ್ಟು
ಬಳೆಕಂಕಣ ಕಡಗ ಪೊಳೆವ ಮುಂಗೈಯ
ಮುರಾರಿ ಮುತ್ತಿನದಂಡೆ ಥಳಥಳಿಸುವ
ಬೆರಳುಂಗುರಗಳನಿಟ್ಟು ಲಲಿತಾಂಗಿ ಬೇಗ । ಹಸೆಗೇಳು ೬

ವರನಕ್ಷತ್ರದ ಸರವು ಏಕಾವಳಿ ಸರಗುಂಡಿನ
ಸರವು ಮಿರುಪಬಿಲ್ಸರ ಚಳ್ಯಸರ ಚಕ್ರಸರ
ಗೋಧಿಸರ ಮೋಹನಮುತ್ತಿನ ಸರಗಳನಿಟ್ಟ
ವರಕಂಬುಕಂಠಿ ಬೇಗ । ಹಸೆಗೇಳು ೭

ಅಣಿ ಮುತ್ತಿನ ಮೂಗುತಿ ಐದೆಳೆಯ ಕ-
ಟ್ಟಾಣಿ ಕಾಶಿಯ ತಾಳಿ ಮಾಣಿಕಮಯ
ಬತಿಮಲಕು ಅಡ್ಡಿಕೆ ಮಲಕಾಣಿ ಮುತ್ತಿನಬಟ್ಟು
ಮಲಕು ಸರಿಗೆಯಿಟ್ಟ ಏಣಾಕ್ಷಿ ಬೇಗ । ಹ ೮

ತೊಳಪ ಮುತ್ತಿನಮಾಲೆ ಸರ್ಪಣಿಯಂಥಳ
ಥಳಿಪ ವಜ್ರದವಾಲೆ ಚಳತುಂಬು ಮೀನ ಬಾ-

ವಲಿ ಹಂಸೆಗಿಳಿಯ ಬಾವಲಿಯು ಹೊನ್ನೂಲು
ಕುಪ್ಪಿನವೆಂಟ್ಟೆಯವಿಟ್ಟ ಕಲಹಂಸಗಮನೆ । ಹ ೯

## ೪೮೦

ಸೂಳೆವೆಂಗಳ ನಂಬಬೇಡ
ಅವರ ಖೇಳಮೇಳವ ಬಿಡೋ ಮೂಢ
ಬಲು ಜಾಲಗಾತಿಯರ ಬಲೆಗೆ ಸಿಕ್ಕದಿರು
ಯಮನಾಳೆ ಮುಡಿಸುವನೆ ಬಿಡುಬಿಡುಗಾಡ ಪ

ಸುರತಸುಖವ ತೋರಿಸುವರು
ಮನೆಯೊಳಿರುವ ಧನವ ತರಿಸುವರು
ಪರಪುರುಷನಿದಿರು ಮಾಡುವರು
ಧನ ಬರಿದಾಗೆ ತಪ್ಪು ಹೊರಿಸುವರು
ಕಡೆಗೆ ತಿರಿದು ತಾರಂದು ಕೈಯಲಿ ತೂತುಗರಟವ
ಕರೆದು ಕೊಡುವರು ಬೈವರು ದೂರುವರು ೧

ಗುರುಹಿರಿಯರ ತೊರೆಸುವರು
ಮನೆಯೊಳಿರುವ ಮಕ್ಕಳ ಮರಸುವರು
ಧನ ಬರುವತನಕ ನೋಡುವರು
ಬಾರದಿರೆ ಛಿ ಹೋಗೆಂದು ದೂಡುವರು ಗಂಧ
ಪರಿಮಳ ತಿಲಕ ತಾಂಬೂಲ ಕ್ರಮುಕದೊಳು
ಮರುಳು ಮದ್ದಿಕ್ಕಿ ಕೈವಶವ ಮಾಡುವರು ೨

ಹೆಂಡತಿಯನು ತೊರಸುವರು
ಕಂಡ ಕಂಡ ಪುರುಷರ ಕೂಡುವರು
ಮಂಡೆಗೆ ಮದ್ದನೂಡುವರು ಕಡೆಗೆ
ಭಂಡಾಟವ ಮಾಡುವರು...........
(ಅಸಮಗ್ರ)

# ಅನುಬಂಧಗಳು

೧. ಕಠಿಣ ಪದಗಳ ಅರ್ಥ

೨. ಟಿಪ್ಪಣಿಗಳು

೩. ಸಂಖ್ಯಾ ಸಂಕೇತಗಳು

೪. ಲಿಂಗಣ್ಣ ಕವಿಯ ಕೀರ್ತನೆ

೫. ಅಕಾರಾದಿ ಸೂಚಿ

# ಅನುಬಂಧ – ೧

## ಕಠಿಣ ಪದಗಳ ಅರ್ಥ

### ಅ

ಅಂಗಜ – ಮನ್ಮಥ
ಅಂಬರ – ಬಟ್ಟೆ
ಅಂಬಾ – ದೇವಿ
ಅಂಶು – ಕಿರಣ
ಅರ್ಕ – ಸೂರ್ಯ
ಅಗಿಲ – ಭಯಗ್ರಸ್ತ
ಅಡಕಿಲು – ಒಂದರ ಮೇಲೊಂದು ಏರಿಸಿಟ್ಟದ್ದು
ಅಡವು – ಸಮೃದ್ಧಿ
ಅಡಶಿರೋಶಿ – ನಿರಾಶೆ
ಅಣಿಯರು – ದೇವತೆಗಳು
ಅರ್ತಿ – ಪ್ರೀತಿ
ಅನುಸರಿಸು – ಕೂಡಿಸು
ಅಭವ – ಈಶ್ವರ
ಅಮಲ – ಪವಿತ್ರ
ಅಹಿಧರ – ಶಿವ
ಅರಶೀಲ ಗುಟ್ಟಿ – ಬಂಧಿಸಿ

### ಆ

ಆನನ – ಮುಖ

### ಇ

ಇಡಲ – ಹೊಡೆಯಲಿ
ಇಭ – ಆನೆ

### ಈ

ಈಕ್ಷು – ಕಬ್ಬು
ಈರೈದು – ಹತ್ತು
ಈಕ್ಷಣ – ಹೆಂಡತಿ, ಮಕ್ಕಳು ಹಾಗೂ ಹಣದ ವ್ಯಾಮೋಹ

### ಉ

ಉಡುರಾಜ – ಚಂದ್ರ
ಉಡುವಣಿ – ಸೊಂಟಕ್ಕೆ ಕಟ್ಟುವ ಬೆಳ್ಳಿದಾರ
ಉತ್ತಾರ – ಉದ್ಧಾರ
ಉನ್ಮನಿ – ಪರಮಾನಂದ ಸ್ಥಿತಿ

### ಎ

ಎಂಗರವಟ್ಟು – ಅವಿವೇಕಿ
ಎನಿಕೆ – ಭಾವನೆ, ಎಣಿಕೆ ?
ಎರಿಮುಂಡೆ – ಒಂದು ಹೀನಾಯದ ಬೈಗಳು

## ಔ

ಔಡಿಲು - ಭಾವಣೆಗೆ ಹೊದಿಸುವ ಹಂಚು

ಓಡು(ನಾ) - ತಲೆಬುರುಡೆ

## ಕ

ಕಂಟಕಿ - ಅಡ್ಡಿಪಡಿಸುವವ

ಕಂಟಲೆ - ಕಸುಬೆ ಚೀಲ

ಕಂತು - ಮನ್ಮಥ

ಕಂಬು - ಶಂಖ

ಕಕ್ಕಸಬಡು - ದುಃಖಪಡು

ಕಟಕ - ಸೈನ್ಯ

ಕದಪು - ಕೆನ್ನೆ

ಕಪನಿ - ತೋಳಿಲ್ಲದ ನಿಲುವಂಗಿ

ಸಖ - ಕಮಲ ಜನಪಿತ ಶಿವ

ಕಪ್ಪುರ - ಭಿಕ್ಷಾಪಾತ್ರೆ

ಕಪ್ಪುಗೊರಲ - ಶಿವ

ಕಮನೀಯ - ಸುಂದರ

* ಹಿಂದೆ ಮುದ್ರಿತವಾದ ಪುಸ್ತಕ ಗಳಲ್ಲಿನ ಅರ್ಥವನ್ನು ಹೆಚ್ಚಾಗಿ ಕೊಡಲಾಗಿದೆ.

ಕರಡಿ - ಒಂದು ಚರ್ಮ ವಾದ್ಯ

ಕರಣ - ಇಂದ್ರಿಯ

ಕಲಕೀರ - ಹಂಸ

ಕವಾಟ - ಬಾಗಿಲು

ಕಳರು - ಭಯಪಡು

ಕಾಕಧಾವಂತರು- ಆತುರ ಪಡಿಸುವ ವ್ಯಾಪಾರಿಗಳು

ಕಾವಡಿ - ಅಡ್ಡೆ

ಕಾಷಾಯಾಂಬರ- ಕಾವಿಬಟ್ಟೆ

ಕಾಸೆ - ಕಚ್ಚೆ ಪಂಚೆ

ಕಾಹುರ - ಆವೇಶ

ಕಾಳಮೂಳ - ಮೂರ್ಖ

ಕಿಂಕಾಪು - ಚಿನ್ನದ ಎಳೆ ಸೇರಿಸಿ ನೆಯ್ದ ರೇಶ್ಮೆ ಬಟ್ಟೆ

ಕಿಂಚ - ಅಲ್ಪ

ಕುಂಜರ - ಆನೆ

ಕುಂಟಿನಿ - ಗಂಡುಹೆಣ್ಣು ಹೊಂದಿಸುವವಳು

ಕುಂದಣ - ಚಿನ್ನ

ಕುಂಭಿಣಿ - ಭೂಮಿ

ಕುಣಿಗಲ್ಲ - ಗುಳಿ ಬಿದ್ದಗಲ್ಲ

ಕುತ್ತ - ರೋಗ

ಕುರುಜು - ಗೋಪುರ

ಕುರುಳು - ಕೂದಲು

ಕೊಂಟೆ - ?

ಕೊನಬು - ಬೆಡಗು

ಕೊತ್ತು - ಇರಿ, ಕೊಚ್ಚು

ಕೊಪ್ಪು - ಜಡೆಬಿಲ್ಲೆ

ಕೋರಿ - ಹದವಾದ

ಕೋಚು - ಮಾಡು, ಅಣಕಿಸು

ಕೋರಿಶೆಟ್ಟಿ - ಸಂಚಾರ ಮಾಡುತಾ ವ್ಯಾಪಾರ ಮಾಡುವವ

ಕೌಪ – ಕೌಪೀನ

## ಖ

ಖಡ್ಡಿ – ?

ಖರವಾದಿ – ಒರಟು ಮಾತನಾಡುವವ

ಖಳೆ – ತೇಜಸ್ಸು

ಖ್ಯಾಲಮೇಲ – ಕ್ಷಣಿಕ

ಖೂನ – ಗುರುತು

## ಗ

ಗಬಕು – ನುಂಗು

ಗರ – ಗ್ರಹ

ಗುಂಗಾಡು – ಸೊಳ್ಳೆ

ಗೊಜ್ಜಿಲು – ಕೆಸರು

ಗೊಡ್ಡಾವು – ಗೊಡ್ಡು ಆಕಳು

## ಚ

ಚಂಗು – ಡೊಂಕಾದ

ಚಡಿ – ಕೋಲು

ಚತುಷ್ಟತನು – ?

ಚತುಕ್ಷಸ್ನಾ –

ಧಾನ – ಧರ್ಮ, ಅರ್ಥ

ಕಾಮ – ಮೋಕ್ಷ

ಚರಗೇಡಿ – ಆಚರಣೆಗಳನ್ನು ಹಾಳು ಮಾಡು ವವನು

ಚರಿ – ಭಿಕ್ಷೆ

ಚವಲು – ಚಾಮರ, ಕೂದಲು

ಚಳಕಿ – ತೋಳಿನ ಆಭರಣ

ಚಳ್ಳ – ಒಂದು ಆಭರಣ

ಚಿಂತಾಕು – ಅಡ್ಡಿಕೆ

ಚಿಂತಾಯಕ – ಭಗವಂತನ ಚಿಂತನೆ ಮಾಡುವವ

ಚಿಟ್ಟೆ – ಪಗಡೆಯದಾಳ

ಚಿದ್ದೀಪ – ಆತ್ಮಪ್ರಕಾಶ

ಚೀನಿ – ಸಕ್ಕರೆ

ಚೊಂಗೆ – ಚಿಲುಮೆ

## ಜ

ಜಂಬಾಳಗಟ್ಟೆ – ಕೆಸರಿನ ಭೂಮಿ

ಜಂಭಭೇದಿ – ಇಂದ್ರ

ಜಂಭಾರಿ – ಇಂದ್ರ

ಜವೆಯ ಬೂದಿ– ಮಂಕುಬೂದಿ

ಜಸ – ಯಶ

ಜಾವು – ಕಾವಲಿನ ಸ್ಥಳ

ಜೀನುಗಾರ – ಚರ್ಮ ವ್ಯಾಪಾರಿ

ಜೂಟ – ಜಡೆಗಟ್ಟಿದ ಕೂದಲು

ಜೌಗು – ಕೆಸರು

## ತ

ತಂಕ – ಸೊಕ್ಕು

ತನಿವಾತ – ಹಿತವಾದ ಗಾಳಿ

ತತಿ – ಸಮೂಹ

ತಲ್ಪ – ಹಾಸಿಗೆ

ತವಿಸು – ನಾಶ ಮಾಡು

| | | |
|---|---|---|
| ತಳಿಸು | – | ಕುಟ್ಟು |
| ತಿದಿ | – | ಗಾಳಿಯ ಚರ್ಮದ ಚೀಲ |
| ತುರುಗ | – | ಕುದುರೆ |
| ತೊಳಸು | – | ಸುತ್ತಿ ತಿರುಗಿಸು |
| ತ್ವಕ್ಕು | – | ಚರ್ಮ |

## ದ

| | | |
|---|---|---|
| ದಾಂತಿ | – | ಸಂಯಮ |
| ದಾಯ | – | ಸಮಯ |
| ದಾರ | – | ಹೆಂಡತಿ |
| ದಾರವಟ್ಟ | – | ಹೊಸ್ತಿಲು |
| ದಿಡ್ಡಿ | – | ಕೋಟೆಯ ಹೆಬ್ಬಾಗಿಲು |
| ದೀಧಿತಿ | – | ಕಾಂತಿ |
| ದುಬುಕು | – | ಏಟು, ಗುದ್ದು |
| ದುಸುಮಾನ | – | ದುಶ್ಮಾನ್, ವೈರಿ |
| ದೂಷಣ | – | ಬೈಗಳು |
| ದೇಣಿದಾರ | – | ಹಣ ಕೊಟ್ಟವನು |
| ದೇವಾಂಗ | – | ಬಟ್ಟೆ |
| ದೊಡ್ಡಿಲಕಾಯಿ | – | ಕಂಚಿಕಾಯಿ |
| ದೌಸು | – | ? |

## ಧ

| | | |
|---|---|---|
| ಧಾವತಿ | – | ಶ್ರಮ |
| ಧೂಳಿಗೋಟೆ | – | ನಾಶ |
| ಧೃತಿ | – | ಧೈರ್ಯ |
| ಧೌತ | – | ಬಿಳಿ, ಶುಭ್ರ |

## ನ

| | | |
|---|---|---|
| ನಚ್ಚು | – | ನಂಬು |
| ನನೆ | – | ಮೊಗ್ಗು |
| ನಿಗಮಧರ | – | ಬ್ರಹ್ಮ |
| ನಿರೀಹ | – | ಇಚ್ಛಾರಹಿತ |
| ನೀಹಾರ | – | ಮುತ್ತು |
| ನುಗ್ಗಾಗು | – | ಪುಡಿಯಾಗು |
| ನೆಲ್ಲು | – | ಬತ್ತ |

## ಪ

| | | |
|---|---|---|
| ಪಚ್ಚಳ | – | ನಿತಂಬ |
| ಪಟೀರ | – | ಶ್ರೀಗಂಧ ಚಂದನ |
| ದದಪುಗೆಟ್ಟು | – | ಗೌರವವಿಲ್ಲದೆ |
| ಪರಜ | – | ಕತ್ತಿಯ ಹಿಡಿ |
| ಪಾಕಾರಿ | – | ಇಂದ್ರ |
| ಪಾಟ | – | ಹಾಡು |
| ಪಾಟಿಸು | – | ಬಯಸು |
| ಪಾಟೀರ | – | ಹರವು |
| ಪೀಕು | – | ಹೊರ ಹಾಕುವುದು |
| ಪುಷ್ಕರ | – | ಕಮಲ ಕೊಳ |
| ಪೂರಾಯ | – | ಪರಿಪೂರ್ಣ |
| ಪ್ರತ್ಯಯ | – | ಜ್ಞಾನ |
| ಪೋಕ | – | ನೀಚ,ನಿಷ್ಪ್ರಯೋಜಕ |

## ಬ

| | | |
|---|---|---|
| ಬಸಿ | – | ಬೀಳು, ವಶವಾಗು |
| ಬಿಡೆಯ | – | ಸಂಕೋಚ |
| ಬಿದಿರುತ್ತ | – | ಚೆದುರುತ್ತ |

ಬಿತ್ತ – ಬೀಜ
ಬುದ್ದಲಿ – ಎಣ್ಣೆ ತುಂಬುವ ಚರ್ಮದ ಚೀಲ
ಬೂಟಕ – ಕಪಟ

## ಭ

ಭರ್ಗ – ಶಿವ
ಭದ್ರೆ – ಮಂಗಳ ಸ್ವರೂಪಿಣಿ
ಭೂದಿವಿಜ – ಬ್ರಾಹ್ಮಣ
ಭರಣಿಯರಸ – ಭರಣಿ ನಕ್ಷತ್ರದಲ್ಲಿ ಮಳೆ ತರುವವ ವರುಣ

## ಮ

ಮಖಮಲ್ಲು – ರೇಷ್ಮೆಬಟ್ಟೆ
ಮಡವ – ?
ಮದಮುಖ – ಮೂರ್ಖ
ಮನದೆರೆ – ಮನಸ್ಸಿನ ಚಂಚಲತೆ
ಮರಕತ – ಪಚ್ಚೆ
ಮಲ್ಲವಮಾಡು – ಗಟ್ಟಿಗೊಳಿಸು
ಮಾಗಿ – ಚಳಿಗಾಲ
ಮಿಂಡಿತಿ – ಸೂಳೆ
ಮಿಸುನಿ – ಚಿನ್ನ
ಮಿಹಿರ – ಸೂರ್ಯ
ಮುಟ್ಟುಚಟ್ಟು – ಮೈಲಿಗೆ
ಮುಡುದಾರ – ಅವಿವೇಕಿ
ಮುರಿಕೆ – ಹೊಸೆಯುವಿಕೆ
ಮುರಿಕಿ – ತೊದಲು
ಮುಸುವ – ಕರಿಮುಖದ ಕೋತಿ
ಮುಸ್ತೈದು – ಸಲಕರಣೆ
ಮೃಗಮದ – ಕಸ್ತೂರಿ
ಮೃಷೆ – ಸುಳ್ಳು
ಮೇಲ್ಬಂದಿ – ತೋಳು ಬಂದಿ
ಮೊಗೆ – ಮಣ್ಣಿನ ಚಂಬು
ಮೊಳೆ – ಕುಡಿ

## ಯ

ಯವಲ – ಬಿದಿರ ಅಕ್ಕಿ

## ರ

ರದನ – ಹಲ್ಲು
ರಾಕೇಂದು – ಚಂದ್ರ
ರಾಗಟೆ – ಹೆಂಗಸರು ತಲೆಗೆ ಧರಿಸುವ ಆಭರಣ
ರಾವ – ಧ್ವನಿ

## ವ

ವಗ್ಗಿಗರು – ಸಮೂಹವುಳ್ಳವರು
ವಸ್ತಿಯಕಾರ – ಮನೆಯ ಒಡೆಯ
ವಾಮಾಂಕ – ಎಡಭಾಗ
ವಾಯು – ಮೋಸ
ವಾರಿ – ನೀರು
ವಾಸರ – ಬೇಸರ
ವಿಪಂಚಿ – ವೀಣೆ
ವಿಪಿನ – ಕಾಡು
ವಿಷದರ – ಸರ್ಪ

ವಿಸರ – ಸಮೂಹ
ವೀಜಿಸು – ಬೀಸು
ವೃಂದಾರಕ – ಬ್ರಾಹ್ಮಣ
ವೆಗ್ಗಳ – ಶ್ರೇಷ್ಠ
ವೇಸಿ – ವೇಶ್ಯೆ

## ಶ

ಶಂಬರಾದಿಯ ಪಿತ – ವಿಷ್ಣು
ಶಟವಿ – ದುರಹಂಕಾರಿ
ಶಠಣಿ – ಅಹಂಕಾರ
ಶತಪತ್ರದಳ
ದೇಹ – ಬ್ರಹ್ಮ
ಶರ್ವಾಣಿ – ಪಾರ್ವತಿ
ಶಾತಕುಂಭ – ಚಿನ್ನ
ಶಾವದ – ?
ಶಿಲೀಮುಖಿ – ಬಾಣ
ಶಿವನಿಕರ – ನರಿಗಳ ಸಮೂಹ
ಶುಂಠ – ಮೂರ್ಖ
ಶೂಲಿ – ಶಿವ

## ಸ

ಸಂದಳಿ – ಸಂದಣಿ
ಸಂವಿತ್ತು – ಜ್ಞಾನ
ಸಕಲಾತಿ – ದುಪ್ಪಟಿ
ಸಕ್ರಂದನ – ಇಂದ್ರ
ಸಡಕು – ಪ್ರಾಣಿಗಳ ಅಲಂಕಾರದ ಕುಚ್ಚು
ಸಮೇಳ – ಒಂದು ವಾದ್ಯ
ಸವನಿಸು – ಈಡೇರಿಸು
ಸಾಯಸ – ಆಯಾಸ
ಸಾರಾಯ – ಸಾರಾಂಶ
ಸ್ಥಾಣು – ಶಿವ
ಸಿಂಗಲೀಕ – ಕಪಿ
ಸಿಂಗಾಡಿ – ಬಿಲ್ಲು
ಸಿಂಗಾರ – ಅಡಿಕೆ ಹೂವು
ಸಿಳೀಮುಖಿ – ಬಾಣ
ಸೀಗುರಿ – ಚಾಮರ
ಸುತ್ರಾಮ – ಇಂದ್ರ
ಸ್ತೋಮ – ಸಮೂಹ

## ಹ

ಹಂಕ – ಅಹಂಕಾರಿ
ಹಂಕಾರ – ಅಹಂಕಾರ
ಹಗರಣ – ನಟನೆ
ಹರಿಸುಂಡಲು – ಆನೆಯ ಸೊಂಡಿಲು
ಹಲ್ಲಣ – ಜೀನು
ಹವಾಯಿ – ?
ಹಾದಿಕಾರ – ದಾರಿ ಬಿಡಿಸುವ ಸೇವಕ
ಹಾಸಂಗಿ – ಪಗಡೆಯ ಹಾಸು
ಹಿಂಡಿಲು – ಕೆಚ್ಚಲು
ಹೆಂಡೆ – ಸಗಣಿ
ಹೆಡಕುತ್ತ – ಕುತ್ತಿಗೆಯ ಹಿಂಭಾಗ
ಹೇಷ – ಕುದುರೆ
ಹೊಡೆಗಡೆ – ಹೊಡೆದು ಬೀಳಿಸು
ಹೊಲಬು – ಕೇಡು
ಹೋಕೆ – ಮೋಸ ಮಾಡುವಿಕೆ

# ಅನುಬಂಧ – ೨

## ಟಿಪ್ಪಣಿಗಳು

೧. *ಅಣಿಮಾಷ್ಟಾಂಗ ಯೋಗ :* ಇದು ಯೋಗದ ವಿವಿಧ ಸ್ತರಗಳನ್ನು ತಿಳಿಸುತ್ತದೆ. ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ. ಶಿವಯೋಗ ಪ್ರಕಾರದಲ್ಲಿ : ಭಕ್ತಿ, ವೈರಾಗ್ಯ, ಅಭ್ಯಾಸ, ಧ್ಯಾನ, ಏಕಾಂತ, ಭಿಕ್ಷಾಟನೆ, ಲಿಂಗಾರ್ಚನೆ, ಶಿವಸ್ಮರಣೆ.

೨. *ಅಪರೋಕ್ಷಾನುಭವ :* ಆತ್ಮಾನುಭವ, ಭಗವಂತನ ಅನುಭವ.

೩. ಅವಧೂತ : ಎಲ್ಲ ಬಗೆಯ ಅಭಿಮಾನಗಳನ್ನು ತಳ್ಳಿ ಹಾಕಿದವನು. ಬ್ರಹ್ಮಚಾರಿ ಸಂಸಾರದ ಬಗ್ಗೆ ನಿರ್ಲಿಪ್ತನಾದವನು. ನಿರ್ಜನ ಪ್ರದೇಶದಲ್ಲಿ ವಾಸಿಸುತ್ತಿದ್ದು ಭಗವಂತನ ಧ್ಯಾನದಲ್ಲಿ ತನ್ಮಯನಾದವನು.

೪. *ಅವಿದ್ಯಾ :* ಸಂಶಯ, ವಿಪರ್ಯಯ, ಸ್ವಪ್ನ, ಇವು ಮೂರು ಬುದ್ಧಿಗೆ ಸಂಬಂಧಿಸಿದ್ದು. ಸಾಮಾನ್ಯಾರ್ಥದಲ್ಲಿ ವಿದ್ಯೆ ಇಲ್ಲದಿರುವ ಸ್ಥಿತಿ, ಅಜ್ಞಾನ.

೫. *ಅಷ್ಟ ಪಾಶಗಳು :* ಇವು ಮಾನವನನ್ನು ಬಂಧಿಸಿ ಕುರುಡನನ್ನಾಗಿ ಮಾಡುತ್ತವೆ. ಅವೆಂದರೆ ಲಜ್ಜೆ, ಜುಗುಪ್ಸೆ, ಕುಲ, ಶೀಲ, ಭಯ, ಶಂಕೆ, ತೃಷೆ, ಗರ್ವ.

೬.. *ಅಷ್ಟ ಮದಗಳು :* ಇವು ಮನುಷ್ಯನನ್ನು ಅಹಂಕಾರಿಯನ್ನಾಗಿ ಮಾಡುತ್ತವೆ. ಅಂತಹವು ಕುಲ, ಶೀಲ, ರೂಪ, ಯೌವನ, ಧನ, ವಿದ್ಯೆ, ರಾಜ್ಯ, ಭಾಗ್ಯ.

೭. *ಅಷ್ಟ ಸಿದ್ಧಿ :* ಈ ಸಿದ್ಧಿಗಳು ಬೌದ್ಧಿಕವಾದವುಗಳು. ಇವುಗಳು ಊಹಸಿದ್ಧಿ, ಶಬ್ದಸಿದ್ಧಿ, ಅಧ್ಯಯನ ಸಿದ್ಧಿ, ಮೋದ ಸಿದ್ಧಿ, (ಆಧ್ಯಾತ್ಮಿಕ ದುಃಖ ನಿವೃತ್ತಿ) ಪ್ರಮುದಿತ ಸಿದ್ಧಿ (ಆಧಿದೈವಿಕವನ್ನು ದಾನಾದಿಗಳಿಂದ ಗೆಲ್ಲುವುದು) ಸುಹೃತ್ಪ್ರಾಪ್ತಿ (ಸ್ನೇಹಿತರಿಂದಾಗುವ ಅರ್ಥ ಸಿದ್ಧಿ) ದಾನರೂಪ (ಗುರುಜನ ಸೇವಾ ಸಿದ್ಧಿ).

೮. *ಅಸಲನಳಿನವೆಂಬ ಸಿಂಬೆಯ ಮಾಡಿ :* ಅಪ್ಪಟವಾದ ತಾವರೆಯ ಮೃದುವಾದ ಬಳ್ಳಿಯನ್ನು ಸಿಂಬೆಯನ್ನಾಗಿ ಮಾಡಿಕೊಂಡು ಪೇಟದ ರೀತಿಯಲ್ಲಿ ತಲೆಯ

ಮೇಲೆ ಇಟ್ಟುಕೊಳ್ಳುವುದು.

೯. ಅಸುರ ಪ್ರಕೃತಿ : ರಾಕ್ಷಸ ಸ್ವಭಾವದ ಗುಣ. ಬೇರೆಯವರನ್ನು ಹಿಂಸಿಸಿ ಅದರಲ್ಲಿಯೇ ಸಂತೋಷ ಪಡುವ ಸ್ವಭಾವ.

*೧೦. ಆತ್ಮನೆ ಅವನು, ಗುರು ಅವನೆ :* ತನಗೆ ತಾನೇ ಗುರು ಎಂಬ ಅರ್ಥ ಇಲ್ಲಿದೆ. ಆತ್ಮನೇ ನಮ್ಮ ಸರ್ವಸ್ವಕ್ಕೂ ಗುರು. ಈ ಆತ್ಮ ಅದ್ವೈತ ತತ್ವದಂತೆ ಪರಮಾತ್ಮನೇ. "ತತ್ ತ್ವಂ ಅಸಿ" ಎಂಬ ಆಶಯ ಇಲ್ಲಿ ವ್ಯಕ್ತವಾಗುತ್ತದೆ.

*ಆರು ಎಂಟನೆ ಕಟ್ಟಿ :* ಅರಿ ಷಡ್ವರ್ಗಗಳು ಆರು ಅಂದರೆ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳು. ಅಷ್ಟ ಭೋಗಗಳು ಎಂಟು ಅವೆಂದರೆ ಶಯ್ಯಾ, ವಸನ, ಆಭರಣ, ಗಂಧ, ಪುಷ್ಪ, ತಾಂಬೂಲ, ಸ್ತ್ರೀ.

*ಆರು ಚಕ್ರ :* ಮೂಲಾಧಾರ

*ಈಷಣತ್ರಯ :* ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾ. ಅರ್ಥೇಷಣ, ಪುತ್ರೇಷಣ, ಧಾರೇಷಣ ಇವು ಇಚ್ಛೆಗೆ ಸಂಬಂಧಿಸಿದ್ದು. ಇವಕ್ಕೆ ಇಚ್ಛಾತ್ರಯವೆಂತಲೂ ಕರೆಯು ತ್ತಾರೆ. ಅಂದರೆ ಮಕ್ಕಳು, ಹೆಂಡತಿ, ಹಣ ಇವುಗಳ ಮೋಹ. ಏಡಿ ಹಾದರವಾಡೆ ಗೊದರ ಗಪ್ಪೆಯ ಕೂಡಿ ಎಲ್ಲರಿಗೂ ಕೋಳಹಾಕೆಂಬ ಗಾದೆ. ಇದು ತಪ್ಪು ಮಾಡಿದವರನ್ನು ಬಿಟ್ಟು ತಪ್ಪು ಮಾಡದವರಿಗೆ ಶಿಕ್ಷೆ ವಿಧಿಸುವ ಮೂರ್ಖ ಅಧಿಕಾರಿಯನ್ನು ವಿಡಂಬಿಸುವ ಗಾದೆ. ಕೋಣನಿಗೆ ಜ್ವರವಾದರೆ ಎತ್ತಿಗೆ ಬರೆ ಹಾಕಿದರು ಎಂಬ ಗಾದೆಯನ್ನು ಇದು ಹೋಲುತ್ತದೆ.

*ಕರ್ಣ :* ಕುಂತಿ ಮದುವೆಗೆ ಮುಂಚೆಯೇ ಸೂರ್ಯನನ್ನು ಆಹ್ವಾನಿಸಿ ಇವನನ್ನು ಹೆತ್ತು ನಂತರ ನೀರಿನಲ್ಲಿ ತೇಲಿಬಿಟ್ಟಳು. ಇವನು ಹುಟ್ಟುವಾಗಲೇ ಸಹಜ ಕುಂಡಲ ಕವಚಗಳನ್ನು ಪಡೆದಿದ್ದನು. ಇವುಗಳನ್ನು ವೇಷ ಮರೆಸಿ ಕೊಂಡು ಬಂದು ದಾನ ಬೇಡಿದ ಇಂದ್ರನಿಗೆ ಹರಿದು ಕೊಡುತ್ತಾನೆ.

*ಕರ್ದಮ :* ಬ್ರಹ್ಮ ಮಾನಸ ಪುತ್ರರಾದ ಒಂಬತ್ತು ಮಂದಿ ಬ್ರಹ್ಮರ್ಷಿಗಳಲ್ಲಿ ಒಬ್ಬ ಈತನು ವಿಷ್ಣ ಭಕ್ತಾಗ್ರೇಸರ, ಕಪಿಲ ಇವನ ಮಗ, ಇವನಿಗೆ ಒಂಬತ್ತು ಜನ ಹೆಣ್ಣು ಮಕ್ಕಳಿದ್ದು ಇವರೆಲ್ಲಾ ಶ್ರೇಷ್ಠ ಋಷಿಗಳನ್ನು ಮದುವೆಯಾಗಿದ್ದರು.

*ಕರ್ಮೇಂದ್ರಿಯ :* ಪಂಚಕರ್ಮಗಳಿಗೆ ಸಂಬಂಧಿಸಿದ್ದು ಅವೆಂದರೆ ಉತ್ಕ್ಷೇಪಣ, ಅವಕ್ಷೇಪಣ ಅಕುಂಚನ ಪ್ರಸರಣ, ಗಮನ.

*ಕಶ್ಯಪ :* ಒಬ್ಬನ ಮಹರ್ಷಿ ಬ್ರಹ್ಮನ ಮಗನಾದ ಮರೀಚಿ ಮಹರ್ಷಿಯಿಂದ ಕರ್ದಮ ಪುತ್ರಿಯಾದ ಕಲೆಯಲ್ಲಿ ಜನಿಸಿದವ ಸೃಷ್ಟಿ ಕಾರ್ಯದಲ್ಲಿ ಚತುರ್ಮುಖನಿಗೆ ಸಹಾಯ ನೀಡುತ್ತಿದ್ದ.

*ಕುಂಭಕ :* ಪ್ರಾಣಾಯಾಮದ ಒಂದು ಸ್ಥಿತಿ ಉಸಿರನ್ನು ಒಂದು ಹಂತದಲ್ಲಿ ನಿಯಂತ್ರಿಸುವುದು.

*ಕುಂಭ ಸಂಭವ :* ಮಿತ್ರಾ ವರುಣರೆಂಬ ಋಷಿಗಳು ಒಮ್ಮೆ ಊರ್ವಶಿಯನ್ನು ಕಂಡು ಮೋಹಿತರಾಗಲು ಊರ್ವಶಿ ಅವರ ವೀರ್ಯವನ್ನು ಒಂದು ಕುಂಭದಲ್ಲಿ ಇರಿಸಿದಳು. ಇದರಿಂದ ಅಗಸ್ತ್ಯನೂ, ವಸಿಷ್ಠನೂ ಜನಿಸಿದರು. ಇವರನ್ನು ಕುಂಭ ಸಂಭವ ಎನ್ನುತ್ತಾರೆ.

*ಗರುಡಗೆ ಅಮೃತವು ಸಿದ್ಧಿಸಿತು :* ಗರುಡನ ತಾಯಿಯಾದ ವಿನತೆ ಕದ್ರುವಿನ ದಾಸಿಯಾಗಿದ್ದಳು. ಆದ್ದರಿಂದ ಗರುಡನಿಗೂ ದಾಸ್ಯವಿತ್ತು. ಗರುಡ ದೇವಲೋಕಕ್ಕೆ ಹೋಗಿ ಅಮೃತ ರಕ್ಷಕರನ್ನು ಘಟ ಸರ್ಪಗಳನ್ನು ನಾಶ ಮಾಡಿ ವಜ್ರಾಯುಧವನ್ನು ಎದುರಿಸಿ ಅಮೃತವನ್ನು ತಂದು ತಾಯಿಯ ದಾಸ್ಯವನ್ನು ನೀಗಿದ. ಚಂಡಮುಂಡಾಸುರ (ವಂ) ಇವರಿಬ್ಬರೂ ಸಹೋದರರಾಗಿದ್ದು ಶುಂಭ-ನಿಶುಂಭರಲ್ಲಿ ಸೇನಾಪತಿಗಳಾಗಿದ್ದರು. ಈರ್ವರೂ ಮಹಾಕಾಳಿಯಿಂದ ಹತರಾದರು.

*ಚಿನ್ಮಯ-ಚಿದ್ರೂಪ :* ಪರಶಿವನ ಗುಣ ವಿಶೇಷಗಳು, ಚೈತನ್ಯ ಸ್ವರೂಪನಾದ ಭಗವಂತ.

*ಜಲಂಧರ :* ಒಬ್ಬ ಘೋರ ರಾಕ್ಷಸ ಶಿವನ ಕ್ರೋಧಾಗ್ನಿಯಿಂದ ಲವಣ ಸಮುದ್ರದಲ್ಲಿ ಜನಿಸಿದವನ. ಅಲ್ಪಾಯುಷಿ ಶಿವನಿಂದಲೇ ಮರಣ ಹೊಂದುತ್ತಾನೆ.

*ಜ್ಞಾನ ಜ್ಞೇಯ ಜ್ಞಾತೃ :* ಜ್ಞಾನವೆಂದರೆ ತಿಳುವಳಿಕೆ. ಅರಿವು ಅದು ಬ್ರಹ್ಮ ಜ್ಞಾನಕ್ಕೆ ಸಂಬಂಧಿಸಿದ್ದು. ಜ್ಞೇಯವೆಂದರೆ ತಿಳಿಯಬೇಕಾದ ವಿಷಯ. ಅದು ಪರಬ್ರಹ್ಮನನ್ನು ತಿಳಿಯು ವಂತದು. ಇದನ್ನು ತಿಳಿದುಕೊಳ್ಳುವವನೆ ಜ್ಞಾತೃ.

*ತತ್ತ್ವಮಸಿ :* ಅದು ನಾನೇ ಆಗಿದ್ದೇನೆ. ಅಂದರೆ ಆತ್ಮವು ಪರಮಾತ್ಮ ಬೇರಲ್ಲ ಎಂಬ ತತ್ತ್ವ. ಅದ್ವೈತದ ಮುಖ್ಯ ವಿಚಾರಗಳಲ್ಲಿ ಒಂದು. ತಾನೇ ತಾನೀಗ ಪರಾತ್ಪರನು : ಗುರುವಾದವನು ಬ್ರಹ್ಮಾನುಭವ ಪಡೆದಾಗ ಅತ್ಯಂತ ಶ್ರೇಷ್ಠನಾಗುತ್ತಾನೆ. ಅತ್ಯಂತ ಪವಿತ್ರನೆನಿಸುತ್ತಾನೆ. ಅವನೇ ಬ್ರಹ್ಮನಾಗುತ್ತಾನೆ. ತಿಳಿದುಕೋ ನಿನ್ನ ನೀನು : 'ಆತ್ಮಾನಂ ವಿದ್ಧಿ' ಎಂಬ ಉಪನಿಷತ್ತಿನ ಮಾತು ಅಂದರೆ ತನ್ನೊಳಗಿನ ಆತ್ಮನನ್ನು ತಿಳಿದುಕೊಳ್ಳುವುದು.

*ದಧೀಚಿ :* ಮೊದಲ ಸ್ವಾಯುಂಭುವ ಮನ್ವಂತರದಲ್ಲಿ ಬ್ರಹ್ಮ ಮಾನಸ ಪುತ್ರನಾದ ಅಥರ್ವಣ ಮಹರ್ಷಿಯಿಂದ, ಕರ್ದಮ ಪುತ್ರಿ ಶಾಂತಿ ಎಂಬುವಳಿಂದ ಜನಿಸಿದ. ಒಮ್ಮೆ ದೇವತೆಗಳು ದಧೀಚಿಯಲ್ಲಿ ತಮ್ಮ ಅಸ್ತ್ರಗಳನ್ನು ನ್ಯಾಸವಾಗಿಟ್ಟು ಬಹಳ ವರ್ಷಗಳ ಕಾಲ ಕೊಂಡೊಯ್ಯದಿದ್ದಾಗ ಅವು ತುಕ್ಕು ಹಿಡಿಯತೊಡಗಿದವು ಇದರಿಂದ ದಧೀಚಿ ಆ ಅಸ್ತ್ರಗಳನ್ನೆಲ್ಲಾ ಜಲದಲ್ಲಿ ಅಭಿಮಂತ್ರಿಸಿ ಪಾನಮಾಡಿದನು. ಕೆಲ ಕಾಲಾನಂತರ ದೇವತೆಯರು ಅಸ್ತ್ರಗಳನ್ನು ಕೇಳಿದರು. ನೀವು ನನ್ನ ಬೆನ್ನು ಮೂಳೆಯನ್ನು ತೆಗೆದುಕೊಂಡು ಅಸ್ತ್ರ ಮಾಡಿಕೊಳ್ಳಲು ತಿಳಿಸಿ ದೇಹತ್ಯಾಗ ಮಾಡಿದನು.

*ದೂರ್ವಾಸ :* ಒಬ್ಬ ಮಹರ್ಷಿ. ಅತ್ರಿ ಮಹರ್ಷಿಯಿಂದ ಅನಸೂಯೆಯಲ್ಲಿ ಶಂಕರನ ಅಂಶದಿಂದ ಜನಿಸಿದವ. ದತ್ತಾತ್ರೇಯನೂ, ಚಂದ್ರನೂ ಈತನ ಒಡಹುಟ್ಟಿದವರು ದೂರ್ವಾಸನು ಇಂದ್ರನಿಗೆ ಪ್ರಸಾದ ರೂಪವಾಗಿ ಹೂಮಾಲೆ ಕೊಟ್ಟಾಗ ಅದನ್ನು ಆನೆಯ ಮೇಲೆ ಹಾಕಲು ಆನೆ ಅದನ್ನು ನೆಲಕ್ಕೆ ಬೀಳಿಸುತ್ತದೆ. ಕುಪಿತನಾದ ದೂರ್ವಾಸ ಇಂದ್ರನಿಗೆ ಶಾಪ ಕೊಡುತ್ತಾನೆ. ಒಮ್ಮೆ ದೂರ್ವಾಸ ಕಾಶಿಯಲ್ಲಿ ಶಿವನನ್ನು ಕುರಿತು ತಪಸ್ಸು ಮಾಡಿದರು ಶಿವ ಪ್ರತ್ಯಕ್ಷನಾಗದಿದ್ದಾಗ ಶಿವನಿಗೇ ಶಾಪ ಕೊಡಲು ಉದ್ಯುಕ್ತನಾಗುತ್ತಾನೆ. ಆಗ ಶಿವ ಪ್ರತ್ಯಕ್ಷನಾಗಿ ದೂರ್ವಾಸನಿಗೆ ಜ್ಞಾನವನ್ನು ನೀಡಿ ಆಶೀರ್ವದಿಸುತ್ತಾನೆ.

*ಧೂಮ್ರಾಕ್ಷ : (ವೆಂ) :* ಒಬ್ಬ ರಾಕ್ಷಸ. ರಾವಣನ ಮಂತ್ರಿ ಹನುಮಂತನಿಂದ ಹತನಾಗುತ್ತಾನೆ.

*ಪಂಚಕ್ಲೇಶ :* ಐದು ಕ್ಲೇಶಗಳು ಎಂದರೆ ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶಗಳು.

*ಪಂಚಶಕ್ತಿ :* ಪಾರ್ವತಿಯ ಐದು ರೂಪಗಳು ವೈಷ್ಣವಿ, ಬ್ರಾಹ್ಮೀ ಕೌಮಾರಿ, ಮಾಹಾಶ್ವರಿ, ವಾರಾಹಿ ಮತ್ತೆ ಅವಳ ಐದು ಅವತಾರಗಳು ಕಾಳಿ, ಭೈರವಿ, ದುರ್ಗೆ, ಚಂಡಿ, ಚಾಮುಂಡಿ.

*ಪರಾತ್ಪರ ಪ್ರತ್ಯಯ ರಹಿತ ಗುರು :* ಶ್ರೇಷ್ಠರಲ್ಲಿ ಶ್ರೇಷ್ಠನಾದವನು ಪವಿತ್ರನಾದ ವನು. ಅನುಭವಕ್ಕೆ ವೇದ್ಯನಾಗುವ ಗುರು. ಇವನು ಅಖಂಡನಾದವನು. ಪರಿಪೂರ್ಣನಾದವನೂ ಆಗಿದ್ದಾನೆ.

*ಪಾಪವೆಂಟು :* ಬ್ರಹ್ಮಹತ್ಯೆ, ಸ್ವರ್ಣಸ್ತೇಯ, ಸುರಾಪಾನ, ಗುರುತಲ್ಪಗಮನ, ತತ್ಸಹವಾಸ, ಶಿಶುಹತ್ಯೆ, ಗೋಹತ್ಯೆ, ಮಾತೃಹತ್ಯೆ, ಇವು ಎಂಟು ಪಾಪಗಳು.

*ಪುರಮೂರು ಜಯಿಸಿದ : (ವೆಂ) :* ತಾರಕಾಸುರನ ಮಕ್ಕಳಾದ ತಾರಾಕ್ಷ, ಕಮಲಾಕ್ಷ,

ವಿದ್ಯುನ್ಮಾಲಿ ಎಂಬುವವರು ಬ್ರಹ್ಮನ ವರಪಡೆದು ಭೂಮಿಯಲ್ಲಿ ಕಬ್ಬಿಣದ ಪುರ. ಅಂತರಿಕ್ಷದಲ್ಲಿ ಬೆಳ್ಳಿಯ ಪುರ. ಅದರ ಮೇಲ್ಭಾಗದಲ್ಲಿ ಸುವರ್ಣಪುರಗಳನ್ನು ನಿರ್ಮಿಸಿಕೊಂಡು ದಾರಿ ತಪ್ಪಿ ನಡೆಯುತ್ತಾರೆ. ಪರಮೇಶ್ವರನು ಒಂದು ಬಾಣಕ್ಕೆ ದೇವತೆಗಳನ್ನು ಆಹ್ವಾನಿಸಿ ಈ ಮೂರು ಪುರಗಳನ್ನು ಒಂದೇ ಸಲಕ್ಕೆ ಸುಟ್ಟು ಹಾಕುತ್ತಾನೆ.

*ಪುಲಕ : (ವೆಂ) :* ಒಬ್ಬ ದೈತ್ಯ. ಮೃಗ ರೂಪ ಧರಿಸಿ ತಪಸ್ಸು ಮಾಡಿ ಪರಿಮಳ ಭರಿತ ದೇಹವನ್ನು ಪಡೆದಿದ್ದನು ಇದರಿಂದ ದೇವತಾ ಸ್ತ್ರೀಯರು ವ್ಯಾಮೋಹಿತ ರಾದರು. ದೇವತೆಗಳು ಶಿವನನ್ನು ಮೊರೆ ಹೊಕ್ಕರು. ಶಿವನು ದೇಹತ್ಯಾಗ ಮಾಡು ಎನ್ನಲು ನೀನೂ ನಿನ್ನ ಅರ್ಧಾಂಗಿಯು ನನ್ನ ದೇಹದ ಕಂಪನ್ನು ಧರಿಸಬೇಕು ಮತ್ತು ಲೋಕವೆಲ್ಲಾ ಇದನ್ನು ಮೃಗಮದವೆಂದು ಕೊಂಡಾಡಬೇಕು ಎನ್ನಲು ಶಿವನು ಒಪ್ಪಿಕೊಂಡನು. ಆಗ ಪುಲಕ ದೇಹತ್ಯಾಗ ಮಾಡಿದನು.

*ಬೋಧವೇ ಆತ್ಮಬೋಧ :* ಆತ್ಮನನ್ನು ಕುರಿತು ತಿಳಿಯುವುದು ಇದು ಜ್ಞಾನಿಗಳಿಗೆ ಮಾತ್ರ ಸಾಧ್ಯ. ಬ್ರಹ್ಮ ತುರೀಯಾತೀತ : ಬ್ರಹ್ಮನನ್ನು ಅನುಭವ ಮಾಡಿಕೊಂಡ ನಂತರ ಯೋಗಿಗಳು ಪರಮಾತ್ಮನಲ್ಲಿ ಐಕ್ಯವಾಗಿ ಮೋಕ್ಷ ಪಡೆಯುತ್ತಾರೆ. ಇದು ಆನಂದದ ಚರಮ ಸ್ಥಿತಿ.

*ಬ್ರಹ್ಮರಂಧ್ರ ನೆತ್ತಿಯಲ್ಲಿರುವ ರಂಧ್ರ :* ಈ ಸ್ಥಳದಲ್ಲಿ ಮನಸ್ಸನ್ನು ಏಕಾಗ್ರ ಗೊಳಿಸಿದರೆ ಆನಂದ ದೊರೆಯುತ್ತದೆ.

*ಬ್ರಾಹ್ಮಣನಾದರೆ ಬ್ರಹ್ಮ ಸರ್ವಸ್ವ :* ಬ್ರಹ್ಮಜ್ಞಾನವನ್ನು ಅರಿತವನೇ ಬ್ರಾಹ್ಮಣ. ಇದು ಜಾತಿವಾಚಕವಲ್ಲ ಗುಣವಾಚಕ. ಬ್ರಹ್ಮನನ್ನು ಅರಿತು ತಾನೇ ಬ್ರಹ್ಮನಾಗುತ್ತಾನೆ.

*ಭಂಗತರ ತರಂಗ ಮೂರ್ತಿ :* ಕಷ್ಟ ಅವಮಾನ, ನಾಶ ಅಪಜಯಗಳಲ್ಲಿ ಸಿಲುಕಿದವರಿಗೆ ಅದನ್ನು ತೆರೆಯಂತೆ ಬಂದು ನಿವಾರಿಸುವವನು ಅಂದರೆ ಶಂಕರ.

*ಭದ್ರಾಯ :* ಓರ್ವ ಶಿವಯೋಗಿ ಶಿವನಿಂದ ವರ ಪಡೆದವನು ಸೀಮಂತಿನೀ – ಚಂದ್ರಾಗದರ ಮಗಳಾದ ಕೀರ್ತಿ ಮಾಲಿನಿಯನ್ನು ವಿವಾಹವಾಗಿದ್ದನು. ಈತನ ತಂದೆ ಚಿತ್ರಬಾಹು ದಶಾರ್ಣವ ದೇಶದ ರಾಜನಾಗಿದ್ದನು.

*ಭ್ರಮೆಯಿಂದ ಎರಡಾಯ್ತು ಇದ್ದುದೊಂದೇ ವಸ್ತು :* ಈ ಶರೀರ ನಾನು ಇದು ನನ್ನದು ಎಂದು ಅದಕ್ಕೆ ಅಂಟಿಕೊಂಡಿರುವ ಜೀವ ನಮ್ಮ ನಿಜವಾದ ಆತ್ಮವಲ್ಲ. ನಿಜವಾದ ಆತ್ಮ ನಿರ್ವಿಕಾರ ಚೈತನ್ಯ. ವಿಶ್ವ ಬ್ರಹ್ಮದಿಂದ ಬೇರೆಯಲ್ಲ ಇವೆರಡೂ ಬೇರೆಯಾಗಿ ಕಾಣುವುದು

ಮಾಯೆಯಿಂದ. ಹಾಗೆಯೇ ಜೀವ ಹಾಗೂ ಬ್ರಹ್ಮರು ಬೇರೆಯಾಗಿ ತೋರುವುದು ಮಾಯೆಯಿಂದ.

*ಮಾರ್ಕಂಡೇಯ :* ಓರ್ವ ಮಹರ್ಷಿ, ಭೃಗು ಮಹರ್ಷಿಯ ಸಂತತಿಯಲ್ಲಿ ಜನಿಸಿದ ಮೃಕಂಡು ಮುನಿಯ ಮಗ, ಶಿವನಿಂದ ದೀರ್ಘಾಯುಷ್ಯವನ್ನು ವರವಾಗಿ ಪಡೆದವನು. ಪಾಂಡವರಿಗೆ ಕಾಮ್ಯಕವನದಲ್ಲಿ ಪುರಾಣ ಹಾಗೂ ಧರ್ಮವನ್ನು ಬೋಧಿಸುತ್ತಾನೆ.

*ರಕ್ತಬೀಜಾಸುರ :* ಒಬ್ಬ ರಾಕ್ಷಸ. ಶುಂಭ ನಿಶುಂಭರೆಂಬ ರಕ್ಕಸರ ಸೋದರಳಿಯ. ಈತನು ತನ್ನ ಒಂದೊಂದು ಹನಿ ರಕ್ತ ನೆಲಕ್ಕೆ ಬಿದ್ದರೆ ತನ್ನಂಥ ವೀರ ರಾಕ್ಷಸ ಹುಟ್ಟಬೇಕೆಂಬ ವರವನ್ನು ಶಿವನಿಂದ ಪಡೆದಿದ್ದ. ಆದಿಶಕ್ತಿಯ ಚಾಮುಂಡಿಯ ನೆರವಿನೊಂದಿಗೆ ಇವನನ್ನು ಕೊಲ್ಲುತ್ತಾನೆ.

*ರೋಮಶ :* (ಲೋಮಶ) ಶ್ವೇತ ದ್ವೀಪದ ಕಲಾಪ ಗ್ರಾಮದಲ್ಲಿ ತಪಸ್ಸು ಮಾಡುತ್ತಿದ್ದ ಒಬ್ಬ ಮಹರ್ಷಿ. ಶಿವನಿಂದ ವರ ಪಡೆದವನು ಅಜರಾಮರತ್ವದ ವರ ಕೊಡದೆ ಶಿವನು- ಚತುರ್ಮುಖನಿಗೆ ಒಂದು ದಿನವಾದಾಗ ನಿನ್ನ ಮೈ ಮೇಲಿನ ಒಂದು ರೋಮ ಉದುರುತ್ತಾ ಪೂರ್ಣರೋಮರಹಿತನಾದಾಗ ಸಾವು ಒದಗಲೆಂದು ಅನುಗ್ರಹಿಸುತ್ತಾನೆ.

*ಶುಂಭ-ನಿಶುಂಭ :* ಇವರೀರ್ವರೂ ಅಣ್ಣ ತಮ್ಮಂದಿರು. ಅಯೋನಿಜೆ ಯಿಂದ ಮರಣ ಉಂಟಾಗಲೆಂದು ಬ್ರಹ್ಮನಿಂದ ವರ ಪಡೆದಿದ್ದರು. ಲೋಕ ಕಂಟಕರಾಗಿದ್ದ ಇವರನ್ನು ಆದಿಶಕ್ತಿಯು ಕೌಶಿಕೆ ಎಂಬುವಳನ್ನು ಸೃಷ್ಟಿಸಿ, ಇವಳೊಡನೆ ರಾಕ್ಷಸರಿರ್ವರಿಗೆ ಕಾಮವುಂಟಾಗುವಂತೆ ಮಾಡಿ ನಂತರ ಯುದ್ಧ ಮಾಡಿ ಕೊಲ್ಲುತ್ತಾಳೆ.

*ಶ್ರೀವತ್ಸ :* ದಿವೋದಾಸನ ಮಗನಾದ ಪ್ರತರ್ದನನ ಮಗ ಪರಶುರಾಮನು ಕ್ಷತ್ರಿಯ ಸಂಹಾರ ಮಾಡಿದಾಗ ಇವನನ್ನು ವತ್ಸ (ಕರು)ಗಳ ನಡುವೆ ಬೆಳಸಿದ್ದರಿಂದ ಇವನಿಗೆ ವತ್ಸನೆಂದೇ ಹೆಸರಾಯಿತು.

*ಶುಕ :* ಒಬ್ಬ ಯೋಗಿ ಶುಕರೂಪದಿಂದ ಬಂದ ಘೃತಾಚಿ ಎಂಬ ಅಪ್ಸರ ಸ್ತ್ರೀಯಿಂದ ಹುಟ್ಟಿದವ, ಗಂಧರ್ವರಿಗೆ ಭಾರತದ ಕಥೆ ಹೇಳುತ್ತಾನೆ, ವ್ಯಾಸರಿಂದ ಭಾಗವತವನ್ನು ತಿಳಿದನು. ಭೃಗು ವಂಶದ ಮಹರ್ಷಿ. ನೈಮಿಷಾರಣ್ಯದಲ್ಲಿ ವಾಸವಾಗಿದ್ದನು. ಸೂತ ಪುರಾಣಿಕರಿಂದ ಪುರಾಣೇತಿಹಾಸಗಳನ್ನು ತಿಳಿದಿದ್ದನು. ಸನಕ, ಸನಂದನ.

*ಸನತ್ಕುಮಾರ, ಸನತ್ಸುಜಾತ :* ಸೃಷ್ಟಿಯ ಆದಿಯಲ್ಲಿದ್ದ ಬ್ರಹ್ಮಮಾನಸ ಪುತ್ರರು. ಇವರು ಸದಾ ಕೌಮಾರಾವಸ್ಥೆಯಲ್ಲೆ ಇರತಕ್ಕವರು. ಜ್ಞಾನಸಂಪನ್ನರು ತಪಸ್ವಿಗಳು

ಈ ಮಹರ್ಷಿಗಳನ್ನು ಜಯ–ವಿಜಯರು ತಡೆದ ತಪ್ಪಿಗೆ ಭೂಲೋಕದಲ್ಲಿ ರಾಕ್ಷಸರಾಗಿ ಹುಟ್ಟುತ್ತಾರೆ.

*ಸಪ್ತಾವರಣ–ಸಪ್ತಭೂಮಿಕೆ :* ಇವು ನರಕದ ಹೆಸರು ಗಳು ಕೌರವ, ತಾನ, ವಿಮೋಹನ, ಕೃಮೀಶ, ಲಾಲಾಭಕ್ಷ ಅದಃ ಶಿರ, ಅವೀಚಿ ಇವು ಸಪ್ತಾವರಣಗಳು. ಮೂರ ಜಲಮಯ, ಮೂರು ಅಗ್ನಿಮಯ, ಪಾತಾಳ, ಪ್ರಾಣಾಗ್ನಿಮಯ ಮೃತ್ತಿಕೆ, ವಾಲುಕೆ, ಲೋಹ, ಕಾಂಸ್ಯ, ತಾಮ್ರ, ರಜತ, ಸುವರ್ಣಮಯದಿಂದ ಕೂಡಿದ್ದು ಸಪ್ತಭೂಮಿಕೆಗಳು.

*ಸಾಧನ ಚತುಷ್ಟಯ :* ಆತ್ಮತತ್ವಕ್ಕೆ ಸಂಬಂಧಿಸಿದವು ಅವೆಂದರೆ ಸಾಧನ, ದರ್ಶನ, ಶ್ರವಣ, ಮನನ, ನಿಧಿಧ್ಯಾಸನ.

*ಸಿರಿಯಾಳ :* ಕಾಂಚೀಪುರದ ಧನಿಕ. ಶಿವಭಕ್ತ, ದಾಸೋಹದಲ್ಲಿ ನಿರತನಾಗಿದ್ದ ಇವರನ್ನು ಶಿವನು ಭೈರಾಗಿಯ ವೇಷದಲ್ಲಿ ಬಂದು ಬಾಲಕನ ಮಾಂಸದ ಊಟ ತನಗೆ ಬೇಕೆನ್ನುತ್ತಾನೆ. ಭೈರಾಗಿಯನ್ನು ತೃಪ್ತಿಪಡಿಸಲು ಮಗ ಚೇಲಾಳನನ್ನು ಕೊಂದು ಅಡಿಗೆ ಮಾಡುತ್ತಾರೆ. ಮಗನನ್ನು ಜೊತೆಯಲ್ಲಿ ಊಟಕ್ಕೆ ಕೂರಿಸಿ ಎನ್ನಲು ಹೆಂಡತಿಯು ರೋದಿಸುತ್ತಾ ಮಗನ ಹೆಸರು ಹಿಡಿದು ಕರೆದಾಗ ಮಗ ಬರುತ್ತಾನೆ. ಶಿವನು ಮಾಯವಾಗಿರುತ್ತಾನೆ.

*ಸುಷುಮ್ನ ಎಂಬ ಸೂಲಂಗಿಯ ಹಾಕಿ :* ದೇಹದ ಪ್ರಮುಖ ನಾಡಿಗಳಲ್ಲಿ ಒಂದು ಇದನ್ನು ಕಬ್ಬಿನ ಹೂವಿಗೆ ಹೋಲಿಸುತ್ತಾರೆ.

*ಹತ್ತನಟ್ಟಿ, ನವವ ಮೆಟ್ಟಿ :* ಕೊಲೆ, ಕಳವು, ಹಾದರ, ಸುಳ್ಳು, ಹಂಗಣಿ (ನೋಯಿಸುವ ಮಾತು), ಪರುಷೋಕ್ತಿ, ದುಷ್ಟತನ, ಭಕ್ತಿ, ಹೀನತೆ ಶೂನ್ಯತೆ, ನಾಸ್ತಿಕತೆ, ಪಾಪಕರ್ಮ, ಈ ಹತ್ತನ್ನು ಇಲ್ಲವಾಗಿಸಿಕೊಳ್ಳುವುದು. ನವ ಎಂಬುದು ನವ ದ್ವಾರಗಳಿಗೆ ಸಂಬಂಧಿಸಿದ್ದು ಅಂದರೆ ಕಣ್ಣು ಕಿವಿಗಳು, ನಾಸಾ ಪುಟ, ಮುಖ, ಗುದ, ಉತಸ್ಥಾನಗಳನ್ನು ಹಿಡಿತದಲ್ಲಿ ಇಟ್ಟುಕೊಳ್ಳುವುದು.

# ಅನುಬಂಧ – ೩

## ಸಂಖ್ಯಾ ಸಂಕೇತಗಳು

ಚಿದಾನಂದ ಅವಧೂತರ ಅನೇಕ ಹಾಡುಗಳಲ್ಲಿ ಸಂಕೇತ–ಸಂಜ್ಞಾರೂಪದ ಅಂಕಿ ಸಂಖ್ಯೆಗಳು ಹಲವಾರು ಬಾರಿ ಬರುತ್ತವೆಯಾದ್ದರಿಂದ ಅವುಗಳ ವಿವಿಧ ಸಂಕೇತಗಳನ್ನು ಇಲ್ಲಿ ಒಂದೆಡೆ ಕೊಟ್ಟಿದೆ ಆ ಸಂದರ್ಭಗಳಿಗೆ ಹೊಂದುವಂತೆ ಅದನ್ನು ನೋಡಿಕೊಳ್ಳುವುದು (ಆಕರ : ಸಂಜ್ಞಾರ್ಥ ತತ್ವಕೋಶ– ಡಿ.ವಿ.ಹೊಳ್ಳ ವಿರಚಿತ)

### ಒಂದು

ಏಕತತ್ವ–ಬ್ರಹ್ಮ

### ಎರಡು

ದ್ವಿವಿಧ ಕಾಲಭೇದ–(ಜೈ) ಉತ್ಸರ್ಪಿಣಿ, ಅವಸರ್ಪಿಣಿ ದ್ವಿವಿಧ ಬುದ್ಧಿ–ಸಂಶಯಾತ್ಮ (ಅಪ್ರಮಾ–ಅವಿದ್ಯೆ) ನಿಶ್ಚಯಾತ್ಮಾ(ಪ್ರಮಾ) ದ್ವಿವಿಧ ಗತಿ–ಐಹಿಕ, ಆಮುಷ್ಮಿಕ (ಲೋಕ–ಇಹ, ಪರ ಜೀವನಗತಿ–ಸುಖಮಯ, ದುಃಖಮಯ (ಭೋಗ) ಕಾರಣ–ಪುಣ್ಯ, ಪಾಪ, ಸ್ಥಾನ–ಸ್ವರ್ಗ, ನರಕ

ದ್ವಿವಿಧ ದುಃಖ–ಆಧಿ (ಮಾನಸಿಕ), ವ್ಯಾಧಿ (ಶಾರೀರಕ) ದ್ವಿವಿಧ ಧರ್ಮ–ಸ್ವಧರ್ಮ, ಪರಮಧರ್ಮ (ವಿಧರ್ಮ) ಶಕ್ತಿ ದೃಶ್ ಶಕ್ತಿ–ದರ್ಶನ, ಶ್ರವಣ, ಮನನ, ವಿಜ್ಞಾನ, ಸರ್ವಜ್ಞತ್ವ

ದ್ವಿವಿಧ ಪುರುಷಾರ್ಥ–(ಶೈ) ೧. ಅನಾತ್ಮಕ, ೨. ನಾತ್ಮಕ ೧. ದುಃಖಾಂತ–ದೃಕ್ ಶಕ್ತಿ, ಕ್ರಿಯಾ ದ್ವಿವಿಧ ಪ್ರಮೇಯ–ಭಾವ, ಅಭಾವ (ಭಾವ–ಚೇತನದಾಯಕ) ದ್ವಿವಿಧ ಪ್ರತ್ಯಕ್–ಜೀವ, ಈಶ್ವರ.

ಕಿಶೋರ ಭಕ್ತಿ ದ್ವಿವಿಧ ಭಕ್ತಿ–ಸಾಧನ ಭಕ್ತಿ, ಫಲ ಭಕ್ತಿ (ಮರ್ಕಟ ಕಿಶೋರ ಭಕ್ತಿ, ಮಾರ್ಜಾಲ)

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ
ಹರಿದಾಸ ಸಾಹಿತ್ಯ ಒಂದು ಪ್ರಮುಖ ಮಜಲು.
ಹರಿದಾಸರು ರಚಿಸಿರುವ ವಿಪುಲ ಕೀರ್ತನೆಗಳು
ಕರ್ನಾಟಕ ಸಾಂಸ್ಕೃತಿಕ ತವನಿಧಿಗಳಾಗಿವೆ.
ದಾಸ ಸಾಹಿತ್ಯದಲ್ಲಿ ಕಂಡುಬರುವ
ಭಾಷಿಕ ಹಾಗೂ ಸಾಹಿತ್ಯಕ ಸೊಬಗು,
ಆಧ್ಯಾತ್ಮಿಕ ಬೆಡಗು, ಸಂಗೀತದ ಮೆರುಗು ಅನನ್ಯ.
ದಾಸ ಸಾಹಿತ್ಯವು ಜ್ಞಾನ, ಮನೋಲ್ಲಾಸ
ಮತ್ತು ಜೀವ ಸಂಸ್ಕಾರಗಳ ತ್ರಿವೇಣಿ ಸಂಗಮ.
ಇಂಥ ದಾಸ ಸಾಹಿತ್ಯವನ್ನು
ಸಮಗ್ರವಾಗಿ ಸಂಗ್ರಹಿಸಿ, ಸಂಪಾದಿಸಿ,
ಬಹುಮಾಧ್ಯಮದಲ್ಲಿ ಹಾಗೂ ಸುಲಭ ಬೆಲೆಯಲ್ಲಿ
ಕನ್ನಡ ಜನತೆಗೆ ನೀಡುವ ಮಹತ್ವದ ಆಶಯವೇ
**ಸಮಗ್ರ ದಾಸ ಸಾಹಿತ್ಯ ಯೋಜನೆ**



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು